# ಉತ್ಕಲ ವಿಜಯ

(ವಿದ್ಯಾನಗರದ ಶ್ರೀಕೃಷ್ಣದೇವರಾಯ)

ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್
ಇವರ ಮುನ್ನುಡಿಯೊಡನೆ.

ಗ್ರಂಥಕರ್ತರು.
ವಿದ್ವಾನ್ ಹೊಸಬೆಟ್ಟು ರಾಮರಾವ್, ಎಂ.ಎ.. ಎಲ್.ಟಿ.

ಸತ್ಯಶೋಧನ ಪ್ರಕಟನ ಮಂದಿರ,
ಕೋಟೆ, ಬೆಂಗಳೂರು ನಗರ.



ದಿವಾನ್ ಬಹದ್ದೂರ್
**ಎಸ್. ಇ. ರಂಗನಾಥನ್, ಎಂ.ಎ., ಅವರು.**

# ಅರ್ಪಣೆ

---

ನನ್ನ ಪರಮಪೂಜ್ಯ ಗುರುಗಳೂ,

ಮದ್ರಾಸು ಯೂನಿವರ್ಸಿಟಿಯ ವೈಸ್ ಛಾನ್ಸಲರೂ ಆದ

ಮಹಾರಾಜಮಾನ್ಯ ರಾಜಶ್ರೀ

ದಿವಾನ್ ಬಹದೂರ್ **ಎಸ್. ಇ. ರಂಗನಾಥನ್** ಎಂ.ಎ.,

ಅವರುಗಳಿಗೆ

ಪ್ರಿಯ ಶಿಷ್ಯ,

**ಹೊಸಬೆಟ್ಟು ರಾಮರಾವ್.**

# ಅಭಿಪ್ರಾಯ

ಮೈಸೂರು ಆಸ್ಥಾನವಿದ್ವಾನ್ **ವೈ. ನಾಗೇಶಶಾಸ್ತ್ರಿ,** ಸರ್ವದರ್ಶನ ತೀರ್ಥ, ವಿದ್ವಾನ್, ಕರ್ನಾಟಕ ಸಂಸ್ಕೃತ ಪ್ರೊಫೆಸರ್, ಲಿಂಗರಾಜ ಕಾಲೇಜು, ಬೆಳಗಾಂ. ಇವರಿಂದ—

ಶ್ರೀಯುತರಾದ-ವಿದ್ವಾನ್ ರಾಮರಾಯರು ಎಂ.ಎ.,ಎಲ್.ಟಿ., ಇವರ "ಉತ್ಕಲ ವಿಜಯ"ವೆಂಬ ಗ್ರಂಥವನ್ನು ಓದಿ, ನಾನು ಅಧಿಕ ಸಂತೋಷಪಟ್ಟೆನು. ಈ ಗ್ರಂಥನಾಯಕನಾದ ಶ್ರೀಕೃಷ್ಣದೇವರಾಯನ ಶೌರ್ಯೌದಾರ್ಯಾದಿ ಗುಣಗಳೂ, ಆ ರಾಯನಿಂದಾದ, ವಿಜಯ ನಗರಾಭ್ಯುದಯವೂ ಹೃದಯಂಗಮವಾಗಿ ವರ್ಣಿತವಾಗಿವೆ. ಈ ಗ್ರಂಥವು ಐತಿಹಾಸಿಕ ಕಾದಂಬರಿಯಾದುದರಿಂದ ಇದರಲ್ಲಿ ಇತಿಹಾಸದ ಮುಖ್ಯಭಾಗಗಳು ಓದುಗರ ಮನಸ್ಸಿನಲ್ಲಿ ಚಿರವಾಗಿ ನಿಲ್ಲುವಂತೆ ರಚಿತವಾಗಿರುವುದಲ್ಲದೆ, ಅಲ್ಲಲ್ಲಿ ಕಾದಂಬರಿಯ ಪದ್ಧತಿಗನುಸರಿಸಿದ ಸಮಯೋಚಿತ ಕಾಲ್ಪನಿಕ ಸನ್ನಿವೇಶಗಳೂ ಸರಸವಾಗಿ ಚಿತ್ರಿತವಾಗಿವೆ. ರಚನಾಕ್ರಮದಲ್ಲಿ ಲೇಖಕರ ಜಾಗ್ರತೆಯು ಪರಿಸ್ಥಿತಿಯ ಆಳವನ್ನು ಮುಟ್ಟಿರುವುದು. ಚರಿತ್ರದ ಘಟನೆಗಳಲ್ಲಿ ಕಂಡುಬರುವ ಆಂಧ್ರಕರ್ನಾಟಕರ ಮತ್ತು ಹಿಂದೂ ಮುಸಲ್ಮಾನರ ಐಕ್ಯಭಾವದ ಪಾತ್ರಸೃಷ್ಟಿಯು ಈಗಿನ ಪರಿಸ್ಥಿತಿಗೆ ಎಷ್ಟು ಸಮರ್ಪಕವಾಗಿರುವುದೆಂಬುದನ್ನು ಓದುಗರು ಮರೆಯುವಂತಿಲ್ಲ. ಶೈಲಿಯು ವಾಕ್ಯದ ಮಧುರತೆಯಿಂದಲೂ, ಗಾಂಭೀರ್ಯದಿಂದಲೂ ಕೂಡಿ ವರ್ಣನಾಂಶವನ್ನು ಹೊಂದಿದೆ, ವಾಚಕರ ಹೃದಯಾಕರ್ಷಕವಾಗಿರುವುದು.

ಗ್ರಂಥಕರ್ತೃಗಳು ಆಂಗ್ಲಭಾಷೆಯಲ್ಲಿ ಎಂ. ಎ. ಪದವಿಯನ್ನು ಪಡೆದಿದ್ದರೂ ಇತ್ತೀಚೆಗೆ ಮದ್ರಾಸು ವಿಶ್ವವಿದ್ಯಾಲಯದ 'ವಿದ್ವಾನ್'ಎಂಬ ಪದವಿಯನ್ನೂ ಪಡೆದು, ಕರ್ನಾಟಕ ವಾಗ್ದೇವಿಯ ಸೇವೆಗೆ ತೊಡಗಿರುವುದು, ಸರ್ವಕನ್ನಡಿಗರಿಗೆ-ಅದರಲ್ಲಿಯೂ ಮುಖ್ಯವಾಗಿ ವಿಜಯನಗರ ಪ್ರಾಂತದ ಕನ್ನಡಿಗರಿಗೆ ಅಭಿನಂದನೀಯವಾಗಿರುವುದು. ಇವರ ಈ ವಿಧದ ಉದಾರಭಾವದ ಲೇಖನಸೇವೆಗೆ ಸರ್ವರೂ ಸಹಾಯವನ್ನಿತ್ತು, ಇವರನ್ನು ಪ್ರೋತ್ಸಾಹಿಸುವುದು ಆವಶ್ಯವಾಗಿದೆ.

೬—೧೨—೧೯೩೭. **ವೈ. ನಾಗೇಶ ಶಾಸ್ತ್ರಿ.**



ವಿದ್ವಾನ್ ಹೊಸಬೆಟ್ಟು ರಾಮರಾವ್, ಎಂ.ಎ., ಎಲ್.ಟಿ.,
ಗ್ರಂಥಕರ್ತರು.

# ಪ್ರಸ್ತಾವನೆ

"ಉತ್ಕಲ ವಿಜಯ"ವೆಂಬ ಚಾರಿತ್ರಿಕ ಕಾದಂಬರಿಯೊಂದನ್ನು ಬರೆಯಬೇಕೆಂಬ ಆಲೋಚನೆ ಹುಟ್ಟಿದ್ದು ಹಂಪಿಯಲ್ಲಿ. 1936ನೆಯ ಇಸವಿ ಡಿಸೆಂಬರ್ ತಿಂಗಳಲ್ಲಿ ಹೊಸಪೇಟೆಯ ಹತ್ತಿರದ, ಹಂಪಿಯ ಪಂಪಾಪತಿ ಗುಡಿಯ ಪೇಟೆಯಲ್ಲಿ ಜರುಗಿದ, "ವಿದ್ಯಾನಗರ ಸ್ಮಾರಕೋತ್ಸವ" ಸಮಾರಂಭ ಕಾಲದಲ್ಲಿ, ಸ್ಕೌಟು ದಳಗಳ ಮುಖ್ಯಾಧಿಕಾರಿಯಾಗಿ, ಪಂಪಾಯಾತ್ರಿಕರ ಸೇವಾಕಾರ್ಯದಲ್ಲಿದ್ದಾಗ, ಈ ಮಹಾ ಕರ್ಣಾಟಕ ರಾಜರ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು, ಕಾದಂಬರಿಯೊಂದನ್ನು ರಚಿಸಬೇಕೆಂದು ಆಲೋಚಿಸುತ್ತಿದ್ದ ನನಗೆ, ಅಲ್ಲಿಗೆ ದಯಮಾಡಿಸಿದ್ದ ಹಲವು ಸ್ನೇಹಿತ ಮಹನೀಯರು ಉತ್ಸಾಹಭರಿತವಾದ ವಚನಗಳನ್ನು ನುಡಿದರು.

ಅಲ್ಲದೆ ಆ ಮಹೋತ್ಸವ ಕಾಲದಲ್ಲಿ ಹೊಸಪೇಟೆಯ ಟ್ರೈನಿಂಗ್ ಕಾಲೇಜು ಸ್ಕೌಟ್ ದಳದವರು "ಶ್ರೀಕೃಷ್ಣದೇವರಾಯ ವಿಜಯ"ವೆಂಬ ನನ್ನ ನಾಟಕವೊಂದನ್ನು ಅಭಿನಯಿಸಿದ್ದರು. ಹೈಯರ್ ಗ್ರೇಡ್ ಟ್ರೈನಿಂಗ್ ಶಾಲಾ ವಿದ್ಯಾರ್ಥಿಗಳ 1939ನೇ ಇಸವಿಯ ಪರೀಕ್ಷೆಗಾಗಿ ನಿಯಮಿಸಿದ ಪಠ್ಯ ಪುಸ್ತಕದಲ್ಲಿ ಈ ನಾಟಕವು ಉದ್ಧೃತವಾಗಿದೆ.

ಆ ನಾಟಕವನ್ನೇ ಮುಖ್ಯಾಧಾರವಾಗಿಟ್ಟುಕೊಂಡರೂ, "ಉತ್ಕಲ ವಿಜಯ"ವೆಂಬ ಈ ಕಾದಂಬರಿಯನ್ನು ರಚಿಸುವಾಗ, ಆ ನಾಮಕ್ಕನುಕೂಲವಾಗುವಂತೆ ಸಂದರ್ಭಾನುಸಾರ, ಹಲವು ರೀತಿಯ ವ್ಯತ್ಯಾಸಗಳನ್ನು ಮಾಡಬೇಕಾಯಿತು.

ಕರ್ಣಾಟಕ, ಆಂಧ್ರ, ಮುಸಲ್ಮಾನ್ ಇವರೊಳಗೆ ಸ್ನೇಹವು ಬೆಳೆಯುತ್ತಿರಬೇಕೆಂಬ ಧ್ಯೇಯವನ್ನು ಮುಂದಿರಿಸಿಕೊಂಡುದರಿಂದಲೂ, ಕೆಲವು ವ್ಯತ್ಯಾಸಗಳನ್ನು ಮಾಡಬೇಕಾಯಿತು. ಶ್ರೀಕೃಷ್ಣದೇವರಾಯನ ಚರಿತ್ರೆ

ಯನ್ನು ತಿಳಿದ ಇಂದಿನ ಕನ್ನಡಿಗರು ಈ ವ್ಯತ್ಯಾಸಗಳನ್ನು ಸುಲಭವಾಗಿ ಗೊತ್ತುಹಿಡಿಯುವರು. ಅವುಗಳು ಈ ಕಾದಂಬರಿಯ ರಚನೆಗೆ ಆವಶ್ಯಕವಾದುವುಗಳೆಂದೂ ತಿಳಿಯುವರು.

"ವಿದ್ಯಾನಗರ ಕನ್ನಡ ಸಾಹಿತ್ಯ ಸಮಿತಿ"ಯ ವಿಶೇಷ ಸಭೆಯೊಂದು, 1937ನೆಯ ಇಸವಿ ಸೆಪ್ಟೆಂಬರ್ ತಿಂಗಳ 5ನೆಯ ತಾರೀಖಿನಲ್ಲಿ, ಹೊಸಪೇಟೆಯ ವಯೋವೃದ್ಧರೂ, ಜ್ಞಾನವೃದ್ಧರೂ, ಮತ್ತು ವಿದ್ಯಾರಣ್ಯ ನಾಟಕಾದಿ ಗ್ರಂಥಕರ್ತರೂ ಆಗಿ ಪ್ರಸಿದ್ಧಿಯನ್ನು ಪಡೆದಿರುವ ರಾವ್‌ಬಹದ್ದೂರ್ ಸಿ. ಹನುಮಂತಗೌಡರ ಅಧ್ಯಕ್ಷತೆಯಲ್ಲಿ ನೆರೆದ ಸುಮುಹೂರ್ತದಲ್ಲಿ, ಕನ್ನಡಿಗರ ಇದಿರು ಈ ಗ್ರಂಥವನ್ನು ಮೊದಲು ಓದಲಾಯಿತು. ಆ ಸಂದರ್ಭದಲ್ಲಿ ಶ್ರೀಮಾನ್ ಗೌಡರು ಹೀಗೆ ಅಭಿಪ್ರಾಯಪಟ್ಟು, ಇದನ್ನು ಅಚ್ಚುಹಾಕಿಸಲು ಪ್ರೋತ್ಸಾಹಿಸಿದರು. "ಈ ಉತ್ಕಲ ವಿಜಯವೆಂಬ ಗ್ರಂಥವು ಇತಿಹಾಸರೂಪವಾಗಿದ್ದರೂ, ಕಾದಂಬರಿಯಂತೆ ಚಮತ್ಕಾರವಾಗಿ ವರ್ಣಿಸಲ್ಪಟ್ಟಿದೆ. ಶ್ರೀಕೃಷ್ಣದೇವರಾಯನ ಅದ್ಭುತ ಸಾಹಸ, ಧೈರ್ಯ, ಶೌರ್ಯಾದಿಗಳೂ, ರಾಜತಂತ್ರ ನೈಪುಣ್ಯತೆಯೂ ಕರ್ನಾಟಕಾಂಧ್ರೈಕಮತ್ಯಕ್ಕೆ ಆತನು ಯಾವ ರೀತಿ ಪ್ರಯತ್ನಪಟ್ಟಿರುವನೆಂಬುದೂ ಮನೋರಂಜಕವಾಗಿ ಇದರಲ್ಲಿ ಉಲ್ಲೇಖಿಸಲ್ಪಟ್ಟಿದೆ. ಕರ್ಣಾಟಕರೂ ಆಂಧ್ರರೂ ಈ ಗ್ರಂಥವನ್ನು ಓದುವುದರಿಂದ ಐಕಮತ್ಯಪಾಠವನ್ನು ಕಲಿಯಬಹುದು............ಇಂತಹ ಸಂದರ್ಭವನ್ನು ಕಲ್ಪಿಸಿಕೊಟ್ಟುದಕ್ಕಾಗಿ ಈ ಗ್ರಂಥಕರ್ತರು ಕರ್ಣಾಟಕಾಂಧ್ರೀಯರ ಕೃತಜ್ಞತೆಗೆ ಪಾತ್ರರಾಗಿರುವರು."

1937ನೆಯ ಸೆಪ್ಟಂಬರ್ 25ನೇ ತಾರೀಖಿನಲ್ಲಿ ಬೆಂಗಳೂರಿನ ಸುಪ್ರಸಿದ್ಧ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ಎಂ.ಎ.ಬಿ.ಎಲ್. ಈ ಮಹನೀಯರು ಈ ಕಾದಂಬರಿಯನ್ನು ಓದಿ ನೋಡಿದಮೇಲೆ, ಸಂತೋಷಪಟ್ಟು, ತಾವು ಮುನ್ನುಡಿಯೊಂದನ್ನು ಬರೆದುಕೊಟ್ಟು, ಮಾಡಿದ ಮಹೋಪಕಾರಕ್ಕಾಗಿ ನಾನು 'ಶ್ರೀ' ಯವರನ್ನು ಮನಃಪೂರ್ವಕವಾಗಿ ವಂದಿಸುತ್ತೇನೆ.

1937ನೆಯ ಅಕ್ಟೋಬರ್ ತಿಂಗಳ 8ನೆಯ ತಾರೀಖಿನಲ್ಲಿ ಈ ಗ್ರಂಥಪಠನವನ್ನು ಕೇಳಿದಮೇಲೆ ನನ್ನ ಪರಮ ಪೂಜ್ಯ ಗುರುಗಳೂ, ಹಾಗೂ,

ಮದ್ರಾಸು ಯೂನಿವರ್ಸಿಟಿಯ ವೈಸ್ ಛಾನ್ಸಲರೂ ಆದ ಮಹಾರಾಜಶ್ರೀ ದಿವಾನ್ ಬಹದ್ದೂರ್ ಎಸ್. ಇ. ರಂಗನಾಥನ್ ಎಂ.ಎ. ಈ ಮಹನೀಯರು ಈ ಶಿಷ್ಯನಮೇಲಿನ ಪ್ರೀತಿಯಿಂದಲೂ, ಶ್ರೀಕೃಷ್ಣದೇವರಾಯನ ಮಹಿಮೆಯಿಂದಲೂ, ಕನ್ನಡ ಭಾಷೆಯ ಮೇಲಿನ ಪ್ರೇಮದಿಂದಲೂ, ಗ್ರಂಥ ಸ್ವೀಕಾರಕ್ಕೆ ಅಪ್ಪಣೆಯನ್ನು ದಯಪಾಲಿಸಿದುದಕ್ಕಾಗಿ ನಾನು ಚಿರಋಣಿಯಾಗಿರುವೆನು.

ಇನ್ನು ಈ ಗ್ರಂಥವನ್ನು ಶೀಘ್ರದಲ್ಲಿಯೇ ಸುಂದರಾಕಾರವಾಗಿ ಅಚ್ಚು ಹಾಕಿಸಿ, ಪ್ರಕಟಿಸಿದುದರಿಂದ, ಬೆಂಗಳೂರಿನ ಸುಬೋಧ ಮುದ್ರಾಶಾಲೆಯ ಮತ್ತು ಸತ್ಯಶೋಧನ ಪುಸ್ತಕ ಭಾಂಡಾರದ ಯಜಮಾನರಿಗೂ ನಾನು ವಂದನೆಯನ್ನು ಅರ್ಪಿಸುತ್ತೇನೆ.

ಕನ್ನಡಾಭಿಮಾನಿಗಳ ಅಡಿಯಾಳು,

ಹೆಡ್ಮಾಸ್ಟರ್,
ಗೌರ್ನಮೆಂಟ್ ಟ್ರೈನಿಂಗ್ ಸ್ಕೂಲ್,
ಹೊಸಪೇಟೆ.

**ಹೊಸಬೆಟ್ಟು ರಾಮರಾವ್,**
ಗ್ರಂಥಕರ್ತ.

# ವಿಷಯ ಸೂಚಿಕೆ



ವಿದ್ಯಾನಗರದ ಶ್ರೀ ಕೃಷ್ಣದೇವರಾಯ.

# ಉತ್ಕಲ ವಿಜಯ

(ವಿದ್ಯಾನಗರದ ಶ್ರೀಕೃಷ್ಣದೇವರಾಯ)



೧

## ಪತ್ರಸಂಧಾನ

ಕೊಂಡವೀಡು,
ಆಷಾಢ-ಶುಕ್ಲ-ತ್ರಯೋದಶಿ

ಸ್ವಸ್ತಿ ಶ್ರೀಮದುತ್ಕಲದೇಶಾಧೀಶ್ವರ ಮಹಾರಾಜಾ ಪ್ರತಾಪರುದ್ರ ಗಜಪತಿಸಾರ್ವಭೌಮರವರ ಸನ್ನಿಧಾನಕ್ಕೆ:—

ಶ್ರೀಮದ್ವಿದ್ಯಾನಗರ ಕರ್ನಾಟಕ ಸಿಂಹಾಸನಾಧೀಶ್ವರ ಮಹಾರಾಜಾಧಿರಾಜ ಶ್ರೀಕೃಷ್ಣದೇವಸಾರ್ವಭೌಮನು ಅನೇಕ ವಂದನಾಪೂರ್ವಕವಾಗಿ ಬರೆದು ಕಳುಹಿಸಿದ ಈ ಪತ್ರಸಂಧಾನವೇನೆಂದರೆ:—

ಪೌರುಷಪ್ರಧಾನರಾದ ಕ್ಷತ್ರಿಯವಂಶಜರಿಗೆ ಯುದ್ಧವೆಂಬುದು ಸನಾತನಾಚಾರವೂ, ನೀತಿಶಾಸ್ತ್ರಸಮ್ಮತವಾದ ಕರ್ಮವೂ ಆಗಿದೆ. ಅಲ್ಲದೆ, ಯುದ್ಧ ಮೂಲಕವಾಗಿ ವಿವಾಹಮಾಡಿಕೊಳ್ಳುವುದಾದರೂ ಕ್ಷತ್ರಿಯರಿಗೇನೂ ಹೊಸದಲ್ಲ; ಅದೊಂದು ಭೂಷಣವೇ! ಮತ್ತು, "ಅಸಂತುಷ್ಟಾ ದ್ವಿಜಾನಷ್ಟಾಃ ಸಂತುಷ್ಟಾ ಇವ ಪಾರ್ಥಿವಾಃ'' ಎಂಬ ನ್ಯಾಯಸೂಕ್ತಿಯಂತೆ ನಾನು ದೇಶವೃದ್ಧ್ಯರ್ಥವಾಗಿಯೂ, ಕರ್ನಾಟಕಾಂಧ್ರೈಕ್ಯಕಮಾತ್ರಕ್ಕಾಗಿಯೂ ತಮ್ಮೊಡನೆ ಯುದ್ಧವನ್ನು ಹೂಡಿದೆನು. ನೀವೂ ನಾವೂ ಧರ್ಮದ ಎಲ್ಲೆಯನ್ನು ಮೀರದೆ, ಯಥಾಶಕ್ತಿ ಈವರೆಗೆ ಹೋರಾಡಿದೆವು. ನಿಮ್ಮ ದೇಶದ ಪ್ರಧಾನ ಮಂಡಲವಾದ ಉದಯಗಿರಿ ಮಹಾದುರ್ಗವು ನಿಮ್ಮ ಪ್ರಚಂಡ ಸಾಹಸಕ್ಕೂ

ನಿಲ್ಲದೆ ನಮ್ಮ ಕೈವಶವಾಗಿ ಹೋಯಿತು. ಆ ಯುದ್ಧ ಸಮಯದಲ್ಲಿ ನೀವು ಕಳ್ಳತನದಿಂದ ತಪ್ಪಿಸಿಕೊಂಡು ಹೋಗಬೇಕಾದ ಪ್ರಸಂಗವು ಬಂದುದನ್ನು ನೀವು ಎಂದಿಗೂ ಮರೆಯಲಾರಿರಿ. ಆ ಅಪಜಯದಿಂದಾದರೂ ನೀವು ನಮ್ಮ ಇಚ್ಛೆಯನ್ನು ನೆರವೇರಿಸುವಿರೆಂದು ನಂಬಿ, ನಾವು ನಿಮ್ಮ ಕಡೆಗೆ ರಾಯಭಾರಿಯನ್ನು ಕಳುಹಿಸಿದೆವು. ಪವಿತ್ರವಾದ ಉದ್ದೇಶದಿಂದ ಕೂಡಿದ ನಮ್ಮ ಕೋರಿಕೆಯನ್ನು, ನೀವಾವರೋ, ಸಲ್ಲಿಸುವುವಂತೂ ಹಾಗಿರಲಿ; ನಮ್ಮನ್ನು ನೀವು ಬಾಯಿಗೆ ಬಂದಂತೆ ನಿಂದಿಸೋಣಾಯಿತು. ಮಾಡುವುದೇನು? ಆ ಸಿಂದನೆಯೇ ಈಗ ನಿಮ್ಮ ಸ್ವಂತ ಉತ್ಕಲದೇಶದಮೇಲೆ ನಮ್ಮ ದಾಳಿಯನ್ನೆಬ್ಬಿಸಿತು. ನಿಮ್ಮ ದೇಶಕ್ಕೆ ದ್ವಾರದಂತಿದ್ದ ಕೊಂಡವೀಡು ದುರ್ಗವನ್ನು, ಹಾ! ಹಾ!! ಎನ್ನುವಷ್ಟರಲ್ಲಿ, ಕೈಸೇರಿಸಿಕೊಂಡೆವು. ನಿಮ್ಮ ರಾಜ್ಯಸೂತ್ರಚಾಲಕನಾದ ರಾಮಯ ಮಂತ್ರಿ ನಮ್ಮ ಸೆರೆಗೆ ಸಿಕ್ಕಿಬಿಟ್ಟನು. ಇದೇ, ನಮ್ಮ ಉತ್ಕಲ ವಿಜಯದ ಮಂಗಳಾಚರಣೆಯೆಂದು ತಿಳಿಯೋಣಾಗಲಿ! ಇದರಿಂದ, ವಿಜಯಲಕ್ಷ್ಮಿ, ನಮಗೇ ಒಲಿದಿರುವಳೆಂದು, ನಾವೇ ಹೆಮ್ಮೆಯಿಂದ ಹೇಳಿಕೊಳ್ಳುವ ಮಾತಲ್ಲ; ಲೋಕವೇ ಹೇಳುತ್ತಿದೆ. ಇಲ್ಲಿಂದ ಕನ್ಯಾಕುಮಾರಿ ಭೂಶಿರದತನಕವೂ ಹರಡಿರುವ ನಮ್ಮ ದಕ್ಷಿಣದಿಗ್ವಿಜಯ ಭೇರೀನಿನಾದವೇ ಸಾರುತ್ತಿದೆ. ಹೆಚ್ಚೇನು? ನಿಮ್ಮ ಆತ್ಮವೇ ನಿಮಗೆ ಘೋಷಿಸುತ್ತಿರುವುದೆಂದು ದೃಢವಾಗಿ ಹೇಳಬಲ್ಲೆವು. ಆದುದರಿಂದ, ಮುಂದೆಯೂ ನೀವು ಯುದ್ಧವನ್ನೇ ನಿಶ್ಚಯಿಸುವಿರಾದರೆ, ಅದು ವ್ಯರ್ಥವೇ ಸರಿ! ವೃಥಾ ಪ್ರಾಣನಾಶನದಿಂದ ಫಲವೇನು? ಯೋಚಿಸೋಣಾಗಲಿ. ನೀವು ವಯೋವೃದ್ಧ—ಜ್ಞಾನವೃದ್ಧ—ಅನುಭವವೃದ್ಧರಾಗಿರುವಿರೆಂಬುದನ್ನು ಜ್ಞಾಪ್ತಿಯಲ್ಲಿಟ್ಟುಕೊಂಡು, ಪುನಃ ಮೂರನೆಯ ಬಾರಿ ಈ ಪತ್ರಸಂಧಾನ ಮಾಡೋಣಾಗಿದೆ. ಇನ್ನಾದರೂ, ವಿವೇಕದಿಂದ ಪರಾಮರ್ಶಿಸಿ, ದುರಭಿಮಾನ—ದುರ್ಭಾವನೆಗಳನ್ನು ಕಿತ್ತೊಗೆದು, ಯುದ್ಧವನ್ನು ನಿಲ್ಲಿಸೋಣಾಗಲಿ. ನೀವು ನಮ್ಮನ್ನು ಏನೇನೋ ನಿಂದಿಸಿರುವುದನ್ನು ಕೇಳಿ, ನಾವು ಸಿಟ್ಟುಗೊಂಡಿರುವೆವೆಂದು ನೀವು ಸರ್ವಥಾ ತಿಳಿಯಬಾರದು. ದೇಶಕ್ಷೇಮಕರವಾದ ಸಂಧಿಯ ಮಂಗಳಕಾರ್ಯವೇ ನಮ್ಮ ಉದ್ದೇಶವಲ್ಲದೆ, ವೃಥಾ ಶೌರ್ಯಪ್ರದರ್ಶನವು ನಮಗೆ ಬೇಡ. ಆದುದರಿಂದ, ಇನ್ನಾದರೂ ನೀವು, ನಾವು ಮೊದಲೇ ಸೂಚಿಸಿದಂತೆ, ನಿಮ್ಮ

ಕುಮಾರಿ ತಿರುಮಲಾದೇವಿಯನ್ನು ನಮಗೆ ವಿವಾಹಮಾಡಿಕೊಟ್ಟು, ಕರ್ನಾಟಕಾಂಧ್ರೀಯೈಕಮತ್ಯದ ಸಂಬಂಧವನ್ನು ಬೆಳೆಸಲು, ಮನಸ್ಸುಮಾಡುವಿರಾಗಿ ನಂಬಿಕೊಂಡು, ಪ್ರಕೃತ ಮುಂಗುಪರಿವುದನ್ನು ನಿಲ್ಲಿಸಿ, ನಿಮ್ಮ ಉತ್ತರ ನಿರೀಕ್ಷಣೆಮಾಡುತ್ತಾ ವಿರಮಿಸುತ್ತಿದ್ದೇವೆ.

ಇತಿ
ರಾಜಧರ್ಮನಿರತ ವಿದ್ಯಾನಗರದ
"ಶ್ರೀಕೃಷ್ಣದೇವರಾಯ."

ಉತ್ಕಲದೇಶಾಧೀಶನಾದ ಪ್ರತಾಪರುದ್ರ ಗಜಪತಿಯು, ನಿಜಸೌಧಾಂತಃಪುರದೊಳಗೆ, ರತ್ನಗಾದಿಯಮೇಲೆ ಕುಳಿತುಕೊಂಡು, ಮೇಲೆ ಪಕ್ಕಣಿಸಲ್ಪಟ್ಟಿರುವ ಓಲೆಯನ್ನು ಕೈಯಲ್ಲಿ ಹಿಡಿದುಕೊಂಡು ಓದಿದನು. ಓದಿಯಾದಮೇಲೆ, ಆ ಪತ್ರವನ್ನು ನೆಲಕ್ಕೆ ಒಗೆದು, ದಿಗ್ಗನೆದ್ದು, ಕೋಪದಿಂದ, ತನಗೆ ತಾನೇ "ಶ್ರೀಮದ್ವಿದ್ಯಾನಗರ ಕರ್ನಾಟಕ ಸಾರ್ವಭೌಮ!..........." ಅಬ್ಬಬ್ಬಾ! ಇದೆಂತಹ ಗರ್ವ........ಅದೆಷ್ಟು ಮದ?........" ಎಂದುಕೊಂಡು ಅತ್ತಿತ್ತ ತಿರುಗಾಡುತ್ತಾ, ಅವುಡುಗಚ್ಚಿ—"ನೀಚಾ! ಕೃಷ್ಣದೇವ! ನಿನ್ನನ್ನು ಹೀಗೆಯೇ ಮೆಟ್ಟಿ,........" ಎನ್ನುತ್ತಾ, ಆ ಪತ್ರವನ್ನು ಕಾಲಿನಿಂದ ತುಳಿದನು. ಮತ್ತೆ ಗಾಢ ಚಿಂತಾಕ್ರಾಂತನಾಗಿ, ಹಸ್ತವನ್ನು ಹಿಸುಕುತ್ತಾ, ಅತ್ತಿತ್ತ ತಿರುಗಾಡಿದನು. ಪುನಃ ಆ ಪತ್ರವನ್ನು ಎತ್ತಿಕೊಳ್ಳುವನು; ಅಲ್ಲಲ್ಲಿ ಓದುವನು; ಓದುತ್ತಾ ಕೋಪಾವೇಶದಿಂದ ಟೊಂಕದಲ್ಲಿರುವ ಖಡ್ಗವನ್ನು ಹಿಡಿಹಿಡಿದು ಕುಲುಕುವನು. ಮರಳಿ ಪತ್ರವನ್ನು ನೆಲಕ್ಕೆ ಒಗೆಯುವನು. ಆಮೇಲೆ ತಿರುಗಾಡುವನು. ಹೀಗೆಯೇ ಕೋಪದಿಂದ ಘರ್ಜಿಸುವನು.

## ೨

## ತಂದೆ ಮಗಳು

"ಅಪ್ಪಾ! ಇದೇನು?" ಎಂದು ಮೃದುಮಂಜುಳಸ್ವರದಿಂದ ಪ್ರಶ್ನಿಸುತ್ತಾ, ಭುವನಮೋಹನ ಲಾವಣ್ಯಮಯ ಕಾರುಣ್ಯರಮಣೀಯ ಮೂರ್ತಿಯೊಂದು, ಮಂದಗಮನದಿಂದ, ಆ ಮಂದಿರವನ್ನು ಪ್ರವೇಶಿಸಿತು.

ಪ್ರತಾಪರುದ್ರನು ನಿಂತು, ತಿರುಗಿ ನೋಡಿದನು; ಆದರೆ ಕದಲಲಿಲ್ಲ; ಮಾತಾಡಲೂ ಇಲ್ಲ—ದಯಾರ್ದ್ರ ದೃಷ್ಟಿಯಿಂದ ಎವೆಯಿಕ್ಕದೆ ಆ ರಮಣೀ ಮಣಿಯ ಮುಖವನ್ನು ನೋಡಲಾರಂಭಿಸಿದನು.

"ಇದೇನಪ್ಪಾ? ಏನಾಯಿತಪ್ಪಾ?" ಎಂದು ಪ್ರೀತಿ ತುಂಬಿದ ಸ್ವರ ದಿಂದ ಕೇಳುತ್ತಾ, ತಂದೆಯ ಸಮೀಪಕ್ಕೆ ಬಂದಳು ಆ ಬಾಲೆ.

ಅವಳ ಮುಖಕಮಲವನ್ನು ನೋಡುತಿದ್ದಂತೆ, ಪ್ರತಾಪರುದ್ರನ ನೇತ್ರಾಗ್ರಗಳಿಂದ ಎರಡು ಜಲಬಿಂದುಗಳು ಉರುಳಿಬಿದ್ದುವು. ಅವನು ಗದ್ಗದ ಸ್ವರದಿಂದ—"ಮಗೂ, ತಿರುಮಲಾ!........" ಎನ್ನುವಷ್ಟರಲ್ಲಿ ಕಂಠವು ಬಿಗಿಯಲು, ಪುತ್ರಿಯ ಶಿರವನ್ನು ತನ್ನ ವಿಶಾಲ ವಕ್ಷಸ್ಥಳದಮೇಲೆ ಒತ್ತಿಕೊಂಡು, ಮುಂಗುರುಳುಗಳನ್ನು ತೀಡುತ್ತಾ, ದೀರ್ಘಶ್ವಾಸವನ್ನು ಬಿಟ್ಟು, ದುಃಖವನ್ನು ನುಂಗಿಕೊಂಡನು. ಆದರೂ ಕೊರಳುಬಿಗಿದು ಕೊಂಡಿತ್ತು. ಕಣ್ಣುಗಳು ನೀರು ತುಂಬಿಕೊಂಡಿದ್ದುವು. ಕೆಳಗೆ ಹೊರಳಾ ಡುವ ಪತ್ರವನ್ನು ನೋಡುತ್ತಾ, ತಿರುಮಲಾದೇವಿ ಶುಷ್ಕಸ್ವರದಿಂದ, "ನಡೆದುದೇನು, ಅಪ್ಪಾ?" ಎಂದು ಪುನಃ ಕೇಳಿದಳು. ಪ್ರತಾಪರುದ್ರನು ಉತ್ತರವೀಯಲಿಲ್ಲ. ಪ್ರೇಮಾತಿಶಯದಿಂದ ಪುತ್ರಿಯ ಬೆನ್ನಿನಮೇಲೆ ಕೈಯಾ ಡಿಸಿದನು ಮಾತ್ರ. ಆಗೋ! ತಿರುಮಲಾದೇವಿಯ ಕಣ್ಣಿನಲ್ಲಿಯೂ ನೀರು ತೊಟ್ಟಿಕ್ಕುತ್ತಿದೆ.

ನಡೆದುದೇನೆಂಬುದೆಲ್ಲವೂ ತಿರುಮಲಾದೇವಿಗೆ ಗೊತ್ತೇ ಇದ್ದ ವಿಷಯ. ಈಗ್ಗೆ ಸುಮಾರು ಮೂರು ವರ್ಷಗಳಿಂದಲೂ, ಅವಳೊಬ್ಬಳ ನೆವದಿಂದಾಗಿ, ಪ್ರತಾಪರುದ್ರನು ವಿದ್ಯಾನಗರಾಧೀಶನಾದ ಶ್ರೀ ಕೃಷ್ಣದೇವರಾಯನ ಮಹಾ ಪ್ರತಾಪದಿಂದ ತಾಡಿತನಾಗಲಾರಂಭಿಸಿದ್ದನು. ಕಳಿಂಗೋತ್ಕಲಾಂತರ್ಗತವಾದ ಅವನ ಇಡೀ ಆಂಧ್ರದೇಶವೇ ಈಗ ತತ್ತಳಿಸುತ್ತಿರುವುದಲ್ಲದೆ, ಉದಯಗಿರಿ ಕೊಂಡವೀಡು ಮಹಾದುರ್ಗಗಳೆರಡು ಕೃಷ್ಣದೇವರಾಯನ ಕೈವಶವಾಗಿ ಹೋದುವು. ಇನ್ನೂ ಆ ಕೃಷ್ಣದೇವರಾಯನು ಪ್ರಾತಃ ಸೂರ್ಯನಂತೆ ಉತ್ಕ ಲದಮೇಲೆ ಬಿಸಿ ಏರಿಸುತ್ತಲೇ ಇದ್ದಾನೆ. ಈ ಪರಿಸ್ಥಿತಿ ಎಲ್ಲಾ ತಿರುಮಲಾ ದೇವಿಗೆ ಚೆನ್ನಾಗಿಯೂ ಗೊತ್ತು. ಇದಕ್ಕೆಲ್ಲಾ ತಾನೇ—ತನ್ನ ರೂಪವೇ—

ಮೂಲಕಾರಣವೆಂದೂ, ತನ್ನಿಂದಾಗಿ ತನ್ನ ತಂದೆಯು ಮಹಾ ಸಂಕಟಕ್ಕೊಳಗಾಗಿರುವನೆಂದೂ, ಅವಳು ದೃಢವಾಗಿ ತಿಳಿದುಕೊಂಡಿದ್ದಳು. ಆದರೆ, ಈಗ ಹೊಸದಾಗಿ ಏನಾಯಿತೆಂಬುದು ಮಾತ್ರ ಅವಳಿಗೆ ತಿಳಿಯದಾಗಿದೆ. ನೆಲದ ಮೇಲೆ ಬಿದ್ದಿರುವ ಪತ್ರದಲ್ಲಿ, ಏನೋ ಹೊಸ ವಿಪತ್ತು ಸಮನಿಸಿರಬೇಕಲ್ಲವೇ, ನೋಡೋಣವೆಂದು, ಅವಳು ಬಾಗಿ, ಆ ಪತ್ರವನ್ನು ಎತ್ತಿಕೊಂಡು, ಓದಲಾರಂಭಿಸಿದಳು. ಪ್ರತಾಪರುದ್ರನು ವಿಚಾರ ದೃಷ್ಟಿಯಿಂದ, ಮಗಳ ಮುಖಭಾವ ವ್ಯತ್ಯಾಸವನ್ನು ಪರೀಕ್ಷಿಸುತ್ತಿದ್ದನು. ಓದಿಯಾದಮೇಲೆ, ಪತ್ರವು ಅವಳ ಕೈಯಿಂದ ಜಾರಿ ಕೆಳಗೆ ಬಿದ್ದುಹೋಯಿತು. ನೀರಸನೇತ್ರದಿಂದ ಮುಖವೆತ್ತಿ, ತಂದೆಯ ಮುಖವನ್ನು ನೋಡಿದಳು.

## ೩

## ಸಂತಾಪ

ತಿರುಮಲಾದೇವಿ ಪತ್ರದ ಕಡೆಗೆ ದೃಷ್ಟಿಯನ್ನು ಹೊರಳಿಸಿ, "ಗರ್ವದ ಅತಿರೇಕದಿಂದ ಬರೆದ ಪತ್ರವಿದು" ಎಂದಳು.

ಪ್ರತಾಪರುದ್ರನು ಸಂಯ್ಯಲರಸೂಸಿ—"ಸಂದೇಹವೇನು? ಮೇಲೆ ಮೇಲೆ ದೊರೆತ ವಿಜಯಲಕ್ಷ್ಮಿಯ ನೃತ್ಯ ಪರಂಪರೆಯಿಂದ ಅವನ ಗರ್ವವು ಸುರಾದೇವಿಯ ಮತ್ತಿನಂತೆ ನೆತ್ತಿಗೇರಿಹೋಗಿದೆ. ದೇವೇಂದ್ರನನ್ನು ಬಾಧಿಸುವ ಅಸುರೇಂದ್ರನಂತೆ, ಆ ಕುಲಹೀನನು—ಆ ದಾಸೀಪುತ್ರನು—ಈಗ ಈ ಪರಮ ಪವಿತ್ರವಾದ ಗಜಪತಿವಂಶಕ್ಕೆ ಕೈಯಿಡತೊಡಗಿದನಲ್ಲಾ! ನೀಚರ ಕಾಲ! ಕಾಲಮಹಿಮೆ!" ಎಂದು ಪುನಃ ನಿಟ್ಟುಸಿರುಬಿಡುತ್ತಾ, ನಿಲ್ಲಲಾರದೆ ರನ್ನಗಾದಿಯ ಮೇಲೆ ಕುಳಿತುಬಿಟ್ಟನು. ತಿರುಮಲಾದೇವಿ ಆ ಪತ್ರವನ್ನು ನೋಡುತ್ತಾ—ಒಣಗಿದ ಗಂಟಲಿನಿಂದ—"ಅಪ್ಪಾ! ಅಲ್ಪಳಾದ ನನ್ನೊಬ್ಬಳಿಂದಲ್ಲವೇ ಇಷ್ಟೊಂದು ಅನರ್ಥ! ನಾನು ನನ್ನ ತಾಯಿಯ ಆ ಲೋಕದ ದಾರಿಯನ್ನೇ ಹಿಡಿದುಬಿಟ್ಟರೆ........" "ಹಾ!" ಎಂದು ಪ್ರತಾಪರುದ್ರನು ಕುಮಾರಿಯನ್ನೆಳೆದು, ಅವಳ ಬಾಯಿಯನ್ನು ತನ್ನ ಕೈಯಿಂದ ಮುಚ್ಚಿ, "ಅಭದ್ರವಚನಗಳನ್ನಾಡಬೇಡ ಮಗಳೇ! ನನ್ನ ಕಣ್ಮಣಿ! ನನಗೆ ಮಗಳಾಗಿಯೂ—ಮಗನಾಗಿಯೂ ಇರತಕ್ಕವಳು ನೀನೊಬ್ಬಳೇ ಅಲ್ಲವೇ?

ಮಗೂ! ಇನ್ನು ಮೇಲೆ ಇಂತಹ ಅನಿಷ್ಟವಚನಗಳನ್ನಾಡಿದರೆ.... ನನ್ನಾಣೆ! ಕುಮಾರಿ! ಕೇಳು! ಕುಲಹೀನ,—ಆ ಕೃಷ್ಣದೇವನು ಕೇವಲ ನಿನ್ನೊಬ್ಬಳ ಆಕಾಂಕ್ಷೆಯಿಂದ ಹೀಗೆ ವರ್ತಿಸುವನೆಂದು ತಿಳಿಯಬೇಡ. ಅವನೊಬ್ಬ ದೊಡ್ಡ ದೇಶ ಬಕಮಾರಿ. ಅವನಿಗೆ ಬೇಕಾದ ಮುಖ್ಯವಸ್ತು ನೀನಲ್ಲ; ಸುಭಿಕ್ಷವಾದ ನಮ್ಮ ದೇಶ. ಅವನಿಗೆ ನೀನೊಬ್ಬಳೇ ಮುಖ್ಯಗುರಿಯಾಗಿರುತ್ತಿದ್ದರೆ, ಅವನು ಬಾಣಬಿಟ್ಟಹಾಗೆ ಒಮ್ಮೆಗೇ ಬಂದು, ನಮ್ಮ ರಾಜಧಾನಿಯನ್ನು ಮುತ್ತಬೇಕಾಗಿತ್ತು. ಅದನ್ನೆಸಗದೆ, ಅತ್ತಿತ್ತ ನಮ್ಮ ಅಣ್ಣಯ್ಯನವರ ವಶದಲ್ಲಿದ್ದ ಉದಯಗಿರಿಯನ್ನು ಮುತ್ತಿ, ಅವನ ಪ್ರಿಯಪುತ್ರನನ್ನು ಸೆರೆಹಿಡಿದು ಸಹಾಯಕ್ಕಾಗಿ ಹೋದ ನನ್ನನ್ನೂ ನರಿಮೋಸದಿಂದ ಮುಂದುವರಿಯದಂತೆ ಮಾಡಿ, ಆ ಮಹಾದುರ್ಗವನ್ನೇ ಹಿಡಿದುಬಿಟ್ಟು, ಅಣ್ಣಯ್ಯನವರನ್ನು ಎಲ್ಲಿಯೋ ಕಾಡುಪಾಲಾಗಿ ಮಾಡಿಬಿಟ್ಟ. ಅದೂ ಸಾಲದೆ, ಈಗ ನೋಡು! ಮಹಾ ಮೇಧಾವಿಯಾದ ನಮ್ಮ ರಾಮಯಾಮಾತ್ಯನನ್ನೇ ಮೋಸದಬೋನಿನಲ್ಲಿ ಹಿಡಿದುಬಿಟ್ಟು, ಕೊಂಡವೀಡನ್ನು ನುಂಗಿಬಿಟ್ಟ........ಹಾ! ರಾಮಯಾಮಾತ್ಯಶೇಖರಾ! ನೀನಿಲ್ಲದೆ—ನಿನ್ನ ಮಹಾಮಂತ್ರಶಕ್ತಿ ಇಲ್ಲದೆ—ನನ್ನ ಕೈಗಳೇ ಮುರಿದುಹೋಗಿವೆ. ಅಪ್ರತಿಮಧೀಶಕ್ತಿಧುರೀಣನಾದ, ನಿನ್ನನ್ನೇ ಮೋಸದ ಬಲೆಯಲ್ಲಿ ಸಿಕ್ಕಿಸಿ, ಸೆರೆಹಿಡಿಯಬೇಕಾದರೆ, ಆ ತಿಮ್ಮರಸು ಎಂತಹ ಮಾಯಾಪಿಶಾಚಿಯಾಗಿರಬೇಕು!........" ಎಂದು ಗದ್ಗದವಾದ ಕಂಠವನ್ನು ಸರಿಪಡಿಸಿಕೊಂಡು, ಮತ್ತೆ ಹೇಳಲಾರಂಭಿಸಿದನು, "........ಪ್ರಿಯ ಕುಮಾರಿ! ಆತನು ಬರಿಯ ನಿನ್ನದೊಂದು ನೆವದಿಂದ, ಹೆಬ್ಬಾವಿನಂತೆ ನಮ್ಮ ಒಂದೊಂದೇ ಮಂಡಲವನ್ನು ನುಂಗಲಾರಂಭಿಸಿದ್ದಾನೆ!"

ತಿರುಮಲಾದೇವಿ ಪಶ್ಚಾತ್ತಾಪ ಸ್ವರದಿಂದ, — "ನಾನು ಜನಿಸಬಾರದಿತ್ತು, ಅಪ್ಪಾ!" ಪ್ರತಾಪರುದ್ರನು ಮಗಳ ಗಲ್ಲವನ್ನು ಹಿಡಿದು, — "ಛೀ! ಹಾಗನ್ನಬೇಡಮ್ಮಾ! ನಿನ್ನಿಂದಾಗಿ ಈ ಪ್ರಸಂಗವು ಬಂದುದೇ ಅಲ್ಲವೆಂದೆನಲ್ಲವೇ? ನೀನು ಹುಟ್ಟದಿದ್ದರೂ, ಈ ಪ್ರಸಂಗವು ಹುಟ್ಟಿಯೇ ಹುಟ್ಟುತ್ತಿತ್ತು. ಮಗಳೇ! ಹೇಳಲೇನು? ಇದು ನನ್ನ ಅವಿವೇಕ ಕೃತ್ಯದಿಂದಲೇ ಹುಟ್ಟಿದ ಕುತ್ತ".

"ಅದೇನು—ಅಪ್ಪಾ?"

"ಅದೇನೆಂಬೆಯಾ? ಕೇಳು, ಈ ದಾಸೀಪುತ್ರನು ವಿದ್ಯಾನಗರದ ಪವಿತ್ರ ಸಿಂಹಾಸನವನ್ನು ಏರಿದನೆಂದು ತಿಳಿದಕೂಡಲೇ, ದಂಡೆತ್ತಿಕೊಂಡು ಹೋಗಿ, ಆತನನ್ನು ತುಳಿದೊರಸಬೇಕೆಂದು, ನಮ್ಮ ಸಚಿವಶಿರೋಮಣಿ ರಾಮಯಾಮಾತ್ಯನು ಬೋಧಿಸಿದನು. ಆದರೆ, ಪೂಜ್ಯಪಾದರಾದ ಶ್ರೀ ವಿದ್ಯಾರಣ್ಯ ಯತಿವರ್ಯರಿಂದ ಸ್ಥಾಪಿತವಾಗಿ, ಬಹುಕಾಲ ಸ್ವಾತಂತ್ರ್ಯದಿಂದ ಮೆರೆದು, ಬಾಳಿದ, ವಿದ್ಯಾನಗರ ಪುಣ್ಯಸಂಸ್ಥಾನವನ್ನು ಪಾರತಂತ್ರ್ಯಕ್ಕೀಡು ಮಾಡಿದ ದೋಷಕ್ಕೆ ಭಾಗಿಯಾದೇನಲ್ಲಾ, ಪಾಪ! ಹೋಗಲಿ! ಎಂದು--ಅಂದು ಉಪೇಕ್ಷಿಸಿ ಬಿಟ್ಟುಬಿಟ್ಟೆ; ಅದೇ ಇಂದು ನನಗೆ ಮೂಲವ್ಯಾಧಿಯಾಗಿ ಪರಿಣಮಿಸಿತು. ಹಾವಿನಮರಿ ಪ್ರಪಂಚಕ್ಕೆ ಬರುವಾಗ ಒಂದು ಗೇಣೂ ಕೂಡಾ ಇರುವುದಿಲ್ಲ- ಹಾಗಿದ್ದವನು ಬಳೆದು ಬಲವಾಗಿ ಈಗ ನನ್ನನ್ನೇ ಕಚ್ಚಲಾರಂಭಿಸಿದ್ದಾನೆ............ಹೂಂ! ಗರ್ವ! ವಿಜಯ ಪರಂಪರೆಯಿಂದ ಬಂದ ಗರ್ವ! ಅಬ್ಬಾ! ಎಂತಹ ಕೆಚ್ಚೆದೆಯಿಂದ ಬರೆದಿದ್ದಾನೆ. 'ಕರ್ನಾಟಕ—ಆಂಧ್ರ—ಐಕಮತ್ಯ!—ಪವಿತ್ರವಾದ ಉದ್ದೇಶ!' ಛಿ! ಛೀ!! ತನ್ನ ವಿಜಯ ಪರಂಪರೆಯನ್ನು ನೋಡಿ—ಕೇಳಿ, ನಾವೆಲ್ಲರೂ ಬೆದರಿ, ತಣ್ಣಗಾಗಿದ್ದೇವೆಂದು ತಿಳಿದಿದ್ದಾನೆ. ಮೂರ್ಖ! ವಿಜಯವಂತೆ! ಈವರೆಗಣ ವಿಜಯವೆಲ್ಲಾ ಅವನ ಸ್ವಪೌರುಷದಿಂದ ಬಂದುವೇನು ? ಆ ತೌಳವನಿಗೇನು ಪೌರುಷವಿದೆ ? ಎಂದಿಗೂ ಇಲ್ಲ. ಎಲ್ಲವೂ ಅವನ ಬಲಗೈಯಾದ ನರಿ—ತಿಮ್ಮರಸನ ತಂತ್ರದಿಂದಲೇ ಸಂಭವಿಸಿದ ವಿಜಯ. ಅದನ್ನೇ ಆ ಹೆಡ್ಡ, ದೊಡ್ಡ ಗುಡ್ಡದಂತೆ ಮಾಡಿ, ನಮ್ಮನ್ನು ಗಡಗಡನೆ ನಡುಗಿಸಲಿಕ್ಕೆ ನೋಡುತ್ತಾನೆ. ಅಲ್ಪ! ನನ್ನ ಧಮನಿಗಳಲ್ಲಿ ವೀರ ಧೀರ ಕಪಿಲೇಶ್ವರ ಗಜಪತಿಯ ಬಿಸಿಬಿಸಿ ರಕ್ತವು ಹರಿಯುವವರೆಗೂ, ಆ ತುಳುವಂಶದವನ ಈ ಗೊಡ್ಡು ಬೆದರಿಕೆಗಳೆಲ್ಲಾ ವ್ಯರ್ಥವೇ ಸರಿ. ಪ್ರಾಣಹೋಗುವವರೆಗೂ ಈ ಉತ್ಕಲೇಶನ ರಕ್ತ ತಣ್ಣಗಾಗುವಂತಹುದಲ್ಲ. ಭ್ರಷ್ಟ! ಏನೆಂದು ಬೇಡಿದನೊ? ನಾಯಿ ಅಮೃತವನ್ನು ಬಯಸುವಂತೆ, ಆ ಕುಲಹೀನನು ಪರಮಪವಿತ್ರವಂಶಸಂಭೂತೆಯಾದ ನನ್ನ ಈ ಪುತ್ರೀರತ್ನವನ್ನು ಬಯಸುವುದೇ! ಎಂದಿಗೂ ಆಗದು—ನಡೆಯದು. ನಾಯಿ ಸಿಂಹಾಸನದಲ್ಲಿ ಕುಳಿತ ಮಾತ್ರಕ್ಕೆ ರಾಜನಾಗದು!"

## ೪
# ಪ್ರತ್ಯುತ್ತರವೇನು ?

ತಿರುಮಲಾದೇವಿ ತಂದೆಯ ಭುಜವನ್ನು ಕುಲುಕಿ "ಅಪ್ಪಾ! ಈ ಪತ್ರಕ್ಕೆ ಏನೆಂದು ಉತ್ತರ ಕಳುಹಿಸುವಿರಿ?"

"ಮತ್ತೇನು—ಮಗೂ? ವೀರಕ್ಷತ್ರಿಯೋಚಿತವಾದ ಉತ್ತರವನ್ನೇ ಕಳುಹಿಸುವೆನು. ಈ ಪ್ರತಾಪರುದ್ರ ಗಜಪತಿ ಎಂದೆಂದಿಗೂ ತಲೆಬಾಗಿಸಲಾರನೆಂದು ತಿಳಿ. ಮಗಳೇ! ಇದೇ ನನ್ನ ಪ್ರತಿಜ್ಞೆ!"

"ಹಾಗಾದರೆ, ಪರಿಣಾಮವು ಬಹಳ ಭಯಂಕರವೇ ಸರಿ!"

"ಏಕೆ ಮಗೂ? ನೀನೇನೂ ಭಯಪಡಬೇಡ........"

ಕೂಡಲೇ ತಿರುಮಲಾದೇವಿಯ ಮೋರೆಯು ಕೆಂಬಣ್ಣವೇರಿತು—ಆಕೆ ನಿಶ್ಚಿತ ಸ್ವರದಿಂದ—"ಭಯವೇ? ಕ್ಷಾತ್ರನಂದಿನಿಯಾದ ನನಗೆ ಭಯವೇ? ಅಪ್ಪಾ! ನನ್ನ ಅಭಿಪ್ರಾಯವು ಹಾಗಲ್ಲ; ಎಷ್ಟೋ ಕಾಲದಿಂದ ಗಜಪತಿ ವಂಶೀಯರ ಆಳಿಕೆಯಲ್ಲಿದ್ದ ಈ ಕಳಿಂಗೋತ್ಕಲವು, ಇನ್ನು ಪರಕೀಯರ ಆಳಿಕೆಗೆ ಒಳಗಾಗಬಹುದೇನೋ, ಎಂಬ ಭಯದಿಂದ ಹಾಗೆಂದೆನು."

"ಹಾಗಾಗಲಾರದು, ಮಗಳೇ! ಉದಯಗಿರಿ ಕೊಂಡವೀಡುಗಳೆರಡು ಕೈಬಿಟ್ಟುಹೋದ ಮಾತ್ರಕ್ಕೆ, ನಮ್ಮ ಬಲವು ಕ್ಷಯಿಸಿತೆಂದು ತಿಳಿಯಬೇಡ. ಈಗಲೂ ಕೃಷ್ಣದೇವನಿಗೆ ಸರಿಸಾಟಿಯಾದ, ಪ್ರಚಂಡಸೇನಾಬಲವು, ಯುದ್ಧಕ್ಕಾಗಿ ಸಿದ್ಧವಾಗಿಯೇ ಇದೆ.

"ನಿಜ, ಅಪ್ಪಾ! ಆದರೂ, ಯುದ್ಧಕ್ಕೆ ನಿಂತಮೇಲೆ, ಪರಮಚಂಚಲೆಯಾದ ವಿಜಯಲಕ್ಷ್ಮಿಯು ಯಾವ ಕಡೆಗೆ ಒಲಿದಾಳೆಂದು ನಿಶ್ಚಯಿಸಲಾಗುವುದಿಲ್ಲವಷ್ಟೆ? ಅಪ್ಪಾ! ಅಂತಹ ಪ್ರಸಂಗವೇ ಬಂದರೆ — ಕೇಳು, ಅಪ್ಪಾ! ರಣಕೇಳಿ ಎಂದರೆ ನನಗೂ ಪರಮ ಸಂತೋಷ! ಬಹಳ ಉಲ್ಲಾಸ!! ರಣಕೇಳಿಯಾಡುತ್ತೋಡುತ್ತಾ, ರಣರಂಗವಲ್ಲಿ ಮಲಗಿ, ವೀರಸ್ವರ್ಗದ ವಿಶ್ರಾಂತಿಯನ್ನು ಪಡೆಯುವುದೆಂದರೆ, ನನಗೆ ಬ್ರಹ್ಮಾನಂದ!!! ಮತ್ತೂ ಕೇಳಪ್ಪ! ನಿಮ್ಮ ದೇಹವು ಎಲ್ಲಿಯೋ, ಅಲ್ಲಿಯೇ ನನ್ನ ದೇಹವೂ ಇರುವುದೆಂದು ತಿಳಿಯೋಣಾಗಲಿ!"

ಪ್ರತಾಪರುದ್ರನು ಸಂತೋಷದ ಉಬ್ಬಿನಿಂದ, "ಶಹಭಾಸ್! ವೀರ ಕ್ಷಾತ್ರನಂದಿನಿ! ಶಹಭಾಸ್!!" ಎಂದು, ಮಗಳ ತಲೆಯನ್ನು ಆಘ್ರಾಣಿಸುತ್ತಾ, "ಮಗೂ! ನಿನ್ನ ಪವಿತ್ರಕುಲಕ್ಕೆ ಭೂಷಣವಾದ ಮಾತೇ ನಿನ್ನ ಬಾಯಿಯಿಂದ ಹೊರಟಿತು. ಆದರೆ, ಕುಮಾರಿ!—ನಾನೂ ನೀನೂ ಇಬ್ಬರೂ ರಣರಂಗದಲ್ಲಿ ಮಲಗಿಬಿಟ್ಟರೆ, ನಮ್ಮ ವಂಶವೇ ಅಂದಿಗೆ ಮುರಿದು ಹೋದಂತಾಯಿತಲ್ಲಾ!" ಎಂದು ಹೇಳಿದನು.

"ಹಾಗಾದರೆ, ನನ್ನನ್ನು ಆ ಕುಲಭ್ರಷ್ಟನಿಗೆ ವಿವಾಹ ಮಾಡಿಕೊಟ್ಟು ವಂಶವನ್ನು ಉಳಿಸಿಕೊಳ್ಳುವಿರೇನು?"

"ಛಿ! ಛಿ!! ಹಾಗಲ್ಲವಮ್ಮಾ! ನಿನ್ನನ್ನು ಒಬ್ಬ ಉತ್ತಮವಂಶೀಯ ವರನಿಗೆ ಕೊಟ್ಟು ವಿವಾಹಮಾಡಿದರೆ, ಮುಂದೆ ಪರಮೇಶ್ವರನಿದ್ದಾನೆ"

"ಓಹೋ!........ಅಪ್ಪಾ ಇದು ನಿಮಗೆ ಗೊತ್ತಿಲ್ಲದ ವಿಷಯವೇ? ! ಆ ಕೃಷ್ಣದೇವನ ಭಯದಿಂದ ಯಾವನು ತಾನೇ ನನ್ನನ್ನು ವರಿಸಲು ಮುಂಬರುವನು? ಆ ತಿಮ್ಮರಸು ಮಂತ್ರಿ, ಪ್ರತಿಯೊಂದು ಸಂದಿನಲ್ಲಿಯೂ, ಕಲ್ಲು ಹಾಕಿಬಿಟ್ಟಿದ್ದಾನೆ. ಅವನ ಗೂಢಚಾರರು ನಾನಾ ವೇಷಾಂತರಗಳಿಂದ ದೇಶ ವಿದೇಶಗಳಲ್ಲೆಲ್ಲಾ ಸುತ್ತುತ್ತಿರುವ ಸಂಗತಿ ನಿಮಗೆ ಗೊತ್ತೇ ಇದೆ. ನಾವೀಗ ಇಲ್ಲಿ ಮಾತಾಡಿದ ಮಾತುಗಳೆಲ್ಲವೂ, ಇದ್ದುದು ಇದ್ದಂತೆ, ಈ ಗೋಡೆಗಳ ಮೂಲಕವಾಗಿಯೋ, ಅವನ ಕಿವಿಗಳಿಗೆ ತಲಪುವಂತಹ ಏರ್ಪಾಡನ್ನು ಆ ತಂತ್ರಿ ತಿಮ್ಮರಸನು ಏರ್ಪಡಿಸಿಯೇ ಇಟ್ಟಿರುವನೆನ್ನಲು ಸಂದೇಹವಿಲ್ಲ. ಆದುದರಿಂದ ಅಪ್ಪಾ! ನೀವು ಎಷ್ಟು ರಹಸ್ಯವಲ್ಲಿ ನನಗೆ ವಿವಾಹ ಮಾಡಬೇಕೆಂದು ಪ್ರಯತ್ನಿಸಿದರೂ, ಅದು ಕೊನೆಮುಟ್ಟಲಾರದೆಂದೇ ನನ್ನ ಆತ್ಮವು ಮನಸ್ಸಿನಲ್ಲಿ ಉಸುರುತ್ತಿದೆ. ಇನ್ನು ನಮಗೆ ಶಾಂತಿಯಸ್ಥಾನವೆಂದರೆ ರಣರಂಗವೇ ಸರಿ!"

ಪ್ರತಾಪರುದ್ರನು ವಿಚಾರ ಸ್ವರದಿಂದ, "ಮಗೂ! ಕ್ಷತ್ರಿಯರಿಗೆ ರಣರಂಗದಲ್ಲಿ ಮಲಗುವ ಸಂಗತಿಯೇನೂ ದೊಡ್ಡದಲ್ಲ. ಅದು ಕಟ್ಟಕಡೆಗೆ ಇದ್ದೇ ಇದೆ. ಅಷ್ಟರೊಳಗಾಗಿ ನಿನ್ನ ವಿವಾಹವನ್ನು ನೆರವೇರಿಸಿ, ವಂಶವನ್ನುಳಿಸಿಕೊಳ್ಳಬೇಕೆಂಬುದಿಷ್ಟೇ ನನ್ನ ಆಕಾಂಕ್ಷೆ. ಮಗಳೆ! ಇದನ್ನು ನೀನು ನೆರವೇರಿಸಿ ಕೊಡಬೇಕು" ಎಂದನು.

ತಿರುಮಲಾದೇವಿ ಯೋಚನೆಮಾಡಲಾರಂಭಿಸಿದಳು. ಪ್ರತಾಪರುದ್ರನು ಅವಳ ಗಲ್ಲವನ್ನು ಹಿಡಿದು, ತನ್ನ ಕಡೆಗೆ ತಿರುಗಿಸಿಕೊಂಡು, "ಯೋಚಿಸುವುದೇನಮ್ಮಾ?'' ಎಂದು ವಿಚಾರಿಸಿದನು.

"ಏನಿಲ್ಲ, ಅಪ್ಪಾ! ನಿಮ್ಮ ಮಾತನ್ನು ನಾನು ಎಂದಾದರೂ ಮೀರಿದ್ದೇನೆಯೇ? ನಿಮಗೆ ಆ ಸಂದೇಹವೇ ಬೇಡ. ನೀವು ಯಾವನಿಗೆ ಸಮರ್ಪಿಸುವಿರೋ, ಅವನು ಯಾವನಾದರೂ ಸರಿ, ಅವನನ್ನು ದೇವರೆಂದೇ ತಿಳಿಯುವೆನು. ಆದರೆ, ಅಪ್ಪಾ! ಕೃಷ್ಣದೇವನ ಕಾಟದಿಂದ ನಿಮ್ಮ ಇಚ್ಛೆ ಸುಸೂತ್ರವಾಗಿ ನಡೆಯಲಾರದೆಂದೇ ನನಗನಿಸುತ್ತಿದೆ"

"ಏನೋ ಪ್ರಯತ್ನಮಾಡಿ ನೋಡುವೆನು. ಒಂದು ಕೈಯಿಂದ ನಿನ್ನ ಮದುವೆಯನ್ನೂ, ಇನ್ನೊಂದು ಕೈಯಿಂದ ಯುದ್ಧವನ್ನೂ ಮಾಡುವೆನು. ಪರಮೇಶ್ವರನು ಅದೆಂತು ಕೊನೆಗಾಣಿಸುವನೋ ನೋಡಬೇಕು"

ತಿರುಮಲಾದೇವಿ ಸ್ವಲ್ಪಹೊತ್ತು ಯಾವಮಾತನ್ನೂ ಆಡಲಿಲ್ಲ. ಅವಳ ಮನಸ್ಸು ಹೊಯ್ದಾಡುತ್ತಿತ್ತು. ಈಗಿನ ಪ್ರಸಂಗದಲ್ಲಿ ಕೃಷ್ಣದೇವರಾಯನೊಡನೆ ಸಂಧಿಮಾಡಿ, ಸಮಾಧಾನ ಮಾಡಿಕೊಳ್ಳೋಣವೆಂದರೆ, ತನ್ನ ವಿವಾಹವಿಲ್ಲದ ಸಂಧಿಯನ್ನು ಆತನು ಎಂದಿಗೂ ಒಪ್ಪುವುದಿಲ್ಲವೆಂಬುದು, ಅವನ ಪತ್ರದಿಂದಲೂ, ಈವರೆಗಿನ ಕೃತ್ಯದಿಂದಲೂ ಗೊತ್ತಾಗುತ್ತಿದೆ. ಆದರೆ ತಾನು ಅವನನ್ನು ವರಿಸಿ, ವಂಶವನ್ನು ಕೆಡಿಸಿಕೊಳ್ಳುವುದಕ್ಕಿಂತಲೂ, ವಂಶಕ್ಷಯವಾಗಿ ಹೋಗುವುದೇ ಮೇಲು; ಈ ಪ್ರಸಂಗದಲ್ಲಿ ತಂದೆಯನ್ನು ಸಮರರಂಗದಲ್ಲಿ ಸಾಯಬಿಟ್ಟು, ತಾನೊಬ್ಬಳು ವಿವಾಹ ಮಾಡಿಕೊಂಡು ಸುಖವಾಗಿರುವುದೆಂದರೆ........ಛೆ! ಇದು ಅವಳಿಗೆ ಸರ್ವಾತ್ಮನಾ ಇಷ್ಟವಿಲ್ಲ. ಆದರೆ ತಂದೆಯ ಮಾತನ್ನು ಮೀರಲಿಕ್ಕಾಗುವುದು. ಅಂತೆಯೇ, ಅವಳು ತಂದೆಯ ಮಾತಿಗೆ ಸರಿಗೊಟ್ಟುಬಿಟ್ಟಳು. ಆದರೂ ಕೃಷ್ಣದೇವನ ಕಾಟದಿಂದ ತಂದೆಯ ಇಚ್ಛೆನೆರವೇರಲಾರದೆಂದೇ ಅಥವಾ ನೆರವೇರುವುದರೊಳಗಾಗಿ ಘೋರ ಸಂಗ್ರಾಮವು ಸಂಭವಿಸಿಬಿಡುವುದೆಂದೇ, ಅವಳ ಅಂತರಾತ್ಮವು ಪಿಸುಗುಟ್ಟುತ್ತಿತ್ತು. ಅದೊಂದೇ—ಧೈರ್ಯ—ಆನಂದ! ಯಾವಾಗ ಆ ಕುಲಭ್ರಷ್ಟನೊಂದಿಗೆ ಸಮರಸಂಭವಿಸೀತು, ಯಾವಾಗ ತಾನು ಅವನ ತಲೆಯನ್ನು

ಚೆಂಡಾಡೇನು ಎಂದೇ ಅವಳು ಹಾರೈಸುತ್ತಿರುವಳು. ಬೇಗನೆ ಕೃಷ್ಣದೇವನೊಡನೆ ಯುದ್ಧವನ್ನು ತಂದುಕೊಳ್ಳುವುದು ಲೇಸೆಂದು, ಅವಳಿಗೆ ತೋರಿತು. ಅದಕ್ಕಾಗಿ ತಾನೇ ಕೃಷ್ಣದೇವನಿಗೊಂದು ಪತ್ರವನ್ನು ಬರೆದರೆ ........... ? ಸರಿ ಸರಿ! ಅವಳಿಗೆ ಈಗ ಜೀವದ ಭಯವೇ ಇಲ್ಲ! ಜೀವದ ಭಯವಿಲ್ಲದವರು ಉಗ್ರಸಿಂಹದ ಬಾಯೊಳಗಾದರೂ ತಲೆಯಿಟ್ಟುಬಿಟ್ಟಾರಲ್ಲವೇ ? ಸರಿ—ಯೋಜನೆ ಗಟ್ಟಿಯಾಯಿತು. ಹೊಯ್ದಾಟವು ನಿಂತಿತು. ಧೈರ್ಯವು ಹೆಪ್ಪುಗಟ್ಟಿತು. ಅವಳು, "ಅಪ್ಪಾ! ಕೃಷ್ಣದೇವನಿಗೆ ಉತ್ತರವನ್ನು ಯಾವಾಗ ಕೊಟ್ಟು ಕಳುಹಿಸುವಿರಿ?" ಎಂದು ಕೇಳಿದಳು.

"ನಾಳೆಯೇ ಕೊಟ್ಟುಕಳುಹಿಸುವೆನು ಅಥವಾ ಕೊಟ್ಟುಕಳುಹಿಸುವದೇನು? ಬಂದ ದೂತನೊಂದಿಗೆ, ನಾಲ್ಕು ಮಾತುಗಳನ್ನು ಬಾಯಿಯಿಂದಲೇ ಹೇಳಿ ಕಳುಹಿಸಿದರಾಯಿತು"

"ಅಪ್ಪಾ! ಕುಲಗೇಡಿರಾಯನಿಗೆ ನಾನೊಂದು ಪತ್ರವನ್ನು ಬರೆದು ಕಳುಹಿಸಬೇಕೆಂದಿದ್ದೇನೆ"

"ಅಗತ್ಯವಾಗಿ ಬರೆ—ಮಗೂ! ಏನೆಂದು ಬರೆಯುತ್ತೀ?"

"ಅಪ್ಪಾ! ಅವನ ಮನಸ್ಸಿಗೆ ಚೆನ್ನಾಗಿ ನಾಟುವಂತೆ ಬರೆಯುವೆನು. ಶುದ್ಧ ಕ್ಷತ್ರಿಯ ಪುರುಷರು ಮಾತ್ರವಲ್ಲ—ಸ್ತ್ರೀಯರೂ ಎಷ್ಟು ಪ್ರಭಾವಶಾಲಿಗಳಾಗಿರುವರೆಂಬುದನ್ನು ಊಹಿಸಲಿ, ಆ ಭ್ರಷ್ಟ!" ಎಂದು ತಿರುಮಲಾದೇವಿ ಬೇರೊಂದು ಕೋಣೆಯೊಳಗೆಹೋಗಿ, ಸ್ವಲ್ಪಹೊತ್ತಿನಲ್ಲಿ ಪತ್ರವನ್ನು ಬರೆದು ತಂದು, ತಂದೆಗೆ ತೋರಿಸಿದಳು.

ಪ್ರತಾಪರುದ್ರನು ಓದಿನೋಡಿ, "ಮಗೂ! ಈ ಪತ್ರದ ಒಂದೆರಡು ವಾಕ್ಯಗಳು ಮಾತ್ರ ಅತ್ಯಂತ ಅಸಹನೀಯವಾಗಿದೆ. ಇವುಗಳನ್ನು ಸ್ವಲ್ಪ ಸೌಮ್ಯಕ್ಕೆ ಮಾರ್ಪಡಿಸಬೇಕಮ್ಮಾ!" ಎಂದನು.

"ಏತಕ್ಕಪ್ಪಾ?"

"ಮಗೂ! ಗಮನಿಸು. ಈಗ ಕೃಷ್ಣದೇವನು ದುರ್ನಿವಾರ್ಯಶಕ್ತಿಸಂಪನ್ನನಾಗಿರುವನು. ನಮ್ಮ ಮೇಲೆ ಕ್ರೋಧದಿಂದ ಕುದಿಯುತ್ತಿರುವನು

"ಸಾಕು, ಅಪ್ಪಾ! ಸಾಕು! ಆಶ್ಚರ್ಯ! ಶೂರ ಶಿರೋಮಣಿಗಳಾದ ನಿಮ್ಮ ಬಾಯಿಯಿಂದಲೇ ಇಂತಹ ಭೀತಿಸೂಚಕವಾದ ವಚನವು ಹೊರಡುವುದುಂಟೆ?"

"ಹಾಗಲ್ಲ ಮಗಳೆ! ಕುದಿಯುವ ಎಣ್ಣೆಗೆ ನೀರು ಸಿಡಿಸಿದ ಹಾಗೆ, ಅವನನ್ನು ಒಮ್ಮೆಗೇ ಅತಿಯಾಗಿ ರೇಗಿಸಿಬಿಟ್ಟರೆ ಏನಾದರೂ ಅನರ್ಥವಾದೀತೆಂದು ಶಂಕಿಸುತ್ತೇನೆ. ನಿನ್ನ ಮದುವೆಯನ್ನು ಬೇಗನೆ ಮಾಡಬೇಕೆಂದು ನನಗೆ ತುಂಬಾ ಆಶೆಯುಂಟು. ಇಂತಹ ಸಂದರ್ಭದಲ್ಲಿ ಸ್ವಲ್ಪ ನಿದಾನಿಸಿಕೊಂಡು ನಡೆಯಬೇಕಲ್ಲದೆ, ಒಮ್ಮೆಗೇ ದುಡಕಬಾರದು. ಏನಾದರೂ ಉಭಯಭ್ರಷ್ಟತೆಯುಂಟಾದೀತು"

ಏನಾದರೂ ತಿರುಮಲಾದೇವಿ ಒಪ್ಪಲಿಲ್ಲ; ಕೊಂಡಾಟದ ಏಕಮಾತ್ರ ಪುತ್ರಿಯಾದುದರಿಂದ ಕಡೆಗೆ ಅವಳ ಹಟವೇ ಗೆದ್ದಿತು.

೫

## ರಾಯನ ವೃತ್ತಾಂತ

ಪ್ರಿಯ ವಾಚಕರೇ! ಸ್ವಲ್ಪ ತಡೆಯಿರಿ! ಇಲ್ಲಿ, ಸ್ವಲ್ಪ ಚರಿತ್ರೆಯನ್ನು ಮಗುಚಿಹಾಕಿ, ತರುವಾಯ ಮುಂದುವರಿಯೋಣ. ಆಗ ಎಲ್ಲವೂ ಕ್ರಮಕ್ರಮವಾಗಿ ತಿಳಿದಂತಾಗುವುದು. ಆದುದರಿಂದ, ಸ್ವಲ್ಪ ಅವಧಾನವಿರಲಿ!

ಚಾರಿತ್ರಿಕ ದೃಷ್ಟಿಯಲ್ಲಿ, ವಿದ್ಯಾನಗರವನ್ನಾಳಿದ ರಾಯರವಂಶಕ್ಕೆ ಕ್ರಿ.ಶ. ೧೦೧೪—೭೬ರಲ್ಲಿ ರಾಜನಾಗಿದ್ದ, ನಂದಮಹಾರಾಜನೇ ಮೂಲಪುರುಷ. ಅನಂತರ ೧೧೧೭—೫೬ರಲ್ಲಿ, ರಾಜ್ಯವಾಳಿದ, ನಂದಮಹಾರಾಜನ ಪುತ್ರನಾದ, ವಿಜಯಧ್ವಜನು ತುಂಗಭದ್ರಾನದೀತೀರದಲ್ಲಿ ಸ್ವನಾಮಚಿಹ್ನದಿಂದ, ವಿಜಯನಗರವೆಂಬ ಸಣ್ಣ ಪಟ್ಟಣವನ್ನು ಕಟ್ಟಿಸಿದನು. ಆ ಮೇಲೆ ೧೩೩೬—೪೦ ರಲ್ಲಿ ಮಾಧವ ವಿದ್ಯಾರಣ್ಯರ ಪ್ರೋತ್ಸಾಹದಿಂದ, ಸಂಗಮವಂಶದ ಹರಿಹರ ಬುಕ್ಕರಾಯರೆಂಬ ಅಣ್ಣತಮ್ಮಂದಿರಿಬ್ಬರು, ಅದನ್ನೊಂದು ಮಹಾನಗರವನ್ನಾಗಿ ನಿರ್ಮಾಣಮಾಡಿದರು. ವಿದ್ಯಾರಣ್ಯಸ್ವಾಮಿಯವರೇ ಅವರಿಗೆ ಮುಖ್ಯಾಮಾತ್ಯರಾಗಿದ್ದು, ಬಹು ಸುವ್ಯವಸ್ಥೆ

ಯಿಂದ ರಾಜ್ಯಭಾರ ಮಾಡಿದುದರಿಂದಲೇ, ಅದು ವಿದ್ಯಾನಗರವೆಂದು ಪ್ರಸಿದ್ಧವಾಯಿತು.

ಕ್ರಿ.ಶ. ೧೩೩೬ರಲ್ಲಿ ಪ್ರಾರಂಭವಾದ, ಸಂಗಮವಂಶವು, ೧೪೭೮—೮೫ ರಲ್ಲಿ ಪತನವಾದಮೇಲೆ, ಸಾಳ್ವವಂಶವು ವಿದ್ಯಾನಗರ ಸಿಂಹಾಸನಾರೋಹಣ ಮಾಡಿತು. ಬಳಿಕ ೧೫೦೩—೬ರಲ್ಲಿ ಸಾಳ್ವವಂಶವು ಬಿದ್ದುಹೋಗಿ, ತುಳುವ ವಂಶವು ಪಟ್ಟಾಂಕಿತವಾಯಿತು. ಚಂದ್ರಾನ್ವಯದ ತುರ್ವಸುವಿನ ಸಂತತಿಯಿಂದ ಹುಟ್ಟಿದ ಈ ತುಳುರಾಯರ ವಂಶವು, ಸಾಳ್ವವಂಶಾಂತರ್ಭೂತವೇ ಹೊರತು ಬೇರೆಯಲ್ಲ. ಹೇಗೆಂದರೆ, ಸಾಳ್ವ ನರಸಿಂಗರಾಯನ ತಂದೆ ಗುಂಡರಾಜ. ಈ ಗುಂಡರಾಜನಿಗೆ ಸಾಳ್ವ ನರಸಿಂಗರಾಯನೂ, ತಿಮ್ಮಣ್ಣ ದಂಡನಾಥನೂ ಮಕ್ಕಳು; ತಿಮ್ಮಣ್ಣ ದಂಡನಾಥನ ಮಗ ಈಶ್ವರರಾಯ; ಈಶ್ವರರಾಯನ ಮಗನೇ, ಕೃಷ್ಣದೇವರಾಯನ ಪಿತನಾದ ತುಳುವ ನರಸರಾಯ.

ತುಳುವ ನರಸರಾಯನು ಸಾಳ್ವ ನರಸಿಂಗರಾಯನ ಪ್ರಧಾನ ಸೇನಾಧ್ಯಕ್ಷನಾಗಿದ್ದನು. ಸಾಳ್ವ ನರಸಿಂಗರಾಯನು ೧೪೯೦ರಲ್ಲಿ ತೀರಿಹೋದಮೇಲೆ ಅವನ ಚಿಕ್ಕಮಕ್ಕಳಿಬ್ಬರನ್ನೂ, ತುಳುವ ನರಸರಾಯನು ಕೊಲ್ಲಿಸಿ, ಪಟ್ಟವನ್ನು ಆಕ್ರಮಿಸಿಕೊಂಡನೆಂದು ವದಂತಿಯುಂಟು. ಆದರೆ, ಬಹು ಸಜ್ಜನನಾದ ತುಳುವ ನರಸರಾಯನು ಅಂತಹ ಕ್ರೂರಕೃತ್ಯವನ್ನು ಮಾಡಲಿಲ್ಲವೆಂದೂ, ಪ್ರಜೆಗಳಿಗೆ ಅವನ ಮೇಲಿರುವ ಪ್ರೀತಿಯನ್ನು ಕೆಡಿಸಲಿಕ್ಕಾಗಿ, ಅವನ ವೈರಿಗಳು ಯಾರೋ ಆ ಕೊಲೆಗಳನ್ನು ಮಾಡಿ, ಅಪವಾದವನ್ನು ಅವನ ಮೇಲೆ ಹೇರಿದರೆಂದೂ, ಇನ್ನೊಂದು ಸಮಾಧಾನವೂ ಉಂಟು. ಅದು ಹೇಗೂ ಇರಲಿ. ಕ್ರಿ. ಶ. ೧೪೯೦ರ ಸುಮಾರಿಗೆ, ತುಳುವ ನರಸರಾಯನ ಮೂಲಕವಾಗಿ, ತೃತೀಯ ರಾಜವಂಶವಾದ ತುಳುವಂಶವು ವಿದ್ಯಾನಗರದ ಸಿಂಹಾಸನಾರೋಹಣ ಮಾಡಿತು. ತುಳುವ ನರಸರಾಯನ ದ್ವಿತೀಯ ಕುಮಾರನೇ ಪ್ರಕೃತ ಕಥಾನಾಯಕನಾದ ಶ್ರೀಕೃಷ್ಣದೇವರಾಯ.

ಕ್ರಿ. ಶ. ೧೫೦೩ರಲ್ಲಿ, ತುಳುವ ನರಸರಾಯನು ಕಾಲಧರ್ಮವನ್ನು ಹೊಂದಿದಮೇಲೆ, ಅವನ ಪ್ರಥಮ ಕುಮಾರನಾದ ವೀರ ನರಸಿಂಹರಾಯನು, ಪಟ್ಟಕ್ಕೆ ಬಂದು, ೧೫೦೯ರ ಸುಮಾರಿಗೆ, ಕೀರ್ತಿಶೇಷನಾಗಿ ಹೋದನು.

ತರುವಾಯ, ೧೫೦೯ನೆ ಫೆಬ್ರುವರಿ ೪ನೇ ತಾರೀಖಿಗೆ ಸರಿಯಾದ, ಶಾಲಿವಾಹನ ಶಕ ೧೪೩೦ ಮಾಘ ಶುಕ್ಲ ಚತುರ್ದಶೀ ದಿನದಲ್ಲಿ, ಶ್ರೀಕೃಷ್ಣದೇವರಾಯನು ಮಹಾ ವೈಭವದಿಂದ ವಿದ್ಯಾನಗರ ರತ್ನಸಿಂಹಾಸನಾಧೀಶ್ವರನಾದನು.

ಕೃಷ್ಣದೇವರಾಯನ ತಾಯಿಯ ಹೆಸರು ನಾಗಲಾದೇವಿ. ಇವಳು ನರಸರಾಯನ ದ್ವಿತೀಯ ಭಾರ್ಯೆ. ಇವಳು ಅವನ ಭಾರ್ಯೆಯಲ್ಲವೆಂದೂ ನರಸರಾಯನ ಭೋಗಕಾಂತೆಯಾಗಿದ್ದಳೆಂದೂ, ಇನ್ನೊಂದು ಕಿಂವದಂತಿ ಇತ್ತು. ಅದುಕಾರಣ, ಕೃಷ್ಣದೇವರಾಯನು ದಾಸೀಪುತ್ರನೆಂಬ ಕಳಂಕಕ್ಕೀಡಾದನು.

ಏನಾದರೇನು ? ಕೃಷ್ಣದೇವರಾಯನು ಪ್ರಸಿದ್ಧ ಪುರುಷನಾಗಿದ್ದನು. ವಿದ್ಯಾನಗರವನ್ನು ಪಾಲಿಸಿದ ರಾಯರೊಳಗೆಲ್ಲಾ ಇವನು ಬಹು ಮೇಲಾದವನು. ಸಮುಸ್ತ ಕರ್ಣಾಟಕ ಭೂಮಂಡಲಕ್ಕೆ ಮಧ್ಯಾಹ್ನ ಮಾರ್ತಾಂಡನಾಗಿದ್ದನು. ಕಮಲದ ಮೂಲವು ಕೆಸರಿನಲ್ಲಿದ್ದರೆ, ಅದರ ಪರಿಮಳಕ್ಕೇನು ಕುಂದು? ಅಂತೆಯೇ, ಈ ಮಹಾರಾಜನ ಮೂಲವೇನೇ ಇರಲಿ, ಇವನ ಯಶಸ್ಸು ದಿಗಂತವನ್ನೇ ವ್ಯಾಪಿಸಿತು. ಅದೊಂದು ವಿಧಾತನ ಲೀಲೆ. ಅದಕ್ಕಾಗಿಯೇ ಮಹಾಪುರುಷರ ಮೂಲವನ್ನು ನೋಡಬಾರದೆಂದು ಹಿರಿಯರೆನ್ನುವರು!

೭

## ವಿಜಯ ಪರಂಪರೆ

ಪಟ್ಟಕ್ಕೆ ಬಂದಮೇಲೆ, ಕೃಷ್ಣದೇವರಾಯನು ಸುಮ್ಮನೆ ಕುಳಿತಂತೆ ನಟಿಸಿ, ಒಳಗಿಂದೊಳಗೆ ಭಾರೀ ಸೈನ್ಯಸನ್ನಾಹ ಮಾಡಲಾರಂಭಿಸಿದನು. ಏಕೆಂದರೆ, ದೇಶಾಭಿವೃದ್ಧಿಯ ಆಕಾಂಕ್ಷೆಯಿಂದ ಆತನು ಬಹಳ ದೂರದೃಷ್ಟಿಯುಳ್ಳವನಾದನು. ಸರಿ! ಕ್ರಿ. ಶ. ೧೫೧೨ ನೇ ಸಂವತ್ಸರದಲ್ಲಿ ರಾಯನ ಪ್ರಚಂಡ ಸೇನೆ ದಕ್ಷಿಣದೇಶದ ಕಡೆಗೆ ಜೈತ್ರಯಾತ್ರೆ ಹೊರಟಿತು. ಹೆಚ್ಚು ಹೇಳುವುದೇನು ? ಅವನಿಗೆ ಹೆಜ್ಜೆಹೆಜ್ಜೆಗೂ ವಿಜಯಲಕ್ಷ್ಮಿ ಮಾಲೆಹಾಕುತ್ತಾ ಬಂದಳು. ಕನ್ಯಾಕುಮಾರಿಯ ತನಕವೂ, ವಿದ್ಯಾನಗರದ ವಿಜಯಪತಾಕೆಯು ಹಾರುತ್ತಿತ್ತು. ಪ್ರತಿಯೊಂದು ಮಂಡಲವೂ ವಿದ್ಯಾನಗರಕ್ಕೆ ಅಂಕಿತ

ವಾಯಿತು. ಎಲ್ಲಿ ಯುದ್ಧವೋ ಅಲ್ಲಿ ವಿಜಯ; ಎಲ್ಲಿ ವಿಜಯವೋ ಅಲ್ಲಿ ಶಾಂತಿ; ಹೀಗೆ ಕೃಷ್ಣದೇವರಾಯನು ಎಷ್ಟು ಅಬ್ಬರದಿಂದ ಜೈತ್ರಯಾತ್ರೆ ಹೊರಟನೋ ಅಷ್ಟೇ ಶಾಂತಿಯಿಂದ ಹಿಂದಿರುಗಿದನು. ಈ ದಕ್ಷಿಣ ದಿಗ್ವಿಜಯದಿಂದ, ಅವನಿಗೆ ಅಪರಿಮಿತವಾದ ಕಪ್ಪಕಾಣಿಕೆಗಳು ಸಿಕ್ಕುವಂತಾಯಿತು.

ಆದರೂ, ರಾಜಧರ್ಮ ವಿಶಾರದನಾದ ಕೃಷ್ಣದೇವರಾಯನಿಗೆ ದಕ್ಷಿಣ ದಿಗ್ವಿಜಯದಿಂದೇನೂ ತೃಪ್ತಿಯುಂಟಾಗಲಿಲ್ಲ. ತನ್ನ ಹಿರಿಯರಿಂದ ಜಯಿಸಲಸಾಧ್ಯವಾಗಿದ್ದ, ಉದಯಗಿರಿ, ಕೊಂಡವೀಡು, ಮುದಗಲ್ಲು, ರಾಯಚೂರು ಮೊದಲಾದ ದುರ್ಗಮ ದುರ್ಗಗಳನ್ನು ಸಾಧಿಸಿ, ಪ್ರಬಲರಾಗಿರುವ ಉತ್ಕಲ ದೇಶವನ್ನೂ, ವಿದ್ಯಾನಗರ ಸಿಂಹಾಸನಾಂಕಿತವಾಗಿ ಮಾಡಬೇಕೆಂದು, ಸಿದ್ಧಹಸ್ತನಾಗಿ ಎದ್ದನು. ಆಗಲೇ ಅವನ ಮುಂಬೆಳಕಿನಂತಿದ್ದ ಚಾಣಾಕ್ಷನಾದ ತಿಮ್ಮರಸು ಸಚಿವಶ್ರೇಷ್ಠನು ಬಗೆಬಗೆಯಿಂದ ಬೋಧಿಸಿ, ರಾಯನ ಮನಸ್ಸನ್ನು ಉತ್ಕಲೇಶನ ಕುಮಾರಿಯಾದ ತಿರುಮಲಾದೇವಿಯ ಮೇಲೆಯೂ ತಿರುಗಿಸಿದನು. ತಿರುಮಲಾದೇವಿ ಸೌಂದರ್ಯದಲ್ಲಿ ಬಹು ಪ್ರಖ್ಯಾತಳಾಗಿ "ಜಗನ್ಮೋಹಿನೀ'' ಎಂಬ ಬಿರುದನ್ನು ಪಡೆದಿದ್ದಳು. ಅವಳನ್ನು ಕೃಷ್ಣದೇವರಾಯನು ವರಿಸಿಬಿಟ್ಟರೆ, ಕರ್ಣಾಟಕವೂ, ಆಂಧ್ರವೂ ಒಗ್ಗಟ್ಟಾಗಿ— ''ಕನ್ನಡ ಕಸ್ತೂರಿ, ತೆಲುಗು ತೇಟ—....... .......'' ಎಂಬಂತೆ ತಿಳಿನೀರಿಗೆ ಕಸ್ತೂರಿ ಬೆರೆಸಿದಂತೆ, ಬಹು ಸೊಗಸಾಗುವುದಿಲ್ಲವೆ? ವಿದ್ಯಾನಗರಕ್ಕೆ ಬಹು ದೊಡ್ಡ ಲಾಭವಾಗುವುದಲ್ಲವೆ?—ನಿಜ! ಆದರೆ ರಾಜನ ಪ್ರೇಮವೆಲ್ಲವೂ, ರಾಜಯೋಗ್ಯ ವಿವಾಹಕ್ಕೆ ನಿಲುಕದವಳಾಗಿದ್ದ ಇನ್ನೊಂದು ವ್ಯಕ್ತಿಯಮೇಲೆ ಇದ್ದುಬಿಟ್ಟಿತ್ತು. ಅದು ಯಾವ ವ್ಯಕ್ತಿಯೆಂಬುದು ವಾಚಕರಿಗೆ ಮುಂದೆ ಗೊತ್ತಾಗುವುದು! ಇರಲಿ; ಅಂತೂ ಕಡೆಗೆ ರಾಯನು ತಿಮ್ಮರಸನ ಯೋಚನೆಗೆ ಒಪ್ಪಿದನು. ಯುದ್ಧವಿಲ್ಲದೇ ಕಾರ್ಯವನ್ನು ಸಾಧಿಸಿಬಿಡಬೇಕೆಂದು, ಮಂತ್ರಿಪುಂಗವನ ಯೋಚನೆ. ಅದರಂತೆ ಪ್ರತಾಪರುದ್ರ ಗಜಪತಿಯ ಕಡೆಗೆ ರಾಯಭಾರಿಯನ್ನು ಕಳುಹಲಾಯಿತು. ಆದರೆ ಪ್ರತಾಪರುದ್ರನು ನೆನೆಸಿದಂತೆ ಸುಲಭಸಾಧ್ಯನಾಗಿರಲಿಲ್ಲ. ಹೆಸರಿಗೆ ತಕ್ಕಂತೆ ಪ್ರತಾಪರುದ್ರನೇ ಆಗಿದ್ದನು. ಅವನು ರಾಯನ ರಾಯಭಾರವನ್ನು ಧಿಕ್ಕರಿಸಿ, ರಾಯನನ್ನು

ಬಾಯಿಗೆ ಬಂದಂತೆ ನಿಂದಿಸಿ, ರಾಯಭಾರಿಯನ್ನು ಕಳುಹಿಸಿಕೊಟ್ಟನು. ಸರಿ. ಅಪಮಾನಿತನಾದ ಕೃಷ್ಣದೇವರಾಯನು ಉಗ್ರನರಸಿಂಹನಾಗಿ, ಉದಯಗಿರಿ ದಂಡಯಾತ್ರೆಗೆ ಹೊರಟೇಬಿಟ್ಟನು. ಈ ದಂಡಯಾತ್ರೆ ಕ್ರಿ. ಶ. ೧೫೧೩ರಲ್ಲಿ ನಡೆಯಿತು. ಉದಯಗಿರಿ ದುರ್ಗಾಧೀಶನಾದ ವೀರರುದ್ರನು ಪ್ರತಾಪರುದ್ರನ ಚಿಕ್ಕಪ್ಪನ ಮಗನೇ! ಆದುದರಿಂದ ಬಂಧುವಿನ ಸಹಾಯಕ್ಕಾಗಿ ಪ್ರತಾಪರುದ್ರನು ಓಡಿಬರುವನೆಂದರಿತೇ, ರಾಯನು ಮೊದಲು ಉದಯಗಿರಿಯನ್ನು ಆಕ್ರಮಿಸಿದುದು. ಅವನ ಯೋಚನೆ ಸುಳ್ಳಾಗಲಿಲ್ಲ. ಉದಯಗಿರಿಯನ್ನು ರಕ್ಷಿಸಲಿಕ್ಕಾಗಿ ಪ್ರತಾಪರುದ್ರನು ಮಹಾ ಸೇನಾವಾಹಿನಿಯೊಂದಿಗೆ ಧಾವಿಸಿ ಬಂದನು. ಆದರೆ, ರಾಯನ ನಿಪುಣ ಮಂತ್ರಿಯ ತಂತ್ರದಿಂದ ರಾಯನ ಸೇನಾನಾಯಕನು ಉದಯಗಿರಿ ಸರಹದ್ದಿನ ಕಟ್ಟಡವಿಯೊಳಗೆ, ಪ್ರತಾಪರುದ್ರನನ್ನು ತರುಬಿ ಸಿಕ್ಕಿಸಿ, ಅಲ್ಲಿಂದಲ್ಲಿಗೆ ಹಿಂದಕ್ಕೋಡಿಸಿಬಿಟ್ಟನು. ಇತ್ತ ಕೃಷ್ಣದೇವರಾಯನು ದುರ್ಗವನ್ನು ಭೇದಿಸಿ, ಕೋಟೆಯನ್ನು ಹೊಕ್ಕುಬಿಟ್ಟನಾದುದರಿಂದ ವೀರರುದ್ರನು ನಿರುಪಾಯನಾಗಿ ರಹಸ್ಯಮಾರ್ಗದಿಂದ ಪಲಾಯನಸೂಕ್ತ ಪಾರಾಯಣ ಮಾಡಿಬಿಟ್ಟನು. ಆ ಸಂದರ್ಭದಲ್ಲಿ, ವೀರರುದ್ರನ ಪುತ್ರನು ರಾಯನ ಸೆರೆಗೆ ಬಿದ್ದನು. ದುರ್ಗವು ಕೃಷ್ಣದೇವರಾಯನ ಕೈವಶವಾಯಿತು. ಈ ಸಂಗತಿ "ಉದಯಗಿರಿ ಮುತ್ತಿಗೆ" ಎಂದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಈಗ ಹಂಪೆಯಲ್ಲಿ ಹಾಳುಬಿದ್ದಿರುವ ಶ್ರೀ ಕೃಷ್ಣದೇವಾಲಯ, ಹಜಾರ ರಾಮಾಲಯ, ವಿಜಯಮಂದಿರ ಮುಂತಾದ ಕಟ್ಟಡಗಳನ್ನು ಈ ವಿಜಯಸ್ಮಾರಕವಾಗಿಯೇ ಕೃಷ್ಣದೇವರಾಯನು ಕಟ್ಟಿಸತೊಡಗಿದನು. ಅಲ್ಲಿಗೂ ಬಿಡದೆ, ಕೃಷ್ಣದೇವರಾಯನು ಪ್ರತಾಪರುದ್ರ ಗಜಪತಿಗೆ ಪುನಃ ಕನ್ಯಾರ್ಥಿ ಸಂಧಿಯಪತ್ರವನ್ನು ಬರೆದಟ್ಟಿದ್ದನು. ಪ್ರತಾಪರುದ್ರನು ಬಿಂಕದಿಂದ ಅದಕ್ಕೂ ಬಗ್ಗಲಿಲ್ಲ. ಕೂಡಲೇ, ರಾಯನು ನಗರರಕ್ಷಣೆಗೆ ತನ್ನ ಸಹೋದರನಾದ ಅಚ್ಯುತರಾಯನನ್ನು ಇರಿಸಿ, ಲಕ್ಷಗಣನೆಯ ಚತುರಂಗ ಚಮೂಸಮೂಹದೊಂದಿಗೆ, ಕ್ರಿ. ಶ. ೧೫೧೪ರಲ್ಲಿ, ಉತ್ತರ ದಿಗ್ವಿಜಯಕ್ಕೆ ಹೊರಟನು. ಮೊದಲು ಅವನ ಮುತ್ತಿಗೆಗೆ ತುತ್ತಾದುದು ಕೊಂಡವೀಡುದುರ್ಗ, ಪ್ರಾಮುಖ್ಯವಾದ ಆ ದುರ್ಗಸಂರಕ್ಷಣಾರ್ಥವಾಗಿ, ಗಜಪತಿರಾಯನ ಮುಖ್ಯಾಮಾತ್ಯನಾದ ರಾಮಯಾಮಾತ್ಯನೇ ಪ್ರಚಂಡಸೇನಾ

ವಾಹಿನಿಯೊಂದಿಗೆ ಬಂದು, ಕೃಷ್ಣದೇವರಾಯನನ್ನು ತರುಬಿದನು. ರಾಯನ ಸೇನೆಗೂ ಗಜಪತಿಯ ಸೇನೆಗೂ ತುಮುಲ ಯುದ್ಧವು ನಡೆಯಿತು. ಕುಟಿಲೋಪಾಯ ಕೋವಿದನಾದ ರಾಮಯ ಮಂತ್ರಿಯನ್ನೇ ಸೆರೆಹಿಡಿದುಬಿಟ್ಟರೆ, ಉತ್ಕಲವಿಜಯವು ಬಹು ಸುಲಭವೆಂದು ಬಗೆದು, ತಿಮ್ಮರಸನು ತಂತ್ರದಿಂದ ರಾಮಯ ಮಂತ್ರಿಯನ್ನು ಸೆರೆಹಿಡಿದುಬಿಟ್ಟನು. ಕ್ರಿ. ಶ. ೧೫೧೫ನೇ ಜೂನ್ ೨೩ನೇ ತಾರೀಖಿನಲ್ಲಿ, ಕೊಂಡವೀಡುದುರ್ಗದ ಕೊತ್ತಲದ ಶಿಖರದಮೇಲೆ, ವಿದ್ಯಾನಗರದ ವರಾಹಾಂಕಿತ ವಿಜಯಪತಾಕೆಯು ಕುಣಿಯತೊಡಗಿತು.

ಈ ಸಂದರ್ಭದಲ್ಲಿಯೇ, ನಾವು ಹಿಂದೆ ಹೇಳಿದಂತೆ, ಕೃಷ್ಣದೇವರಾಯನು ಪ್ರತಾಪರುದ್ರನಿಗೆ, ಪುನಃ ಮೂರನೆಯ ಬಾರಿ ಪತ್ರಸಂಧಾನವನ್ನು ಮಾಡಿದನು. ಸರಿ, ಇನ್ನು ಪ್ರಕೃತ ವಿಷಯವನ್ನು ಕುರಿತು ಮುಂದುವರಿಯೋಣ.

೭

## ದೂತನ ವಾರ್ತೆ

ಗುಂಡು ಗುಂಡಾದ ನಾನಾವಿಧ ಗಂಡಶಿಲೆಗಳಿಂದ ಅತ್ಯುನ್ನತವಾಗಿ ಆಕಾಶವನ್ನು ಮುತ್ತಿಡುವ, ಅರಿದುರ್ಭೇದ್ಯವಾದ, ಕೊಂಡವೀಡು ಶ್ರೇಷ್ಠ ದುರ್ಗವನ್ನು ಅರಿಭಯಂಕರನಾದ ಕೃಷ್ಣದೇವರಾಯನು ನಿಜಪ್ರಚಂಡ ಸೇನಾಘಾತದಿಂದ ಭೇದಿಸಿ ಹೊಕ್ಕು, ಅಲ್ಲಿಯ ರಾಜಸೌಧದಲ್ಲಿ ವಿಜಯ ವಿಶ್ರಾಂತಿಯನ್ನು ಹೊಂದುತ್ತಿದ್ದನು. ಬಳಿಯಲ್ಲಿ ತಿಮ್ಮರಸು ಸಚಿವವರ್ಯನ ಹೊರತು, ಮತ್ತಾರೂ ಇದ್ದಿಲ್ಲ. ರಾಯನು ಪುಷ್ಪಶಯ್ಯಾಸಿನಮೇಲೆ ದಿಂಬಿಗೆ ಒರಗಿಕೊಂಡು, ಸುಗಂಧದ್ರವ್ಯದಿಂದ ತುಂಬಿದ ಗುಡಿಗುಡಿಯ ನಳಿಗೆಯನ್ನು ಬಾಯಿಯಲ್ಲಿ ಇಟ್ಟುಕೊಂಡು, ಉತ್ಕಲ ವಿಜಯವನ್ನು ಕುರಿತು, ಮಂತ್ರಿಯೊಡನೆ ಯೋಚನೆಮಾಡುತ್ತಿದ್ದನು.

"ಜೈ! ರಾಜಾಧಿರಾಜ ಕರ್ಣಾಟಕ ಸಾರ್ವಭೌಮಾ!'' ಎಂದು, ಖಡ್ಗಧಾರಿಯಾದ ದ್ವಾರರಕ್ಷಕನು ಅಲ್ಲಿಗೆ ಬಂದು, ರಾಯನಿಗೆ ಬಾಗಿ, ಮುಜುರೆ ಮಾಡಿ, ಕೈಕಟ್ಟಿಕೊಂಡು ನಿಂತನು.

ತಿಮ್ಮರಸನು ಹುಬ್ಬೆತ್ತಿ, ಏನೆಂಬ ಸಂಜ್ಞೆಯನ್ನು ತೋರಿಸಿದನು. "ಮಹಾರಾಜಾ! ಉತ್ಕಲ ರಾಜಧಾನಿಯಿಂದ ಬಂದಿರುವ ನಮ್ಮ ದೂತನು ದೇವರ ಸಮಯವನ್ನು ಕಾದುಕೊಂಡು ದ್ವಾರದಲ್ಲಿ ನಿಂತಿರುವನು."

ಕೃಷ್ಣದೇವರಾಯನು ಗುಡಿಗುಡಿಯ ನಾಳವನ್ನು ಬಾಯಿಯಿಂದ ತೆಗೆದು,—"ಅವನನ್ನು ಕೂಡಲೇ ಒಳಗೆ ಕಳುಹಿಸು" ಎಂದು ಆಜ್ಞಾಪಿಸಿದನು!

"ಶಿರಸಾಜ್ಞೆ" ಎಂದು ಬಾಗಿ, ಹಣೆಗೆ ಕೈಯಿಟ್ಟು, ದ್ವಾರರಕ್ಷಕನು ಹೊರಟುಹೋದನು.

ಸ್ವಲ್ಪ ಹೊತ್ತಿನಲ್ಲಿ, "ಜೈ! ರಾಜಾಧಿರಾಜ ಕರ್ಣಾಟಕ ಸಾರ್ವಭೌಮಾ!" ಎಂದು ದೂತನು ಒಳಹೊಕ್ಕು, ರಾಯನಿಗೆ ತಲೆಬಾಗಿ ನಮಸ್ಕರಿಸಿ ವಿನಯದಿಂದ ನಿಂತನು.

ತಿಮ್ಮರಸ:—ಏನಪ್ಪಾ; ಕ್ಷೇಮವಾಗಿ ಹೋಗಿಬಂದೆಯಾ?

ದೂತ:—ತಮ್ಮ ಚಿತ್ತ! ಮಹಾರಾಜಾ!

ತಿಮ್ಮರಸ:—ಗಜಪತಿರಾಜನು ನಿನಗೇನೂ ಕೊರತೆಯಾಗದಂತೆ ವ್ಯವಸ್ಥೆ ಮಾಡಿಸಿದನೇನು?

ದೂತ:—ಚೆನ್ನಾಗಿ ಮಾಡಿಸಿದನು, ಮಹಾರಾಜಾ!

ತಿಮ್ಮರಸ:—ನೀನು ಅಲ್ಲಿ ಎಷ್ಟು ದಿನಗಳಿದ್ದೆ?

ದೂತ:—ಎರಡು ದಿನಗಳಿದ್ದೆ.

ತಿಮ್ಮರಸ:—ಉತ್ತರವನ್ನು ಯಾವರೀತಿ ಕೊಟ್ಟಿದ್ದಾನೆ?

ದೂತ:—ಗಜಪತಿರಾಜನು ನಾಲ್ಕು ಮಾತುಗಳನ್ನು ಬಾಯಿಯಿಂದ ಹೇಳಿಕಳುಹಿಸಿದ್ದಾನೆ. ಹಾಗೂ ಅವನ ಕುಮಾರಿ ದೇವರ ಸನ್ನಿಧಿಗೆ, ಒಂದು ಪತ್ರವನ್ನು ಕೊಟ್ಟು ಕಳುಹಿಸಿದ್ದಾಳೆ.

ದೂತನು ಕಟಿಯೊಳಗಿನಿಂದ ಒಂದು ಪತ್ರವನ್ನು ತೆಗೆದು, ನಯಭಯದಿಂದ ಮುಂದುವರಿದು, ರಾಯನ ಇದಿರಿಗಿದ್ದ ಸ್ವರ್ಣಪೀಠದಮೇಲೆ ಆ ಪತ್ರವನ್ನಿಟ್ಟು ಹಿಂದಕ್ಕೆ ಸರಿದನು.

ರಾಯನು ಮಂತ್ರಿಯ ಮುಖವನ್ನು ನೋಡಿ, "ಹಣ್ಣಾದ ಲಕ್ಷಣವು ಕಾಣುವುದಿಲ್ಲ ಅಪ್ಪಾಜೀ!" ಎಂದನು.

ತಿಮ್ಮರಸನ ಅಗಲವಾದ ಹಣೆಯಮೇಲಿರುವ ನಾಲ್ಕಾರು ರೇಖೆಗಳು ಸ್ವಲ್ಪ ಸಂಕುಚಿತವಾದುವು. ತಲೆದೂಗುತ್ತಾ, ಆ ಸಂಚಿಯನ್ನೆತ್ತಿಕೊಂಡು ದೂತನನ್ನು ನೋಡಿ,—"ಇನ್ನೇನೂ ಕಳುಹಿಸಲಿಲ್ಲವೆ?" ಎಂದು ಕೇಳಿದನು.

ದೂತ:—ಇಲ್ಲ ಮಹಾರಾಜಾ!

ರಾಯನು ಕ್ರೋಧಮಿಶ್ರಿತ ಸ್ವರದಿಂದ, "ಇರಲಿ, ಅವನು ಏನೆಂದು ಹೇಳಿ ಕಳುಹಿಸಿದ್ದಾನೆ?"

ದೂತನು ಕೈಮುಗಿದು, "ದೇವಾ! ಕ್ಷಮಿಸೋಣಾಗಲಿ, ಆ ಮಾತುಗಳು ಬಹಳ ನಿಂದನೀಯವಾದುವು. ಅತ್ಯಂತ ಗರ್ವದ ನುಡಿಗಳು!" ಎಂದು ಹೇಳಿದನು.

ತಿಮ್ಮರಸು:—ಭಯಪಡಬೇಡ — ಏನೆಂದು ಹೇಳಿದನು ? ಯಥಾವತ್ತಾಗಿ ತಿಳಿಸು.

ದೂತನು ಮೇಲೆ ಕೆಳಗೆ ನೋಡಿ, "ಮಹಾರಾಜಾ! ಹೇಳಲು ನಾಲಗೇಕೋ ಏಳದಾಗಿದೆ; ದೇವಾ! ಶ್ರೀರಾಮಚಂದ್ರನನ್ನು ಅಕ್ಕಲ್ಪನಾದ ಅಗಸರವನು ನಿಂದಿಸಿದಂತೆ ಈ ದಿವ್ಯ ಸನ್ನಿಧಾನವನ್ನು ಆ ಗಜಪತಿರಾಜನು ನಿಂದಿಸಿದನು.

ರಾಯನು ಗುಡುಗುಡಿಯನ್ನು ಬಿಟ್ಟು ಎದ್ದುಕುಳಿತು, ಕಣ್ಣುಕೆಂಪಗೆ ಮಾಡಿಕೊಂಡು, "ಏನೆಂದು ನಿಂದಿಸಿದನು?" ಎಂದನು.

ದೂತನು ಬೆಪ್ಪುನೋಟದಿಂದ, ರಾಯನ ಪಾದಪ್ರದೇಶವನ್ನು ನೋಡುತ್ತಾ, ದೀರ್ಘಶ್ವಾಸವನ್ನು ಬಿಟ್ಟು, ನಾಲಗೆಯನ್ನು ಸವರಿಕೊಂಡನು. ಅಷ್ಟೆ!

ರಾಯ:—ಅಂಜದಿರು, ಆ ಮದಾಂಧನು ಏನೆಂದು ಬೊಗಳಿದನು?

ದೂತನು ತಗ್ಗಿದ ಸ್ವರದಿಂದ, "ದೇವರೇ! ಆಡಬಾರದ ಮಾತು. ವಂಶವನ್ನೇ........" ಎಂದು ಹೇಳುತ್ತಿದ್ದನು.

ರಾಯ:—ಇರಲಿರಲಿ! ಅದರ ಫಲವನ್ನು ಬೇಗನೇ ತೋರಿಸುವೆನು.

ತಿಮ್ಮರಸ:—ಎಲೋ! ಕಟ್ಟಕಡೆಗೆ ಅವನು ಅಂದ ಮಾತೇನು? ಸಂಧಿಯೋ, ಸಂಗ್ರಾಮವೋ?

ದೂತ:—ಸಂಗ್ರಾಮವೆಂಬುದೇ ಆತನ ಅಭಿಪ್ರಾಯ. ಸನ್ನಿಧಾನವು ಇನ್ನುಮೇಲೆ ಮುಂದುವರಿಯದೆ, ರಾಮಯಾಮಾತ್ಯನನ್ನು ಬಿಟ್ಟುಕೊಟ್ಟು, ಉತ್ಕಲದ ಎಲ್ಲೆಯನ್ನು ಬಿಟ್ಟು ಹೊರಟುಹೋಗಬೇಕೆಂದೂ, ಇದಕ್ಕೆ ತಪ್ಪಿ, ಹೀಗೆಯೇ ಉತ್ಕಲ ಪ್ರಾಂತ್ಯವನ್ನು ಕೊರೆಯತೊಡಗಿದರೆ, ಉತ್ತಮ ಕ್ಷತ್ರಿಯ ವಂಶೀಯರಾದ ತಮ್ಮ ಕ್ಷಾತ್ರತೇಜವನ್ನು ನಿಚ್ಚಳವಾಗಿ ನೋಡಬಹುದೆಂದೂ, ಸನ್ನಿಧಾನದಲ್ಲಿ ಅರಿಕೆಮಾಡುವಂತೆ ತಿಳಿಸಿದ್ದಾನೆ.

ರಾಯ:—ಭೇಷ್! ಭೇಷ್!! ಅದಕ್ಕೆ ನೀನೇನು ಹೇಳಿದೆ?

ದೂತ:—ಇದರ ಫಲವು ಬೇಗನೆ ಅನುಭವಕ್ಕೆ ಬರುವುದೆಂದು ಹೇಳಿದೆನು; ದೇವಾ!

ರಾಯ,—"ಭಲೆ! ಚೆನ್ನಾಗಿ ಹೇಳಿದೆ. ಶತ್ರುವಿನ ಪಾಳಿಯದಲ್ಲಿ ತೋರಿದ ನಿನ್ನ ನಿರ್ಭಯತನಕ್ಕೆ ಇದೋ ಪುರಸ್ಕಾರ........'' ಎಂದು ಮೈಮೇಲಿದ್ದ ಜರತಾರಿ ವಲ್ಲಿಯೊಂದನ್ನು ತೆಗೆದು, ದೂತನ ಕೈಗೀಯಲು, ದೂತನು ಮುಂದಕ್ಕೆ ಬಂದು, ವಿನಯಭಾವದಿಂದ, ಬಾಗಿ ಬಾಗಿ, ಅದನ್ನು ತೆಗೆದುಕೊಂಡು, ಪುನಃ ಪುನಃ ಬಾಗಿ ನಮಸ್ಕರಿಸುತ್ತಾ ಹಿಂದಕ್ಕೆ ಸರಿದನು.

ತಿಮ್ಮರಸು. ''ಇನ್ನೇನೂ ಹೇಳಲಿಲ್ಲವೇ?" ಎಂದು ಕೇಳಿದನು.

ದೂತ:—ಇನ್ನೇನೂ ಇಲ್ಲ, ಮಹಾರಾಜಾ!

ತಿಮ್ಮರಸು:—ಸರಿ, ನೀನಿನ್ನು ಹೋಗಬಹುದು.

"ಶಿರಸಾಜ್ಞೆ'' ಎಂದು ದೂತನು ನೆಲಮುಟ್ಟಿ ಮೂರುಬಾರಿ ಸಲಾಮು ಹಾಕಿ, ಹೊರಟುಹೋದನು.

## ೮

## ಘೋರ ಪ್ರತಿಜ್ಞೆ!

ತಿಮ್ಮರಸನು ವಿಚಾರಸೂಚಕ ವದನದಿಂದ ಸಂಚಿಯನ್ನು ಬಿಚ್ಚಿ, ಒಳಗೆ ಅಡಕವಾಗಿದ್ದ ಪತ್ರವನ್ನು ತೆಗೆದನು.

ಕೃಷ್ಣದೇವರಾಯನು ಕ್ರೋಧಘೂರ್ಣಿತ ಸ್ವರದಿಂದ, "ಅಪ್ಪಾಜೀ! ಇತ್ತ ಕೊಡೋಣಾಗಲಿ ಪತ್ರವನ್ನು! ಏನೆಂದು ಬರೆದಿದೆಯೋ ನಾನೇ ನೋಡುವೆನು" ಎಂದು ಪತ್ರವನ್ನು ತಿಮ್ಮರಸನ ಕೈಯಿಂದ ತೆಗೆದುಕೊಂಡು, ಈ ರೀತಿಯಾಗಿ ಓದಿದನು:—

ಕಟಕಪುರಂ,

ಶ್ರಾವಣ-ಕೃಷ್ಣ-ದ್ವಿತೀಯೆ.

ಶ್ರೀಮದ್ವಿದ್ಯಾನಗರದ ಕರ್ನಾಟಕ ಸಾರ್ವಭೌಮನೆಂದು ಹೇಳಿಕೊಂಡು, ದೇಶಬಾಕತನದಿಂದ ಪುಂಡಾಟವಾಡುತ್ತಾ ಅಂಡಲೆಯುತ್ತಿರುವ ಕೃಷ್ಣದೇವನಿಗೆ—ಉತ್ಕಲ ದೇಶಾಧೀಶ್ವರ ರಾಜಾಪ್ರತಾಪರುದ್ರ ಗಜಪತಿ ಸಾರ್ವಭೌಮ ಕುಮಾರಿಯಾದ ತಿರುಮಲಾದೇವಿ ಎಚ್ಚರಿಸಿ ಬರೆದ ಪತ್ರವೇನೆಂದರೆ;—ಬಲ ದರ್ಪಗರ್ವಿತನಾಗಿ, ದಕ್ಷಿಣ ದೇಶದ ಸಣ್ಣ ಪುಟ್ಟ ಪಾಂಡಲಿಕರನ್ನು—ಗುಬ್ಬಿಯಮೇಲೆ ಬ್ರಹ್ಮಾಸ್ತ್ರಬಿಟ್ಟಂತೆ—ಗೆದ್ದುಬಿಟ್ಟ ಮಾತ್ರಕ್ಕೆ, ಇತರ ರಾಜರು—ತೇಜಸ್ವೀ ಕ್ಷತ್ರಿಯವಂಶಸಂಭೂತರು—ಗಡಗಡನೆ ನಡುಗಿ ಬಿಡುವರೆಂದು, ನೀನು ಯೋಚಿಸಿರುವಂತಿದೆ; ನಿನ್ನಂತಹ ಕುಲಬಾಹಿರರು—ಕ್ಷಾತ್ರಕುಲಕಳಂಕಿತರು—ಹಾಗೆತಿಳಿಯುವುದೇನೂ ಆಶ್ಚರ್ಯವಲ್ಲ! ಅಂತೆಯೇ, ನಾವು ಈವರೆಗೆ ನಿನ್ನನ್ನು ಸ್ವಲ್ಪ ಉಪೇಕ್ಷೆ ಮಾಡೋಣಾಯಿತು. ಈಗಂತೂ, ನಿನ್ನ ಕಾಟವು ಮಿತಿಮೀರಿ ಹೋಯಿತು. ನಮ್ಮ ದೊಡ್ಡಪ್ಪನನ್ನು ಕಾಡುಪಾಲುಮಾಡಿ, ನನ್ನ ಅಣ್ಣನನ್ನೂ ಮಂತ್ರಿಯನ್ನೂ ಸೆರೆಹಿಡಿದು, ನಮ್ಮ ಉದಯಗಿರಿ ಕೊಂಡವೀಡುಗಳನ್ನು ಜಯಿಸಿದುದಂತೂ ಹಾಗಿರಲಿ; ನಿನ್ನ ಮೂಲವನ್ನು ಕೂಡ ನೀನು ವಿಚಾರಮಾಡದೆ, ಪವಿತ್ರ ಗಜಪತಿ ವಂಶ ಸಂಭೂತೆಯಾದ ನನ್ನ ಮೇಲೆಯೂ ಕೈಯಿಕ್ಕಬರುವೆಯಾ? ನಿನಗೆ ತಕ್ಕ ಹೆಂಡಂದಿರು ಆ ಹಂಪೆ ಕೊಂಪೆಯಲ್ಲೆಲ್ಲಿಯೂ ಸಿಕ್ಕದೆ ಹೋದರೆ? ಭಷಕವು ಅಮೃತಪಾನವನ್ನು ಬಯಸಿದಂತೆ; ನಿನಗೆ ನಾನು ಹೆಂಡತಿಯಾಗಬೇಕೆ? ನನ್ನನ್ನು ವರಿಸುವಷ್ಟು ಧೈರ್ಯವು ನಿನಗಿದೆಯೋ? ಬಾ! ಹಾಗಾದರೆ; ವೀರ ಕ್ಷಾತ್ರ ನಂದಿನಿಯ ಪ್ರತಾಪವಾದರೂ ಹೇಗಿರುವುದೆಂದು ನೋಡು! ಶತ್ರುವಿಗೆ ಅವರು ಯಾವ ರೀತಿಯಾಗಿ ಮೃತ್ಯುವನ್ನೇ ವಧುವನ್ನಾಗಿ ಮಾಡುವರೆಂಬುದನ್ನು ಚೆನ್ನಾಗಿ ಅನುಭವಿಸಿ ನೋಡು. ಛೀ! ಮೂರ್ಖಶಿಖಾಮಣಿ!—

ನಮ್ಮ ಎರಡು ದುರ್ಗಗಳನ್ನು ಗೆದ್ದಮಾತ್ರಕ್ಕೆ, ಇಡೀ ದೇಶವನ್ನೇ ನುಂಗುವುದು ಸುಲಭವೆಂದು ತಿಳಿದೆಯಾ? ಬೇಡ! ಯಾವುದೂ ಅತಿಯಾಗಬಾರದು! "ಅತಿ ಸರ್ವತ್ರ ವರ್ಜಯೇತ್'' ಎಂಬ ನೀತಿವಾಕ್ಯವನ್ನು ನೆನಪಿಟ್ಟುಕೋ. ಮೇಲೆ ಮೇಲೆ ವಿಜಯವನ್ನೇ ಹೊಂದಿ, ಉನ್ನತ ಗತಿಗೇರಿದೆನೆಂದು ಹೆಮ್ಮೆಪಡಬೇಡ. ''ಅತ್ಯುತ್ಕರ್ಷಃ ಪತನ ಹೇತುಃ'' ಎಂಬುದೂ ಜ್ಞಾಪಕವಿರಲಿ. ನಿನ್ನ ದುರಾಶೆಯನ್ನು ಮುರಿದುಹಾಕಿ, ನಮ್ಮ ಮಂತ್ರಿಯನ್ನು ನಮಗೊಪ್ಪಿಸಿ, ಹಿಂದಿರುಗಿ ಹೋಗು. ಇದಕ್ಕೆ ಮಾಣದೆ, ಗರ್ವೋದ್ಧತನಾಗಿ, ನಮ್ಮಮೇಲೆ ಸಾಗಿಬರುವೆಯಾದರೆ, ನಮ್ಮವರೂ ಬಳೆತೊಟ್ಟು, ಸೀರೆಉಟ್ಟು ಮೂಲೆಯಲ್ಲಿ ಕುಳಿತಿಲ್ಲ; ಬಳೆ ತೊಟ್ಟು, ಸೀರೆಯುಟ್ಟುಕೊಂಡವರೂ ಕೂಡ, ವೀರಗಚ್ಚೆಹಾಕಿ, ಬಳೆಬಿಗಿದು, ಖಡ್ಗಪಾಣಿಗಳಾಗಿ, ರಣಚಂಡೀ ಸ್ವರೂಪದಿಂದ, ಸಮ ಸಮರಾಂಗಣದಲ್ಲಿ ನಿನಗೆ ಭೇಟಿಕೊಡುವರು! ಎಚ್ಚರವಿರಲಿ!!

ಇತಿ ಕ್ಷಾತ್ರತೇಜೋನಿಧಿ.

ರಾಜಾ ಪ್ರತಾಪರುದ್ರ ಗಜಪತಿಸಾರ್ವಭೌಮ ಕುಮಾರಿ

''ತಿರುಮಲಾದೇವಿ''

ಓದೋದುತ್ತಿರುವಾಗಲೇ, ಕೃಷ್ಣದೇವರಾಯನ ವಿಶಾಲವಕ್ಷಪ್ರದೇಶವು ಕ್ರೋಧಘನೋಚ್ಛ್ವಾಸದಿಂದ ಏರಿಳಿದೇರಲಾರಂಭಿಸಿತು. ಕಣ್ಣುಗಳು ಕಿಡಿಗಳನ್ನುಗುಳ ತೊಡಗಿದುವು. ಆ ಪತ್ರವನ್ನು ಬಲವಾಗಿ ಹಿಸುಕಿ, ಹಲ್ಲುಕಡಿಯುತ್ತಾ, "ಅಬ್ಬಾ! ಏನು ಬರೆದಿರುವಳು! ಪುಂಡಾಟಮಾಡುತ್ತಾ ಅಂಡಲೆಯುವ ಕುಲಹೀನ! ನಾಯಿ ಅಮೃತಪಾನವನ್ನು ಬಯಸಿದಂತೆ! ಉಂ—ನಾನೊಬ್ಬ ನಾಯಿಯಾದೆನೇ! ಶಹಭಾಸ್! ಅಪ್ಪಾಜೀ! ನೋಡಿದಿರಾ, ಹುಡುಗಿಯ ದರ್ಪೋನ್ಮತ್ತತೆ! ವಂಶಾಭಿಮಾನವು ನೆತ್ತಿಗೇರಿಹೋಗಿದೆ! ಅಬ್ಬಬ್ಬಾ! 'ಜಗನ್ಮೋಹಿನೀ' ಎಂದು ಪ್ರಖ್ಯಾತಳಾದ ಅವಳ ರೂಪುರಾಶಿಯಲ್ಲಿ, ಇಷ್ಟೊಂದು ಗರ್ವವೂ, ಇಷ್ಟೊಂದು ಕಾಠಿಣ್ಯವೂ ತುಂಬಿರುವುದೆಂದು ನಾನು ನೆನೆಯಲೇ ಇಲ್ಲ. ಇದೀಗ ವಿಪರೀತವಾಗಿದೆ! ವಿಪರೀತದ ಉಚ್ಚಶಿಖರಕ್ಕೇರಿದೆ! ಇದನ್ನು —ಈ ಗರ್ವೋನ್ಮತ್ತತೆಯ ಪಿತ್ತವನ್ನು ಇಳಿಸದಿದ್ದರೆ ಅಪ್ಪಾಜೀ! ನಾನು ವೀರಕ್ಷತ್ರಿಯ ನರಸರಾಯನ ಕುಮಾರನೇ ಅಲ್ಲ''! ಎಂದು ಮುದ್ದೆಯಾಗಿದ್ದ ಆ ಪತ್ರವನ್ನು ಕೆಳಕ್ಕೊಗೆದು ತುಳಿಯುತ್ತಾ,

"ಅಪ್ಪಾಜೀ! ಇಗೋ, ಪ್ರತಿಜ್ಞೆಮಾಡುತ್ತೇನೆ" ಎಂದು ಸರಕ್ಕನೆ ಕಟಿಯಿಂದ ಪಟ್ಟಗತ್ತಿಯನ್ನು ಸೆಳೆದು, "ಈ ಕತ್ತಿಯಾಣೆ! ಪಂಪಾಪತಿಯಾಣೆ!........"

ಚಿಂತಾಕ್ರಾಂತನಾಗಿ ಕುಳಿತಿದ್ದ ತಿಮ್ಮರಸನು, ರಾಯನ ಕ್ರೋಧಾವೇಶವನ್ನು ಕಂಡು, ದಿಗ್ಗನೆದ್ದು ರಾಯನ ಕೈಹಿಡಿದು, "ಪ್ರಭೂ! ಸೈರಿಸು! ಸೈರಿಸು!! 'ಕೋಪವೆಂಬುದನರ್ಥ ಸಾಧನ' ಗೊತ್ತಿಲ್ಲವೇ? ಕೋಪಾವೇಶದಿಂದ ಮೈಮರೆತು, ಏನಾದರೂ ಪ್ರತಿಜ್ಞೆ ಮಾಡಿಬಿಡುವುದು ಸರಿಯಲ್ಲ. ದುಡುಕಿ, ಆಮೇಲೆ ಪಶ್ಚಾತ್ತಾಪಪಡಬೇಕಾದೀತು"

"ಇಲ್ಲ, ಅಪ್ಪಾಜೀ!..........."

"ತಾಳು, ರಾಜಾ! ಈ ಪತ್ರವನ್ನು ಆ ಮುಗ್ಧೆ ತಂದೆಗೆ ತಿಳಿಯದೆ ಬರೆದಿರಬಹುದು. ಇದುವೇ ಗಜಪತಿರಾಜನ ಅಭಿಪ್ರಾಯವೆಂದು ತಿಳಿಯಕೂಡದು ......."

"ಅದು ಏನಾದರೂ ಇರಲಿ; ಈ ಪತ್ರಲೇಖಕಳನ್ನಂತೂ ನಾನು ಸುಮ್ಮನೆ ಬಿಡಲಾರೆ!"

"ಪ್ರಭೂ ! 'ಹೆಂಗಸರ ಬುದ್ಧಿ ಮುಂಗಸ ಬುದ್ಧಿ' ಎಂಬ ಗಾದೆ ಹಾಗಿರುತ್ತಾ ಒಬ್ಬ ಬರಿಯ ಮುಗ್ಧಹೆಂಗಸಿನ ಮೇಲೆ, ರಾಜಾಗ್ರೇಸರನಾದ ನೀನು ಇಷ್ಟು ಕೋಪವನ್ನು ವಹಿಸಬಹುದೇ?"

"ಅಪ್ಪಾಜೀ! ಈ ಪತ್ರಲೇಖಕಳು ನೀವು ಹೇಳುವಷ್ಟು ಮುಗ್ಧಳಲ್ಲ. ಮಹಾದುಸ್ಸಾಧ್ಯಳಾಗಿರುವಳು. ನೀವು ಹೇಳಿದ ಗಾದೆ, ಇವಳಿಗಲ್ಲ. ಹಳ್ಳಿಯ ಮುಗ್ಧೆಗೆ ಮಾತ್ರ! ಅಪ್ಪಾಜೀ! ಇಲ್ಲ, ಈ ಒಂದು ವಿಷಯದಲ್ಲಿ ಮಾತ್ರ ನಿಮ್ಮ ಮಾತನ್ನು ಮೀರಿಯೇ ತೀರುವೆನು. ನಾನು ವೀರಕ್ಷತ್ರಿಯ ವಂಶಸಂಭೂತನೆಂಬುದು ಸತ್ಯವಾದರೆ, ದುರಭಿಮಾನೋನ್ಮತ್ತೆಯಾದ ಆ ತಿರುಮಲೆಯನ್ನು ಹಿಡಿದುತರಿಸಿ, ಒಬ್ಬ ಸಾಮಾನ್ಯ ಸರದಾರನಿಗೆ ವಿವಾಹ ಮಾಡಿಸಿಬಿಡುತ್ತೇನೆ. ಇದೇ ನನ್ನ ಪ್ರತಿಜ್ಞೆ! ಈ ಪ್ರತಿಜ್ಞಾಪೂರ್ಣವಾಗದ ವಿನಃ ನಾನು ವಿದ್ಯಾನಗರ ರಾಜಧಾನಿಯನ್ನು ಪ್ರವೇಶಿಸುವುದಿಲ್ಲ!"

"ಶಿವ! ಶಿವ!!" ಎಂದು, ತಿಮ್ಮರಸನು ಕಿವಿಗಳನ್ನು ಕೈಯಿಂದ ಮುಚ್ಚಿಕೊಂಡು, "ರಾಜಾ ಇದು ಎಂತಹ ಘೋರ ಪ್ರತಿಜ್ಞೆ!" ಎಂದು ಕೇಳಿದನು.

"ಪಂಪಾಪತಿ ವಿರೂಪಾಕ್ಷನಾಣೆ! ಈ ಪ್ರತಿಜ್ಞಾ ಪೂರ್ಣವಾಗದಿದ್ದರೆ, ನಾವು ವಿದ್ಯಾನಗರವನ್ನೇ ಪ್ರವೇಶಿಸುವುದಿಲ್ಲ!"

"ಅಯ್ಯೋ! ಯುದ್ಧವಿಲ್ಲದೆ, ಉಪಾಯದಲ್ಲಿ ಕೆಲಸವಾಗಬೇಕೆಂದು ನೋಡಿದರೆ........ಹರ! ಹರ!!........ ...ಪ್ರಳಯವೇ ಸಂಭವಿಸುವಂತಾಯಿತಲ್ಲಾ!"

ರಾಯನು ಅತ್ತಿತ್ತ ತಿರುಗಾಡುತ್ತಾ, "ಹೌದು ಅಪ್ಪಾಜೀ! ಹೀಗಾಗದೆ ಬೇರೆ ಗತಿಯೇ ಇಲ್ಲ. ವೀರ ಕ್ಷತ್ರಿಯ ಕುಮಾರನಾದ ನಾನು, ಗರ್ವೋದ್ಧತನಾದ ಆ ಗಜಪತಿಗೂ ಅವನ ಮಗಳಿಗೂ - ನನ್ನ ಪೂರ್ಣ ಕ್ಷಾತ್ರತೇಜವನ್ನು ತೋರಿಸಿಯೇ ಬಿಡುವೆನು. ಇಷ್ಟವಿದ್ದರೆ, ನೀವು ನನಗೆ ಈ ಕಾರ್ಯದಲ್ಲಿ ಸಹಾಯ ಮಾಡಬಹುದು. ಇಲ್ಲದಿದ್ದರೆ ಸುಮ್ಮನೆ ಕುಳಿತುಕೊಳ್ಳೋಣಾಗಲಿ" ಎಂದು ಕತ್ತಿಯನ್ನು ಒರೆಯಲ್ಲಿ ಸೇರಿಸಿ, "ಎಲೋ! ಯಾರಲ್ಲಿ?" ಎಂದು ಗರ್ಜಿಸಿದನು. ತಕ್ಷಣವೇ ದ್ವಾರರಕ್ಷಕನು ಅಲ್ಲಿ ಪ್ರತ್ಯಕ್ಷನಾಗಿ, ಮುಜುರೆಮಾಡಿ ನಿಂತನು.

"ಹೋಗು! ಸರ್ವಸೇನಾಧ್ಯಕ್ಷನಾದ ರಾಮಲಿಂಗನಾಯಕನನ್ನು ಕೂಡಲೇ ಇಲ್ಲಿಗೆ ಬರಮಾಡು!" ಎಂದು ರಾಯನ ಅಪ್ಪಣೆಯಾಯಿತು.

## ೬

## ಗುರು ಶಿಷ್ಯ

ಗೌರವರ್ಣ; ಮುಖವು ದೀರ್ಘವೃತ್ತಾಕಾರ; ಬೋಳಾಗಿ ನಯವಾಗಿರುವ ತಲೆ; ಅದರ ಮಧ್ಯದಲ್ಲಿ ಅರ್ಧಗೋಣುದ್ದವಾಗಿ ನೆಟ್ಟಗೆ ನಿಂತು ತುದಿಯಲ್ಲಿ ಸ್ವಲ್ಪ ಬಾಗಿರುವ ಒಂದು ಗಿಡ್ಡ ಜುಟ್ಟು; ಹೊಳೆಯುವ ಕಣ್ಣುಗಳು; ಮನೋಹರವಾಗಿರುವ ಮೂಗು; ತಿದ್ದಿದ ಬಾಯಿ; ಚಟುವಟಿಕೆಯನ್ನು ಸೂಚಿಸುವ ತೆಳ್ಳಗಾದ ಮೈ. ಒಳ್ಳೆಯ ಜರತಾರಿಯ ಧೋತ್ರವನ್ನು ಚಂದವಾಗಿ ಪಂಚೆಗಚ್ಚೆ ಹಾಕಿ ಉಟ್ಟಿದ್ದಾನೆ. ಇನ್ನೊಂದು ಉತ್ತಮವಾದ ಜರಿಯ ವಲ್ಲಿಯನ್ನು ಮೈಮೇಲೆ ಹೊದ್ದುಕೊಂಡಿದ್ದಾನೆ. ಟೊಂಕದಲ್ಲಿ ಬಂಗಾರದ ನೇವಳವೂ, ಬೆರಳಿನಲ್ಲಿ ಉಂಗುರವೂ, ಕಿವಿಗಳಲ್ಲಿ ಕುಂಡಲಗಳೂ ಥಳಥಳನೆ ಹೊಳೆಯುತ್ತ, ಅವನಿಗೆ ಶೋಭಾಯಮಾನವಾಗಿ ಇದ್ದವು. ಇಷ್ಟೇ ಅಲ್ಲದೆ,

ವಲ್ಲಿಯ ಎಡೆಯಿಂದೆ, ಕಟಿಭಾಗದಲ್ಲಿ ಕೆಳಕ್ಕೆ ಇಳಿದಿರುವ, ಶುಭ್ರವಾದ ಯಜ್ಞೋಪವೀತದಲ್ಲಿಯೂ ಎರಡು ಮೂರು ಉಂಗುರಗಳು ಜಗಜಗಿಸುತ್ತ ನೇತಾಡುತ್ತಿದ್ದುವು. ಕೈಯಲ್ಲಿ ಯಾವುದೋ ಒಂದು ಪುಸ್ತಕವಿದ್ದಿತು. ಪ್ರಿಯ ವಾಚಕರೇ! ಇವನು ಯಾರೆಂದು ನೀವು ಯೋಚಿಸುವಿರೇನು? ಹಾಗಾದರೆ— ಈತನೇ ಸಮಸ್ತ ಕರ್ನಾಟಕದ ಬಾಲ ಗೋಪಾಲಾದಿ ವೃದ್ಧಪರ್ಯಂತ ಸುಪರಿಚಿತನಾದ ತೆನ್ನಾಲರಾಮಕೃಷ್ಣ! ಕವಿ! ಮಹಾಕವಿ!! ರಾಯನ ಆಸ್ಥಾನ ವಿಕಟಕವೀಶ್ವರ! ಇವನೆಲ್ಲಿಗೋ ಹೋಗುತ್ತಿರುವನಲ್ಲ? ಎಲ್ಲಿಗೆ ಹೋಗಲಿಕ್ಕೂ, ಕಡೆಗೆ ರಾಯನ ಅಂತಃಪುರಕ್ಕೆ ಹೋಗಲಿಕ್ಕೂ, ಅವನಿಗೆ ಏನೂ ಪ್ರತಿಬಂಧಕವಿಲ್ಲ. ಆದರೆ, ಅವನು, ಈಗ ಅಲ್ಲಿಗೆಲ್ಲಿಗೂ ಹೋಗಲಿಲ್ಲ. ನೆಟ್ಟಗೆ ತಿಮ್ಮರಸು ಮಂತ್ರಿಯ ಶಿಬಿರದೊಳಗೆ ಹೊಕ್ಕುಬಿಟ್ಟನು. ಅಗೋ! ಬಣ್ಣದ ಜಮಖಾನೆಯಮೇಲೆ ದಿಂಬಿಗೆ ಒರಗಿ, ಮುನಿಯಂತೆ ಕುಳಿತಿದ್ದಾನೆ ತಿಮ್ಮರಸು. ರಾಮಕೃಷ್ಣನು ಅವನ ಇದಿರಿನಲ್ಲಿ ನಿಂತು, "ನಮಸ್ಕಾರ ಗುರುದೇವಾ! ನಮಸ್ಕಾರ!!" ಎಂದು ಬಾಯಿಯಿಂದ ಮಾತ್ರ ಹೇಳಿದನೇ ಹೊರತು ಕೈಯನ್ನು ಜೋಡಿಸಲೇ ಇಲ್ಲ.

ತಿಮ್ಮರಸು ಮೆಟ್ಟಿಬಿದ್ದು ತಲೆಯೆತ್ತಿ ನೋಡಿ, "ಓಹೋ! ರಾಮಕೃಷ್ಣನೇ! ನಮಸ್ಕಾರ! ನಮಸ್ಕಾರ!! ನಿನಗೆ ಭರ್ತಿ ನೂರು ವರ್ಷ ಆಯುಷ್ಯ" ಎಂದನು.

"ಶಿರೋಧಾರ್ಯ! ಶಿರೋಧಾರ್ಯ! ಅದೇಕೆ ಹಾಗೆಂದಿರಿ?"

"ನಾನು ಈಗತಾನೇ ನಿನ್ನನ್ನು ನೆನೆಸಿದೆ; ನಿನಗೆ ಹೇಳಿಕಳುಹಿಸಬೇಕೆಂದೂ ಯೋಚಿಸುತ್ತಿದ್ದೆ. ಅಷ್ಟರಲ್ಲಿ ನೀನೇ ಬಂದುಬಿಟ್ಟೆದ್ದಿ"

"ಆಹಾ! ಎಂತಹ ಸಂಘಟನೆ! ಧನ್ಯನಾದೆ. ಗುರು ನೆನಸಿದಾಗಲೇ ಬಂದೊದಗುವ ಶಿಷ್ಯನು ಅವನೆಷ್ಟು ಧನ್ಯ!!"

"ಅಂತಹ ಶಿಷ್ಯನನ್ನು ಪಡೆದ ಈ ಗುರು ಕೂಡಾ ಎಷ್ಟು ಧನ್ಯನೋ! ಇದೇನು ಗ್ರಂಥವಪ್ಪಾ ನಿನ್ನ ಕೈಯಲ್ಲಿ?"

"ನಮ್ಮ ತಿಮ್ಮಣ್ಣನ ಭಾರತ, ಗುರುವರ್ಯಾ!"

"ನನ್ನ ಮುಂದೆ ಓದಲಿಕ್ಕಾಗಿ ತಂದಿದ್ದೀಯೇನು?"

"ಅಲ್ಲ ಅಲ್ಲ, 'ಪುಸ್ತಕಂ ಹಸ್ತಭೂಷಣಂ' ಎಂಬಂತೆ, ಬರಿಯ ಕೈಯಲ್ಲಿ ಬರುವುದಕ್ಕೆ ಬದಲಾಗಿ ಈ ಗ್ರಂಥವನ್ನು ಹಿಡಿದುಕೊಂಡು ಬಂದೆ! ಗುರುದೇವಾ! ಕುಳಿತುಕೊಳ್ಳಬಹುದಷ್ಟೆ?"

"ಅಗತ್ಯವಾಗಿ ಕುಳಿತುಕೋ ರಾಮಕೃಷ್ಣ"

ರಾಮಕೃಷ್ಣನು ಗ್ರಂಥವನ್ನು ಕೆಳಗಿಟ್ಟು, ಜಮಖಾನೆಯಮೇಲೆ ಕುಳಿತು, ಟೊಂಕದಿಂದ ಚಿನ್ನದ ಪುಡಿಬುರುಡೆಯನ್ನು ತೆಗೆದು, ಬೆರಳಿನಿಂದ ಅದನ್ನು ತಟ್ಟಿ, ಎಡ ಅಂಗಯ್ಯಮೇಲೆ ಒಂದಿಷ್ಟು ಚೂರ್ಣವನ್ನು ಸುರಿದು, ಒಂದು ಚಿಟಿಕೆ ಆ ಜ್ಞಾನಚೂರ್ಣವನ್ನು ಬಲಗೈಯ್ಯಲ್ಲಿ ಹಿಡಿದುಕೊಂಡು ಬುರುಡೆಯನ್ನು ಮತ್ತೆ ಸೊಂಟದಲ್ಲಿ ಸಿಕ್ಕಿಸಿ, ಬಲಗಯ್ಯ ನಸ್ಯದ ಚಿಟಿಕೆಯನ್ನು ಮೂಗಿನ ಬಳಿಗೆ ಒಯ್ಯುತ್ತಾ, ಫಕ್ಕನೆ ಅರ್ಧದಲ್ಲಿಯೇ ನಿಲ್ಲಿಸಿ, ಬೆಪ್ಪು ನೋಟದಿಂದ ತಿಮ್ಮರಸನ ತಲೆಯನ್ನು ನೋಡಲಾರಂಭಿಸಿದನು.

ತಿಮ್ಮರಸನು ಆಶ್ಚರ್ಯದಿಂದ, "ಏನು ನೋಡುತ್ತೀ ರಾಮಕೃಷ್ಣ ?" ಎಂದು ಕೇಳಿದನು.

ರಾಮಕೃಷ್ಣನು ಮುಖವನ್ನು ಬಾಡಿಸಿಕೊಂಡು, "ಏನಿಲ್ಲ ಗುರುವರಾ! ತಮ್ಮ ಸೇವೆಯಲ್ಲಿ, ಒಂದು ಸಣ್ಣ ತಪ್ಪಾಯಿತು" ಎಂದನು.

ತಿಮ್ಮರಸನು ಅಚ್ಚರಿಯಿಂದ, "ಅದೇನು" ಎಂದು ಕೇಳಿದನು.

"ಕ್ಷಮಿಸಬೇಕು ಗುರುದೇವಾ!" ಎಂದು ರಾಮಕೃಷ್ಣನು ಕೈಜೋಡಿಸಿದನು. ಚಿಟಿಕೆಯಲ್ಲಿದ್ದ ನಸ್ಯವು ಕೆಳಗೆ ಬಿದ್ದುಹೋಯಿತು.

"ಅದೇನಪ್ಪಾ! ಸಂಗತಿ?"

"ಗೊತ್ತಿದ್ದೂ, ಪುನಃ ನನ್ನನ್ನು ಕೇಳಿ ಈ ಶಿಷ್ಯನನ್ನು ನೋಯಿಸಬಾರದು ಗುರುವರಾ!"

ತಿಮ್ಮರಸನು ತುಸು ಯೋಚಿಸಿ, "ಇಲ್ಲ, ರಾಮಕೃಷ್ಣಾ! ನಿನ್ನ ಮಾತಿನ ಮರ್ಮವೇ ತಿಳಿಯಲಿಲ್ಲ ನನಗೆ" ಎಂದನು.

"ಆ! ಇದು ಚೆನ್ನಾಗಿದೆ. ನಾ........ನು........"

"ಏನಪ್ಪಾ, ಭಯ! ಮಾತು ನಿಲ್ಲಿಸಿಬಿಟ್ಟೆಯಲ್ಲ?"

"ನಾನು........ಗುರು! ಹಂಡೆಯನ್ನೋ, ಚೀಲವನ್ನೋ ತೆಗೆದುಕೊಂಡು ಬರಬೇಕಿತ್ತು. ಅದು ಈ ಮಂಕು ಬುದ್ಧಿಗೆ ತೋರಲಿಲ್ಲ. ಕ್ಷಮಿಸಬೇಕು. ಗುರುವರಾ! ಈಗಲೇ ತಂದೆ," ಎಂದು, ರಾಮಕೃಷ್ಣನು ಭಯ ವಿನಯದಿಂದ ನಡುಗುತ್ತಾ, ಮೆಲ್ಲಗೆ ಏಳಲಾರಂಭಿಸಿದನು. ತಿಮ್ಮರಸನು ಆಶ್ಚರ್ಯದಿಂದ, ರಾಮಕೃಷ್ಣನ ಮುಖವನ್ನೇ ಎವೆಯಿಕ್ಕದೆ ನೋಡುತ್ತಾ, "ಹಂಡೆ, ಚೀಲವೇ! ಯಾಕೆ ಅವು? ನಿನಗೇನಾದರೂ ಹುಚ್ಚುಗಿಚ್ಚು........"

"ಸಾಕು, ಗುರುದೇವಾ! ನನ್ನ ತಪ್ಪಿತಕ್ಕಾಗಿ, ನೀವು ಹೀಗೆ ಕುಚೇಷ್ಟೆ ಮಾಡುತ್ತೀರೆಂದು ಗೊತ್ತಾಯಿತು. ಇದೋ, ಈಗಲೇ ತಂದೇತರುವೆನು" ಎಂದು ರಾಮಕೃಷ್ಣನು ಹೊರಡಲು ಅಣಿಯಾದನು.

"ಇದೆಂತಹ ವಿಚಿತ್ರವರ್ತನೆ? ರಾಮಕೃಷ್ಣಾ! ಒಂದೂ ತಿಳಿಯದ ನನ್ನನ್ನೇ ಚೇಷ್ಟೆಮಾಡುತ್ತಿರುವೆಯಲ್ಲಾ!"

"ಹರಿ, ಹರಿ" ಎಂದು ರಾಮಕೃಷ್ಣನು ಕಿವಿಗಳನ್ನು ಮುಚ್ಚಿಕೊಂಡು, "ಏನು ಗುರುವರಾ! ಪೂಜ್ಯರಾದ ನಿಮ್ಮನ್ನು, ನಾನು ಚೇಷ್ಟೆಮಾಡುವೆನೇ? ಒಂದು ಸಣ್ಣ ಲೋಪವಾದ ಮಾತ್ರಕ್ಕೆ, ಈ ಪಾಮರಶಿಷ್ಯನನ್ನು ಹೀಗೂ ನಿಂದಿಸಬಹುದೇ? ಆಗಲಿ. ಶಿರೋಧಾರ್ಯ! ಈಗಲೇ ನಿಮ್ಮ ಸಿಟ್ಟನ್ನು ಶಾಂತ ಮಾಡುವೆನು" ಎಂದು ಅವಸರದಿಂದ ಹೋಗಲಾರಂಭಿಸಿದನು. ತಿಮ್ಮರಸನು ಎದ್ದು, ಅವನ ಕೈಹಿಡಿದು ನಿಲ್ಲಿಸಿ, "ಎಲ್ಲಿಗೆ ಹೋಗುತ್ತೀ, ರಾಮಕೃಷ್ಣಾ!" ಎಂದು ಕೇಳಿದನು.

"ಎಲ್ಲಿಗೂ ಇಲ್ಲ; ಇಲ್ಲೇ ನನ್ನ ಬಿಡದಿಯ ಕಡೆಗೆ ಹೋಗಿ, ಬಿಸಿ ನೀರು ಕಾಯಿಸುವ ದೊಡ್ಡ ಹಂಡೆಯನ್ನೇ ತಂದುಬಿಡುವೆನು. ಅಥವಾ ಅಕ್ಕಿ ಚೀಲವನ್ನಾದರೂ ಹುಡುಕುವೆನು" ಎನ್ನುತ್ತಾ ಹೊರಡಲುದ್ಯುಕ್ತನಾದನು.

"ಯಾವುದಕ್ಕಪ್ಪಾ? ನೀನೇನು ನಿದ್ದೆಗಿದ್ದೆಮಾಡಿ ಬಂದೆಯೋ? ನನಗೆ ಬಿಸಿನೀರು ಕಾಯಿಸಲು, ಹಂಡೆ ಇಲ್ಲವೆಂದು ನಿನಗೇನಾದರೂ ಕನಸು ಗಿನಸು ಆಯಿತೇನು?" ಎಂದನು ತಿಮ್ಮರಸ.

"ಹಾಗಾದರೆ, ಚಿಕ್ಕದೊಂದು ಅನ್ನದ ತಪ್ಪಲೆ ಸಾಕೋ?"

"ಎಲಾ! ಬೆಪ್ಪಾ! ಯಾವುದಕ್ಕೋ?"

ರಾಮಕೃಷ್ಣನು ತಿಮ್ಮರಸನ ತಲೆಯನ್ನು ನೋಡುತ್ತಾ, "ಉ, ಹು, ಸಾಲದು ಸಾಲದು. ಭಾರಿಯಾದ ಹಂಡೆ ಚೀಲಗಳೇ ಬೇಕು. ಈಗಲೇ ತರುವೆನು" ಎಂದು ಓಡಲನುವಾದ ರಾಮಕೃಷ್ಣನನ್ನು ತಿಮ್ಮರಸನು ಪುನಃ ತಡೆದು, "ನಿನ್ನ ಕಾಲಿಗೆ ಬೀಳುತ್ತೇನೆ, ರಾಮಕೃಷ್ಣಾ! ಯಾವುದಕ್ಕೆಂದು ಹೇಳೋ" ಎಂದು ಕೇಳಿದನು.

"ಇದೇನು ಹೀಗೆ ಕೇಳುತ್ತೀರಿ ಗುರುಗಳೇ? ನೀವು ಹೊತ್ತುಕೊಂಡುದನ್ನು ತುಂಬಿಸಲಿಕ್ಕಲ್ಲದೆ, ಮತ್ತಾವುದಕ್ಕೆ? ಅಯ್ಯೋ! ಎಷ್ಟು ದೊಡ್ಡ ಭಾರವಿದೆ, ನನ್ನ ಗುರುವಿನ ತಲೆಯಲ್ಲಿ" ಎಂದನು ರಾಮಕೃಷ್ಣ.

ತಿಮ್ಮರಸನು ತಲೆಯನ್ನು ಸವರುತ್ತಾ, "ನನ್ನ ತಲೆಯಲ್ಲಿ, ಏನಿದೆ? ........ಏನಿದೆ?" ಎಂದು ಕೇಳಿದನು.

ಆಗ ರಾಮಕೃಷ್ಣನು, "ಚೆನ್ನಾಗಿದೆ! ಚೆನ್ನಾಗಿದೆ! ನನ್ನನ್ನು ಪರೀಕ್ಷಿಸುವಿರೇನು? ಆಗಲಿ, ದೊಡ್ಡ ದೊಡ್ಡ—ಭಾರೀ ದೊಡ್ಡ—ಆಲೋಚನಾ ರಾಶಿಯನ್ನೇ ಹೊತ್ತುಕೊಂಡಿದ್ದೀರಲ್ಲ, ಗುರುದೇವಾ!" ಎಂದನು.

"ಅಯ್ಯೋ! ರಾಮಕೃಷ್ಣಾ!" ಎಂದು ತಿಮ್ಮರಸನು ಗಹಗಹಿಸಿ ನಕ್ಕು, "ಇದಕ್ಕೊ ಇಷ್ಟೆಲ್ಲಾ ಅಂಗದನ ಬಾಲದ ಪೀಠಿಕೆ?" ಎಂದು ಕೇಳಿದನು.

"ಅಯ್ಯೋ! ಭಾರದಿಂದ ಗುರುವಿನ ಮುಖವು ಎಷ್ಟು ಇಳಿದುಹೋಗಿದೆ" ಎಂದನು ರಾಮಕೃಷ್ಣ.

ತಿಮ್ಮರಸನು ನಗುತ್ತಾ, "ಆಹಾ! ವಿಕಟೇಶ್ವರನೇ ಸರಿ! ಸುಮ್ಮನೇ ನಿನಗೆ ನಮ್ಮ ಮಹಾರಾಜನು ವಿಕಟಕವೀಶ್ವರನೆಂದು ಬಿರುದುಕೊಟ್ಟನೇ?" ಎಂದು ರಾಮಕೃಷ್ಣನ ಬೆನ್ನು ತಟ್ಟಿ, ಜುಟ್ಟನ್ನು ನೀವಿ ತಲೆಯನ್ನು ಸವರುತ್ತಾ, "ಅಯ್ಯೋ! ವಿಕಟಕವೀಶ್ವರಾ! ನನ್ನ ಆಲೋಚನೆಯರಾಶಿಯನ್ನು ತುಂಬಿಸಲಿಕ್ಕೆ ಹಂಡೆ ಚೀಲಗಳು ಯಾಕಪ್ಪಾ? ನಿನ್ನ ಈ ಮಂಡೆಯೊಂದೇ ಸಾಲದೇನು?" ಎಂದನು.

ರಾಮಕೃಷ್ಣನು ತಲೆಯಾಡಿಸುತ್ತಾ, "ಹಾ! ಭಲೆ! ನಿಮ್ಮ ಈ ಇಷ್ಟು ದೊಡ್ಡ ತಲೆಯೊಳಗೇ ತುಂಬಿ ಹಿಡಿಸಲಾರದ ರಾಶಿ, ನನ್ನ ಈ ಸಣ್ಣ ಮಂಡೆಯೊಳಗೆ ಹೇಗೆ ಹಿಡಿದೀತು? ಒಂದುವೇಳೆ ಒತ್ತಿ ಒತ್ತಿ ತುಂಬಿದರೆ ಹೇಗೋ

ಹಿಡಿದೀತೆಂದು ಹೇಳಿದರೂ, ನೀವು ಕೇಳಿದಾಗ ಒಂದೊಂದೇ ಆಲೋಚನೆ ಯನ್ನು ತೆಗೆದು, ನಿಮ್ಮ ಮುಂದೆ ಇಡಬೇಕೋ, ಬೇಡವೋ? ಇವಕ್ಕೆಲ್ಲಾ ಅನು ಕೂಲವಾಗುವ ಹಾಗೆ ದೊಡ್ಡದೊಂದು ಹಂಡೆಯೊಳಗೊ, ಚೀಲದೊಳಗೋ ತುಂಬಿಸಿ, ಬಾಯಿಕಟ್ಟಿದರೆ ಸಾವಧಾನವಾಗಿ, ಒಂದೊಂದನ್ನೇ ತೆಗೆದು ನೋಡಿ, ಬೇಕಾದುದನ್ನು ಆರಿಸಿಕೊಳ್ಳಬಹುದಲ್ಲಾ;" ಎಂದು ವಿವರಿಸಿದನು.

"ಓಹೋ! ಹಾಗೋ, ಸದ್ಯ ನಿನ್ನ ಮುಂಡೆಯೊಳಗೆ ತುಂಬಿಸಿ ಉಳಿದರ ಲ್ಲವೇ ಹಂಡೆ ಚೀಲಗಳ ಮಾತು? ಇರಲಿ, ರಾಮಕೃಷ್ಣಾ! ನಾನು ಕರೆಯಿ ಸದೆ, ನೀನಾಗಿಯೇ ಬಂದೆಯಲ್ಲಾ, ಕಾರಣವೇನು ಹೇಳು?"

"ಏನು ಹೇಳಲಿಕ್ಕೂ, ನನ್ನ ಯೋಚನಾಕಲಾಚೂರ್ಣವೇ ಕೆಳಗೆ ಚೆಲ್ಲಿಹೋಯಿತು—ನಿಮ್ಮ ಆಲೋಚನೆಯ ರಾಶಿಯನ್ನು ಕಂಡು" ಎಂದು ರಾಮಕೃಷ್ಣನು ಟೊಂಕದಿಂದ ಪುಡಿಬುರುಡೆಯನ್ನು ತೆಗೆಯುತ್ತಾ, "ಹಾ! ಸ್ಪರ್ಶಮಾತ್ರದಿಂದಲೇ ಜ್ಞಾನ ಬಂತು! ನೆನಪಿಗೆ ಬಂತು!—ಅದೇ—ನೀವು ನನ್ನನ್ನು ನೆನೆಸಿದೆನೆಂದಿರಲ್ಲಾ, ಅದೇ ಕಾರಣ, ನಾನು ತಾನಾಗಿಯೇ ಬರ ಲಿಕ್ಕೆ!" ಎಂದನು.

"ಪರಿಹಾಸ್ಯವು ಸಾಕು, ರಾಮಕೃಷ್ಣಾ! ಸರಿಯಾಗಿ ಹೇಳು!"

"ಹಾಗಾದರೆ—ಗುರುದೇವಾ! ನೀವು ನನ್ನನ್ನು ಏಕೆ ನೆನೆಸಿದಿರೋ ಹೇಳೋಣವಾಗಲಿ, ಆ ಮೇಲೆ ಶಿಷ್ಯನ ಮಾತು".

"ಅದಂತೂ ನಿನಗೆ ಗೊತ್ತೇ ಆಗಿದೆಯಲ್ಲಾ!"

"ಏನದು?........"

"ಅದೇ—ನಾನು ನೆನೆಸಿದೆ, ನೀನು ಬಂದಿದ್ದೀ; ಇಷ್ಟೇ ಗೊತ್ತಾಯಿತ ಲ್ಲದೆ, ಹೆಚ್ಚಿಗೆ ಗೊತ್ತಾಗಲು ನಾನೇನು ನಿನ್ನಂತೆ ಅಂತರ್ಜ್ಞಾನಿಯೇ?"

"ಓಹೋ; ಅಂತರ್ಜ್ಞಾನಿ! ಇನ್ನೊಂದು ಹೊಸ ಬಿರುದು ಬಂತು ನನಗೆ—ಉಂ, ಎಲ್ಲಾ ಈ ಜ್ಞಾನಚೂರ್ಣಪ್ರಭಾವ;" ಎಂದು ನಸ್ಯವನ್ನು ಅಂಗಯ್ಯಿಗೆ ಸುರಿದು, ಚಿಟಿಕೆ ತೆಗೆದುಕೊಂಡು, ಬುರುಡೆಯನ್ನು ಟೊಂಕದಲ್ಲಿ ಸಿಕ್ಕಿಸಿ, ಸರಬರನೆ ನಸ್ಯವನ್ನು ಎಳೆದು ಎರಡುಸೀನು ಹೊಡೆದು, "ಆಹಾ!

ಜ್ಞಾನಚೂರ್ಣ, ಗುರುದೇವಾ! ನಾನು ಬಂದುದರಲ್ಲಿ ಅಂತಹ ವಿಶೇಷ ಕಾರಣ ಗೀರಣಗಳು ಯಾವುವೂ ಇಲ್ಲಾ. ಅರಮನೆಯಲ್ಲಿ ಜರುಗಿದ ಈ ವಿಶೇಷ ಸಂದರ್ಭವೇ ನನ್ನನ್ನು ಇಲ್ಲಿಗೆ ಎಳೆದುಕೊಂಡು ಬಂತು"

"ಮತ್ತೆ, ಅದೇನು ಬಂತಪ್ಪಾ?"

ರಾಮಕೃಷ್ಣನು ವಲ್ಲಿಯಿಂದ ಮೂಗನ್ನು ಒರೆಸಿಕೊಂಡು, ಪುನಃ ಎರಡುಬಾರಿ ಸೀನು ಕಾರಿ—"ಏನಿದು ಗುರುವರಾ! ಎಲ್ಲದಕ್ಕೂ ಸೂತ್ರಧಾರಿಗಳಾಗಿದ್ದ ನೀವು, ಈಗ ಯಾವುದನ್ನೂ ತಿಳಿಯದವರಂತೆ ಕೇಳುವಿರಲ್ಲಾ? ಕಾಣುವುದಿಲ್ಲವೇ, ನಮ್ಮ ಸೇನಾಸಾಗರದಲ್ಲಿ ಎದ್ದ ಗಲಿಬಿಲಿ? ನಾಳೆ ಮುಂಜಾನೆಯೋ ವಿಜಯಪ್ರಯಾಣಹೊರಡಬೇಕೆಂದು ಡಮುಡಮನೆ ಡಂಗುರ ಸಾರಿತಲ್ಲಾ? ಸೇನೆಗೆ ಸೇನೆಯೇ ಯುದ್ಧೋಲ್ಲಾಸದಿಂದ ಹುರಿದುಂಬಿ, ಆಯುಧಗಳನ್ನು ಜಳಪಿಸುತ್ತಾ, ಉಬ್ಬುಬ್ಬಿ ಪ್ರಚಂಡ ಧ್ವನಿಯಿಂದ ವಿಜಯಘೋಷವನ್ನು ಮಾಡುತ್ತಾ ಇದೆ. ಶಾಂತವಾಗಿದ್ದ ಸಾಗರದಲ್ಲಿ, ಅಕಸ್ಮಾತ್ತಾಗಿ ಹೀಗೇಕಾಯಿತೋ, ಎಂಬ ಕುತೂಹಲದಿಂದಲೇ ಈ ಬಡಹಾರುವನ ಹೊಟ್ಟೆ ತುಂಬಿದೆ—ಇಂದು ಮಧ್ಯಾಹ್ನದ ಭೋಜನ ಸಹಾ ಲಾಭವಾಯಿತು. ಇದರ ಸೂತ್ರಧಾರಿಗಳಾದ ನಿಮ್ಮನ್ನು ವಿಚಾರಿಸಿಬಿಟ್ಟರೆ ಎಲ್ಲಾ ತಿಳಿಯುವುದೆಂದು ಇಲ್ಲಿಗೆ ಬಂದೆ. ನಿಮ್ಮ ಅಪಾರವಾದ ಊಹನಾಶಕ್ತಿಗೆ ಇದೂ ನಿಲುಕದೆ ಹೋಯಿತೇನು?"

"ಹಾಗೆಯೇ ಸರಿ, ರಾಮಕೃಷ್ಣಾ! ನಿಲುಕಲಿಲ್ಲ; 'ಗುರುವಿಗಿಂತ ಶಿಷ್ಯನೇ ಮುಂದು' ಎಂಬ ಮಾತಿಗೆ ಸಂದೇಹವುಂಟೆ? ಬಾ ಕುಳಿತುಕೊ! ನಾನು ನೆನೆದುದೂ ಇದಕ್ಕಾಗಿಯೇ; ನೀನು ಬಂದುದೂ ಅದಕ್ಕಾಗಿಯೇ!" ಎಂದು ತಿಮ್ಮರಸನು ರಾಮಕೃಷ್ಣನ ತೋಳನ್ನು ಹಿಡಿದು, ಜಮಖಾನೆಯಮೇಲಕ್ಕೆಳೆದನು.

"ಸರಿ ಆಯಿತು ಹಾಗಾದರೆ! ನಾನು ಗೆಲ್ಲಲೂ ಇಲ್ಲ, ನೀವು ಸೋಲಲೂ ಇಲ್ಲ ಎರಡೂ ಸರಿ!" ಎನ್ನುತ್ತಾ ರಾಮಕೃಷ್ಣನು ಜಮಖಾನೆಯಮೇಲೆ ಪದ್ಮಾಸನವನ್ನು ಹಾಕಿ ಕುಳಿತನು.

## ೧೦
# ಪರಿಣಾಮವು ಹೇಗಾಗುವುದೋ?

"ಸರಿ! ಗುರುದೇವಾ! ಗತಿಯೇನು?"

"ರಾಮಕೃಷ್ಣಾ ಮಹಾಪ್ರಳಯವೇ ಸಂಭವಿಸುವಂತಿದೆ!"

"ಹಾ ಹಾ" ಎಂದು ರಾಮಕೃಷ್ಣನು ಬಾಯಿತೆರೆದು, ಪ್ರಶ್ನಾರ್ಥಕ ದೃಷ್ಟಿಯಿಂದ, ತಿಮ್ಮರಸನ ಮುಖವನ್ನು ನೋಡಲಾರಂಭಿಸಿದನು.

"ಮಹಾರಾಜನು ಅದೊಂದು ಘೋರಪ್ರತಿಜ್ಞೆಯನ್ನು ಮಾಡಿಬಿಟ್ಟಿದ್ದಾನೆ ರಾಮಕೃಷ್ಣಾ"

"ಅಯ್ಯೋ...........ಏನೆಂದು?"

"ರಾಮಕೃಷ್ಣ! ಉತ್ಕಲಾಧೀಶನ ಮಗಳನ್ನು ಹಿಡಿದುತರಿಸಿ, ಸಾಮಾನ್ಯನೊಬ್ಬನಿಗೆ ಮದುವೆಮಾಡಿಸದಿದ್ದರೆ ತಾನು ವಿದ್ಯಾನಗರವನ್ನೇ ಪ್ರವೇಶಿಸಲಾರೆನೆಂದು!"

"ಆಃ! ವಿಚಿತ್ರ! ಆಶ್ಚರ್ಯ!........ಫಕ್ಕನೆ ಹೀಗಾಗಲು ಕಾರಣ?!"

"ರಾಮಕೃಷ್ಣ! ಇಲ್ಲಿಂದ ಸಂಧಿಪತ್ರವನ್ನು ತೆಗೆದುಕೊಂಡು ನಮ್ಮ ದೂತನು ಕಟಕಪುರಿಗೆಹೋಗಿದ್ದ ಸಂಗತಿ ನಿನಗೆ ಗೊತ್ತೇ ಇದೆಯಲ್ಲಾ?"

"ಓ! ನಮ್ಮ ದಾಕೋಜಿಯಲ್ಲವೆ ಹೋದುದು?"

"ಹೌದು! ಆ ದೂತನ ಕೈಯಲ್ಲಿ ಉತ್ಕಲೇಶನ ಕುಮಾರಿ, ನಮ್ಮ ರಾಜನನ್ನು ಅತೀ ತುಚ್ಛವಾಗಿ ನಿಂದಿಸಿ, ಪತ್ರವನ್ನು ಬರೆದುಕೊಟ್ಟು ಕಳುಹಿಸಿದ್ದಾಳೆ"

"ಓಹೋ........ತಿಳಿಯಿತು! ತಿಳಿಯಿತು! ಆ ಕಾರಣದಿಂದಲೇ ರಾಜನು ಹಾಗೆ ಪ್ರತಿಜ್ಞೆಮಾಡಿಬಿಟ್ಟುದು. ಆದಕಾರಣವೇ ಹೀಗೆ ಡಂಗುರ ಸಾರಲ್ಪಟ್ಟಿತು........ಅಲ್ಲವೇ?"

"ಹೌದು ರಾಮಕೃಷ್ಣ! ಹೌದು........"

"ಭಲೆ! ಭಲೆ! ರಾಜಕುಮಾರಿಯ ಸೊಕ್ಕಿಗೆ ಸರಿಯಾದ ಪ್ರತಿಜ್ಞೆಯನ್ನೇ ಮಾಡಿದನು—ನಮ್ಮ ಮಹಾರಾಜ! ಶಹಭಾಷ್! ವೀರಧೀರ ಕ್ಷತ್ರಿಯ

ಶ್ರೀಕೃಷ್ಣದೇವರಾಯ ಮಹಾರಾಯ ಶಹಭಾಷ್!" ಎನ್ನುತ್ತಾ ರಾಮ ಕೃಷ್ಣನು ಕೈಹಾರಿಸಿದನು.

ತಿಮ್ಮರಸನು ಬಲು ಸೋಜಿಗದಿಂದ, "ಏನಿದು, ರಾಮಕೃಷ್ಣಾ! ಯಾವುದಕ್ಕೆ ಶಹಭಾಷ್?" ಎಂದು ಕೇಳಿದನು.

"ಯಾವುದಕ್ಕೆ? ನಮ್ಮ ಮಹಾರಾಜನ ಪೌರುಷಕ್ಕೆ ಗುರುವರಾ! ಪೌರುಷಕ್ಕೆ! ಸ್ತುತ್ಯ! ಸ್ತುತ್ಯ!"

"ಸ್ತುತ್ಯವೇ?—ರಾಮಕೃಷ್ಣಾ! ಚೆನ್ನಾಗಿದೆ: ನಿನ್ನ ಅಭಿಪ್ರಾಯವನ್ನು ಬಿಡು. ಇದರ ಪರಿಣಾಮವು ಏನಾಗುವುದೆಂದು ನೀನು ಯೋಚಿಸಿದ್ದೀಯೇನು?"

"ಅದೇನು, ಅಂತಹ ಭಯಂಕರ ಪರಿಣಾಮ?"

"ಯುದ್ಧ........"

"ಹೌದು ಯುದ್ಧ!"

"ಯುದ್ಧವೆಂದರೇನು? ಸಂತೋಷದ ಕೂಟವೆಂದು ತಿಳಿದೆಯೋ? ಲಕ್ಷೋಪಲಕ್ಷ ಪ್ರಾಣಿಗಳನ್ನು ಆಹುತಿ ತೆಗೆದುಕೊಂಡು ಲೋಕವನ್ನೇ ಅಶಾಂತಿಯ ಕಬ್ಬೊಗೆಯಿಂದ ಅಂಧಕಾರಗೊಳಿಸುವ ಈ ಘೋರವಾದ ಸಮರಾನಲವು ಈವರೆಗೆ ಪ್ರಜ್ವಲಿತವಾದುದು ಸಾಲದೇನು?........"

ರಾಮಕೃಷ್ಣನು ಯೋಚಿಸಿ ಹೇಳಿದನು, "ಸಾಕೆಂದೇ ಹೇಳೋಣ, ಆದರೆ........"

"ನಿನ್ನ ಆದರೆ ಗೀದರೆಗಳೆಲ್ಲಾ ಹಾಗಿರಲಿ; ಎಲೆ ಬ್ರಾಹ್ಮಣ! ಅತ್ತ ಸೈನಿಕರು ಇರುವೆಗಳ ಹಾಗೆ ಸಾಯುತ್ತಿರುವಾಗ, ಇತ್ತ ಹೋಳಿಗೆ ಕಡುಬುಗಳನ್ನು ಹೊಟ್ಟೆಯ ತುಂಬಾ ತುಂಬಿಸಿ, ಡರ್ರನೆ ತೇಗುಬಿಡುತ್ತಾ ಆನಂದದಿಂದ ಇರುವ ನಿನಗೆ, ಯುದ್ಧವೆಂದರೆ ಒಂದು ಆಟವಾಗಿದೆ. ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟ! ಎಂದ ಹಾಗೆ; ರಾಮಕೃಷ್ಣಾ! ಕೇಳು, ಸಾಮ, ದಾನ, ಭೇದ, ಎಂಬ ಉಪಾಯಗಳಿಂದ ಕಾರ್ಯಸಾಧನೆಯಾಗದಿದ್ದಲ್ಲಿಯೇ, ಯುದ್ಧವೆಂಬ ದಂಡೋಪಾಯವನ್ನು ಪ್ರಯೋಗಿಸಬೇಕೇ ಹೊರತು,

ಕ್ಷಾತ್ರವೀರನೆಂದುಕೊಂಡು, ಹೆಜ್ಜೆ ಹೆಜ್ಜೆಗೂ ಯುದ್ಧವನ್ನೇ ಅವಲಂಬಿಸಿಬಿಟ್ಟರೆ, ದೇಶದ ನೆಮ್ಮದಿಯೇ ಕೆಟ್ಟುಹೋಗುವುದು''.

''ನಿಜ, ಗುರುವರಾ! ನಿಮ್ಮಮಾತು ಸತ್ಯ.''

''ಹಾಗೆ, ಬಾ, ದಾರಿಗೆ; ನಾನಾದರೋ ಉತ್ಕಲೇಶನನ್ನು ಉಪಾಯದಿಂದ ಒಳಸೇರಿಸಿಕೊಳ್ಳಬೇಕೆಂದು ಪ್ರಯತ್ನಿಸುತ್ತಿದ್ದೇನೆ. ಏಕೆಂದರೆ, ಈಗ ನೋಡು, ನಮ್ಮ ದೇಶದಲ್ಲಿ, ಕರ್ಣಾಟಕಾಂಧ್ರೀಯರೊಳಗೆ ಪರಸ್ಪರ ಭೇದಭಾವ ವೈಷಮ್ಯಗಳಿಂದ ಆಗಾಗ ಕಲಹತರಂಗಗಳು ಏಳುತ್ತಲೇ ಇವೆ. ಈ ಬಗೆಯ ಅಂತಃಕಲಹವು ದೇಶಶಾಂತಿಗೆ ಕ್ಷೇಮಕರವಲ್ಲ – ಇಂತಹ ಕಲಹಗಳು ಅಳಿಯಬೇಕಾದರೆ, ಭಾರತೀಯ ರಾಜರಾಜರುಗಳನ್ನೇ ಒಗ್ಗಟ್ಟುಮಾಡಿಬಿಡಬೇಕು. ಮೊದಲು, ಕರ್ಣಾಟಕರಾಜನೂ ಆಂಧ್ರರಾಜನೂ ಒಗ್ಗಟ್ಟಾಗಿಬಿಟ್ಟರೆ........'ಯಥಾರಾಜಾ ತಥಾಪ್ರಜಾ' ಎಂಬ ಮಾತಿನಂತೆ ಪ್ರಜೆಗಳೂ ಒಗ್ಗಟ್ಟಾಗಿ ಬಿಡುವರು".

''ನಿಶ್ಚಯ! ಒಗ್ಗಟ್ಟೆಂದರೆ........ ...ಗುರುವರಾ! ವಿವಾಹಬಂಧನಕ್ಕಿಂತಲೂ ಹೆಚ್ಚಾದ ಒಗ್ಗಟ್ಟು ಬೇರೊಂದಿಲ್ಲವೇ ಇಲ್ಲ!"

''ಅದಕ್ಕಾಗಿಯೇ, ರಾಮಕೃಷ್ಣ! ಕರ್ಣಾಟಕ ರಾಜನಿಗೂ, ಆಂಧ್ರ ರಾಜಕುಮಾರಿಗೂ ಪಾಣಿಗ್ರಹಣಮಾಡಿಸಬೇಕೆಂದು ನಾನು ಸಾಧಿಸುತ್ತಿರುವುದು"

''ಸರಿ, ಸರಿ! ಈಗ ಚೆನ್ನಾಗಿ ನುಂದಟ್ಟಾಯಿತು".

''ಹಾಗೆ ಬಾ ಸನ್ನ ಹಾದಿಗೆ; ರಾಮಕೃಷ್ಣಾ! ನಾವು ಯುದ್ಧಮುಖೇನ ಆಂಧ್ರರಾಜನನ್ನು ಗೆದ್ದುಬಿಟ್ಟರೂ, ಕರ್ಣಾಟಕಾಂಧ್ರೀಯ ವೈಷಮ್ಯವು ಹೆಚ್ಚುವುದೇ ಹೊರತು, ಎಂದಿಗೂ ಕಡಮೆಯಾಗದು. ಬೇರೊಂದುಪಾಯದಿಂದಲೇ, ಕಾರ್ಯಸಾಧನೆಮಾಡಬೇಕೆಂದು ಬಗೆದು, ಅಜ್ಞಾತಕುಲಗೋತ್ರಳಾದ ಚಿನ್ನಾದೇವಿಯಮೇಲೆ ಅಂಕುರಿಸಿದ ರಾಯನ ಪ್ರೇಮವನ್ನು, ಆಂಧ್ರಕುಮಾರಿಯ ಮೋಹದಿಂದ ಮುಚ್ಚಿಹೋಗುವಂತೆ ಬಹಳ ಪ್ರಯತ್ನಮಾಡಿದೆ. ಜಗನ್ಮೋಹಿನಿಯನ್ನು ಬಣ್ಣಿಸಿ, ರಾಯನಿಗೆ ಹೆಚ್ಚಾಗಿ ಬೋಧಿಸಿದೆ. ಅದರ ಫಲವಾಗಿ, ರಾಯನ ಮನಸ್ಸು ತಿರುಮಲಾದೇವಿಯಮೇಲೆ

ತಿರುಗದೆ ಹೋದರೂ, ನನ್ನ ಅಭಿಮತವನ್ನು ಅನುಮೋದಿಸಿ, ಆ ಗಜಪತಿಯ ಕುವರಿಯನ್ನು ವರಿಸಲಿಕ್ಕೆನೋ ಒಪ್ಪಿದನು. ಆಮೇಲೆ, ನಾನು ರಹಸ್ಯವಾಗಿ ಚಿನ್ನಾದೇವಿಯನ್ನು ಅವನ ದೃಷ್ಟಿಪಥದಿಂದ ಮರೆಯಿಸಿಯೂ ಬಿಟ್ಟೆನು. ತಿರುಮಲಾದೇವಿಯ ಮದುವೆಯ ನೆವದಿಂದಾಗಿ, ಉತ್ಕಲದೇಶದೊಡನೆ ಯುದ್ಧವೂ ತೊಡಗಿತು. ವಿಜಯಲಕ್ಷ್ಮಿ ಮಾಲೆಹಾಕುತ್ತಲೇ ಬಂದಳು. ರಾಮಯಮಂತ್ರಿಯೂ ನಮ್ಮ ಸೆರೆಯಲ್ಲಿ ಸಿಕ್ಕಿಬಿದ್ದನು. ಮಹಾಭಿಮಾನದಿಂದ ಬೀಗಿರುವ ಪ್ರತಾಪರುದ್ರನು ಮೆತ್ತಗಾದನೋ ಎಂಬುದನ್ನು ಪರೀಕ್ಷಿಸಲಿಕ್ಕಾಗಿ, ನಾನು ಆಗಾಗ ಸಂಧಿಪತ್ರಗಳನ್ನು ಕಳುಹಿಸುತ್ತಾ ಬಂದೆನು. ಇಲ್ಲ, ಪ್ರತಾಪರುದ್ರನು ಮೆತ್ತಗಾಗಲೇ ಇಲ್ಲ. ಮೆತ್ತಗಾಗುವ ಲಕ್ಷಣವೂ ಕಾಣಿಸಲಿಲ್ಲ. ಕೆಲಸಮಾಡುತ್ತಾ ಮಾಡುತ್ತಾ ಹೋದರೆ, ಸಾಮರ್ಥ್ಯವು ಹೆಚ್ಚು ಹೆಚ್ಚುವಂತೆ, ಯುದ್ಧವು ತೊಡಗಿದಂತೆ, ಪುತ್ರಮಿತ್ರಬಾಂಧವರು ಸತ್ತಂತೆ! ಅವನು ಹಟವು ಇನ್ನಷ್ಟು ಗಟ್ಟಿಯಾಗುತ್ತಿರುವುದು. ಅಲ್ಲದೆ, ರಾಮಕೃಷ್ಣಾ, ಅವನು ಗುಪ್ತನಾಗಿ ಮಗಳಿಗೆ ವಿವಾಹ ಮಾಡಲಿಕ್ಕೆ ಪ್ರಯತ್ನಿಸುತ್ತಿರುವನೆಂದೂ ಗೂಢಚಾರರಿಂದ ತಿಳಿದುಬಂದಿದೆ.

"ಅಯ್ಯೋ! ಹಾಗಾದರೆ........"

"ಅದಕ್ಕೇನೂ ಗಾಬರಿಬೇಡ! ರಾಮಕೃಷ್ಣಾ! ಅವಳನ್ನು ವರಿಸಲು ಯಾವ ರಾಜನೂ ಮುಂದುವರಿಯುವಂತೆ, ನಾನು ಕಲ್ಲು ಹಾಕಿಬಿಟ್ಟಿದ್ದೇನೆ. ಆದರೆ, ರಾಮಕೃಷ್ಣಾ! ಇಕ್ಕಟ್ಟಿನ ಸಂಧಿಯಲ್ಲಿ ಹಾಕಿಟ್ಟಿದ್ದ ಈ ಕಟ್ಟನ್ನು ಒಂದೇ ಏಟಿಗೆ ಕಡಿದಂತೆ, ನಮ್ಮ ರಾಯನು ಎಷ್ಟು ಘೋರವಾದ ಪ್ರತಿಜ್ಞೆಮಾಡಿಬಿಟ್ಟ! ಇದರಿಂದ ಕರ್ಣಾಟಕಾಂಧ್ರೈಕ್ಯಮತ್ಯವೆಂಬುದು ಬರಿಯ ಬಾಯಿಮಾತಾಯಿತು. ಈ ಪ್ರತಿಜ್ಞೆಯ ಸಮಾಚಾರವು ಉತ್ಕಲೇಶನಿಗೆ ತಿಳಿದರೆ, ಅವನ ಕುಮಾರಿ ಎಂದಿಗೂ ರಾಯನ ಕೈಗೆ ಸಿಕ್ಕಳು. ಯುದ್ಧದಲ್ಲಿ ನನುಗೇ ಜಯವಾದರೂ, ಆತ್ಮಹತ್ಯವನ್ನಾದರೂ ತಿರುಮಲಾದೇವಿ ಕಟ್ಟಕಡೆಗೆ ಮಾಡಿಕೊಂಡಾಳೇ ಹೊರತು, ರಾಯನ ಕೈಗೆ ಅವಳ ನೆರಳು ಕೂಡಾ ಸಿಕ್ಕದು. ಅವಳು ಸಿಕ್ಕದೇಹೋದರೆ ರಾಯನು ಮಾಡಿದ ಪ್ರತಿಜ್ಞೆ ಪೂರಯಿಸುವದೆಂತು? ಪ್ರತಿಜ್ಞಾಪೂರ್ಣವಾಗದೆ ರಾಯನು ವಿದ್ಯಾನಗರ ರಾಜಧಾನಿಯನ್ನೇ ಪ್ರವೇಶಿಸಲಾರನಲ್ಲಾ! ಮನೆಯೊಳಗೇ ಹೋಗಲಿಕ್ಕಿಲ್ಲದ

ಯಜಮಾನನಿಂದ ಏನಿದೆ ಪ್ರಯೋಜನ? ರಾಮಕೃಷ್ಣಾ, ಈ ಪ್ರತಿಜ್ಞೆಯ ಪರಿಣಾಮವು ಹೇಗಾಗುವುದೋ ಪಂಪಾಪತಿಯೇ ಬಲ್ಲ! ಹೀಗಿರಲು, ರಾಮ ಕೃಷ್ಣಾ, ನೀನು ರಾಯನ ಪ್ರತಿಜ್ಞೆಗೆ ಶಹಭಾಷ್ ಕೊಡುತ್ತಾ, ಸಂತೋಷ ದಿಂದ ಉಕ್ಕುತ್ತಿರುವೆಯಲ್ಲಾ?''

ರಾಮಕೃಷ್ಣನು ತಲೆಯಾಡಿಸುತ್ತಾ—"ನಿಜ ನಿಜ! ಗುರುದೇವಾ! ನಿಮ್ಮ ಅಭಿಪ್ರಾಯವು ನಿಜ. ಸತ್ಯ, ಸ್ತುತ್ಯ; ಹಾಗೆಂದು, ಮಹಾರಾಜನ ಪ್ರತಿಜ್ಞೆ ತಪ್ಪೆಂದು ನಾನು ಹೇಗೆ ಹೇಳಲಿ? ವೀರಕ್ಷತ್ರಿಯನು ಗರ್ವಾಂಧ ಳನ್ನು ತಕ್ಕಂತೆ ಶಿಕ್ಷಿಸುವಂತಹ ಪ್ರತಿಜ್ಞೆ ಮಾಡಿರುವುದೇನೋ ತಪ್ಪಲ್ಲ. ಅದ ರಲ್ಲಿಯೂ, ನಿಮ್ಮ ಉದ್ದೇಶವು ಒಂದು ತೂಕ ಭಾರ ಹೆಚ್ಚು. ಮಹತ್ವವಾ ದುದೇ ಸರಿ. ಸಂದೇಹವಿಲ್ಲ. ಒಟ್ಟಾರೆ, ಈಗ ರಾಯನ ಪ್ರತಿಜ್ಞೆಯೂ ಪೂರ್ಣ ವಾಗಬೇಕು. ನಿಮ್ಮ ಉದ್ದೇಶವೂ ಸಿದ್ಧಿಯಾಗಬೇಕು. ಹೇಗಾದರೂ, ಕೊನೆಗೆ, ಮಂತ್ರಿಪುಂಗವಾ! ನಿಮ್ಮ ಉದ್ದೇಶದಂತೆಯೇ ಪರಿಣಮಿಸಬೇ ಕೆಂದು ನಾನು ಮನಃಪೂರ್ವಕವಾಗಿ ಬಯಸುತ್ತೇನೆ'' ಎಂದು ಮಂತ್ರಿಯ ದಾರಿಯನ್ನೇ ಅನುಮೋದಿಸಿ, ಸಂತೋಷಗೊಳಿಸಿದನು.

## ೧೧

## ಉಪಾಯಾಲೋಚನೆ

"ಶಹಭಾಷ್! ರಾಮಕೃಷ್ಣಾ! ಮೆಚ್ಚಿದೆ! ಮೆಚ್ಚಿದೆ!" ಎಂದು ತಿಮ್ಮ ರಸನು ಅವನ ಬೆನ್ನುತಟ್ಟಿ—''ಹಾಗಾದರೆ, ನನ್ನ ಉದ್ದೇಶಸಿದ್ಧಿಗೆ ಸಹಾಯ ಮಾಡುವೆಯಾ?"

"ಅಗತ್ಯ, ಅತ್ಯಗತ್ಯವಾಗಿ''

"ಸಹಾಯಕನಾಗುವೆಯಾದರೆ, ಉಪಾಯ ಹೇಳು ನೋಡೋಣ''

"ಅಯ್ಯೋ! ಗ್ರಹಚಾರವೇ! ಭಾರ ನನ್ನಮೇಲೇ ಬಿದ್ದಿತಲ್ಲಾ! ಊಂ! ಗುರುವಿನ ಗುರುಭಾರವನ್ನು ಹೊರಲೇಬೇಕಾದುದು........'' ಎಂದು, ರಾಮ ಕೃಷ್ಣನು ಯೋಚಿಸಿ, "ಹುಂ! ಅಂತಜ್ಞಾನಿಯೆಂದು ಬಿರುದನ್ನಿತ್ತ ನನಗೆ, ವಿಜ್ಞಾನಚೂರ್ಣವನ್ನು ಉಪಯೋಗಿಸದಿದ್ದರೆ, ಯಾವ ಉಪಾಯವೂ

ಹೊಳೆಯಲಾರದು" ಎಂದು, ಸೊಂಟದಿಂದ ನಸ್ಯದ ಬುರುಡೆಯನ್ನು ತೆಗೆದು, ವಿಧಿಪ್ರಕಾರ ಒಂದು ಚಿಟಿಕಿಯನ್ನು ಮೂಗಿನೊಳಗೇರಿಸಿ, ಸೀನು ಹೊಡೆದು, ಮೂಗನ್ನು ಒರಸಿ, ಇನ್ನೊಂದು ಚಿಟಿಕಿಯನ್ನು ಕೈಯಲ್ಲಿ ಹಿಡಿದುಕೊಂಡು, ತಲೆಯಾಡಿಸುತ್ತಾ, "ಗುರುವರಾ! ಈಗ ಸಾಮ, ದಾನ ಎಂಬ ಎರಡು ಉಪಾಯಗಳು ಏನೋ ವ್ಯರ್ಥವಾಗಿ ಹೋದುವು———"

"ಹೌದು."

"ಇನ್ನು ಭೇದೋಪಾಯವೇ ಸರಿಯಾದುದು."

"ಹುಂ"

"ಹುಂ ಆಯಿತಲ್ಲ, ಉಪಾಯಹೇಳಿ ಇನ್ನೇನು?"

"ಓಹೋ! ಭಾರಿಉಪಾಯ ಹೇಳಿದಿ! ನಾನು ಕೇಳಿದ್ದು ಏನು ಬದನೇ ಕಾಯಿ? ಹೇಳಯ್ಯಾ! ಭೇದೋಪಾಯವನ್ನು ಯಾವ ಬಗೆಯಾಗಿ ರಚಿಸುವುದು?"

ರಾಮಕೃಷ್ಣನು ತಲೆ ತುರಿಸಿಕೊಳ್ಳುತ್ತಾ—"ಅಯ್ಯೋ ರಾಮ! ಅದನ್ನು ನಾನೇ ಹೇಳಬೇಕೆ? ಜಾನಕೀರಾಮ ........ ಉಂ! ವಿಜ್ಞಾನ ಚೂರ್ಣವಿದೆಯಲ್ಲ—" ಎಂದು ಪುನಃ ಕೈಯಲ್ಲಿದ್ದ ಚಿಟಿಕಿಯನ್ನೆಲ್ಲಾ ಸೇದಿ ಮುಗಿಸಿ, "ಗುರುವರಾ! ಈಗ ಆಗಬೇಕಾದುದು ಏನು? ನಮ್ಮ ರಾಯನ ಪ್ರತಿಜ್ಞೆಯು ಮುಗಿಯಲೂ ಬೇಕು – ಒಂದು. ಅವನೇ ತಿರುಮಲಾದೇವಿಯನ್ನು ವರಿಸಲೂ ಬೇಕು—ಎರಡು —" ಎಂದು, ಬಳಿಕ ತನ್ನೊಳಗೆ, "ಹಾಗೆಯೇ ಚಿನ್ನಾದೇವಿಯೂ ರಾಯನ ಮಡದಿಯಾಗ....... (ಎಂಬಷ್ಟನ್ನು ಮೆಲ್ಲಗೆ ತುಟಿ ಮಾತ್ರ ಅಲುಗಿಸಿ)........ ಬೇಕು—ಮೂರು" ಎಂದು ಗಟ್ಟಿಯಾಗಿ ಹೇಳಲು ತಿಮ್ಮರಸನು, "ಅದೇನಯ್ಯಾ ಏನೋ........ ತುಟಿಯಲುಗಿಸಿ 'ಬೇಕು—ಮೂರು' ಅಂದೆಯಲ್ಲಾ? ಅದೇನು ರಹಸ್ಯದ 'ಬೇಕು," ಎಂದು ಕೇಳಿದನು.

"ಅದೇನಿಲ್ಲ ಕರ್ಣಾಟಕರೂ, ಆಂಧ್ರರೂ ಒಗ್ಗಟ್ಟಾಗಿರಬೇಕು—ಮೂರು, ಎಂದೆ. ಜ್ಞಾನಚೂರ್ಣದ ರಜವೊಂದು ಗಂಟಲಲ್ಲಿ ಸಿಕ್ಕಿಕೊಂಡುದರಿಂದ, ಸ್ವರವು ಹೊರಡದೆ ತುಟಿಮಾತ್ರ ಅಲುಗಿತು; ಅಷ್ಟೆ."

"ಓಹೋ! ಅಷ್ಟೇಯೇನು?"

"ಹೌದು ಗುರುವರಾ? ಈಗ ಈ ಮೂರು 'ಬೇಕುಗಳು' ನಮ್ಮ ಕಣ್ಣೆದಿರಿಗೆ ನಿಂತಿವೆ..........ಹುಂ ಉಪಾಯ ...... ಭೇದೋಪಾಯ ...... ಉಂ .......... ಯಾವುದಪ್ಪಾ ..........ಆ!..........ಆ! ..........ಹೊಳೆಯುತ್ತಿದೆ. ಮುಸಮುಸಕಾಗಿ ಹೊಳೆಯುತ್ತಿದೆ.........."

ತಿಮ್ಮರಸನು ಕುತೂಹಲದಿಂದ "ಏನದು ರಾಮಕೃಷ್ಣಾ?"

"ತಾಳು, ಗುರುವರಾ! ಮಹಾರಾಜನು ಏಕಾಂತದಲ್ಲಿಯಲ್ಲವೇ ಪ್ರತಿಜ್ಞೆ ಮಾಡಿದ್ದು".

"ಹೌದು, ನನ್ನ ಹೊರತು ಮತ್ತಾರೂ ಇರಲಿಲ್ಲ"

"ಸೇನಾನಾಯಕ ರಾಮಲಿಂಗನಿಗೇನಾದರೂ ......"

"ಇಲ್ಲ. ಇನ್ನೊಂದು ನುಸಿಗೂ ತಿಳಿಯದು"

"ಆಃ ಗೆಲ್ಲಬಹುದು———ಸಾಧಿಸಬಹುದು......."

"ಏನಿದು ರಾಮಕೃಷ್ಣಾ?"

"ಗುರುವರಾ, ಈ ಪ್ರತಿಜ್ಞಾವೃತ್ತಾಂತವನ್ನು ಮುಂದೆಯೂ ರಹಸ್ಯದಲ್ಲಿಯೇ ಇಟ್ಟರುವ ಭಾರವೊಂದನ್ನು ನೀವು ಹೊತ್ತುಬಿಟ್ಟರೆ......."

"ಆಹಾ! ಹಾಗೆಯೇ ಆಗಲಿ!"

"ಇದನ್ನು ಹೇಗೆ ನಡೆಸುವಿರಿ, ಗುರುದೇವಾ?"

"ಅದೇಕೆ ಹಾಗೆ ಕೇಳುತ್ತೀ?"

"ಏನೆಂದರೆ, ಮಹಾರಾಜನು ತಿರುಮಲಾದೇವಿಯನ್ನು ಹಿಡಿದುತರಿಸಿ, ಯಾವನೋ ಒಬ್ಬನಿಗೆ ವಿವಾಹ ಮಾಡಿಸುತ್ತೇನೆ! ಎಂಬ ಪ್ರತಿಜ್ಞೆಯ ಮಾತನ್ನೇ ಮುಂದುಮಾಡಿ, ಉತ್ಕಲದಮೇಲೆ ನುಗ್ಗಿದರೆ......."

"ಹಾಗೆ ರಹಸ್ಯಭೇದನವಾಗದಂತೆ ನೋಡಿಕೊಳ್ಳುವುದೇ ನನ್ನ ಮೇಲಿನ ಭಾರ"

"ಇದನ್ನು ಹೇಗೆ ಸಾಧಿಸುವಿರಿ?"

"ಪ್ರತಿಜ್ಞೆಯನ್ನು ರಹಸ್ಯದಿಂದ ಹೊರಗೆಡವಿಬಿಟ್ಟರೆ, ಅದು ಉತ್ಕಲೇಶನಿಗೆ ಗೊತ್ತಾಗಿಬಿಟ್ಟರೆ, ಎಂದಿಗೂ ತಿರುಮಲಾದೇವಿ ಕೈಗೆ ಸಿಕ್ಕಲಾರಳೆಂದೂ

ಪ್ರತಿಜ್ಞಾಪೂರ್ಣವಾಗದೆಂದೂ, ಉಪಾಯದಿಂದ ಅವಳನ್ನು ಹಿಡಿದು ಪ್ರತಿಜ್ಞೆಯನ್ನು ನೆರವೇರಿಸಬೇಕೆಂದೂ, ಆದುದರಿಂದಲೇ ಈವರೆಗೆ ಹಿಡಿದಿರುವ ಗುರಿಯಿಂದಲೇ ಮುಂದೆಯೂ ಹೋರಡಬೇಕೆಂದೂ ನಮ್ಮ ರಾಯನಿಗೆ ಅನುಕೂಲವಾದಂತೆ ನಟಿಸುತ್ತಾ ಬೋಧಿಸುವೆನು. ಆಗ ಪ್ರತಿಜ್ಞೆ ಬಹಿರಂಗವಾಗಲಿಕ್ಕೇ ಇಲ್ಲ"

"ನಿಜ ನಿಜ! ಅದು ಸರಿ. ಈ ಕಾರ್ಯವನ್ನು ನೀವೂ ನಾನೂ ಸಾಧಿಸಬೇಕು"

"ಹೌದು ರಾಮಕೃಷ್ಣಾ! ನಿನಗೆ ಹೊಳೆದ ಆ ಉಪಾಯವೇನು? ಹೇಳು!"

"ತಡೆಯಿರಿ ಗುರುವರಾ! ಹೇಳುವಷ್ಟು ಸ್ಪಷ್ಟವಾಗಿ ಕಾಣಿಸಲಿಲ್ಲವಲ್ಲಾ! ಹುಂ ಏಕಾಂತದಲ್ಲಿ ಕುಳಿತು, ಧ್ಯಾನಮಾಡಿ ಅದನ್ನು ಸರಿಯಾಗಿ ಬೆಳಗಿಸಬೇಕು. ಒಟ್ಟಾರೆ ಗುರುವರಾ! ಸಾಧನೆಮಾಡುವ ಭಾರವು ನನ್ನ ಮೇಲೆ. ಸಹಾಯಮಾಡುತ್ತಾ, ಸಾಧಿಸಿ ಹೆಸರುಗಳಿಸುವ ಭಾರವು ನಿಮ್ಮ ಮೇಲೆಯೇ?"

"ಅದೇಕೆ ಹಾಗೆ ಹೇಳುತ್ತೀ ರಾಮಕೃಷ್ಣಾ! ನಿನಗೇನಾದರೂ ಬಿರುದು ಬಹುಮಾನ ........"

"ಬಿರುದು ಬಹುಮಾನ ಸಿಕ್ಕುವ ಹಾಗಾದರಂತೂ ಎಂದಿಗೂ ಬಿಡಲಾರೆ. ಆದರೆ ಎಲ್ಲಾದರೂ ಅಪವಾದ ಗಿಪವಾದ ಏನಾದರೂ ಬರುವುದಾದರೆ ಮಾತ್ರ — — — ಹೆಸರಿಗೆ ಕೃಷ್ಣಭಟ್ಟ ಎಂಬ ಹಾಗೆ ನನ್ನ ಮೇಲೆ ಎಲ್ಲಿಯಾದರೂ ಹಾಕೀರಿ..............."

"ಛೆ ಛೆ! ಇಲ್ಲವಯ್ಯ ಈಗ ನಿನ್ನ ಉಪಾಯವನ್ನು ಹೇಳು".

"ಅದಿನ್ನೂ ಸರಿಯಾಗಿ ಬೆಳಗಲಿಲ್ಲ; ಬಳೆಯಲಿಲ್ಲಾ ಗುರುದೇವಾ! ನಾಳೆ ಬೆಳಗಾಗುವಾಗ ಖಂಡಿತವಾಗಿ ಬೆಳಗಿ ಬಿಡುವುದು, ಆಗ ತಿಳಿಸುವೆನು. ಈಗ ಸಂಧ್ಯಾವಂದನೆಗೆ ಸಮಯವಾಯಿತು. ಅಪ್ಪಣೆ ಕೊಡೋಣಾಗಲಿ!"

# ೧೨

# "ಹಾ! ಕೃಷ್ಣಾ!"

ಕಾಡು ಗಿಡಮರಗಳೆಡೆಯಲ್ಲಿ ನುಸುಳಿ, ಗುಂಡು ಗುಂಡಾದ ಗಂಡಶೈಲ ಗಳೆಡೆಯಲ್ಲಿ ಮಾಯವಾಗಿ, ಒಂದೆಡೆಯ ಬಂಡೆಯ ಗವಿಯೊಳಗೆ ಹೊಕ್ಕು, ಬರ್ರನೆ ಹಾರಿ, ಮೈದೋರಿ, ಹಳ್ಳಕೊಳ್ಳಗಳನ್ನು ನೆಗೆದು, ಕುರುಚಲು ಗಿಡ, ಗಂಟೆ, ಪೊದೆ, ಪೊದರುಗಳೆಡೆಯಲ್ಲಿ ಹುದುಗಿ, ಮತ್ತೆ ಸರ್ರನೆ ಹೊರಟು, ಬಂಡೆಯಗುಡ್ಡಗಳನ್ನು ಏರಿಳಿದೇರಿ, ಮುಳ್ಳುಕಲ್ಲುಗಳನ್ನು ಪುಟನೆಗೆಸಿ, ನಾಗಾ ಲೋಟದಿಂದ ಚಿಗಿದೋಡುತ್ತಿತ್ತು—ಭೀತಿಯಿಂದ ಕಂಗಲಾದೊಂದು ಹರಿಣ. ಅದನ್ನು ಬಿಡದೆ ಬೆನ್ನಟ್ಟುತ್ತಲೇ ಇದ್ದನೊಬ್ಬ—ಪ್ರಚಂಡ ಅಶ್ವಾರೋಹಿ! ಆ ಅಶ್ವಾರೋಹಿ ಸಾಮಾನ್ಯನಂತೆ ಕಾಣುವುದಿಲ್ಲ. ಮಹಾಪುರುಷನ ಲಕ್ಷಣ ವೆಲ್ಲವೂ, ಅವನಲ್ಲಿ ಒಡೆದು ಕಾಣುತ್ತಿದ್ದುವು. ದೇಹವು ದೀರ್ಘವಾಗಿ, ಸುಘಟಿತವಾಗಿ, ಹೃಷ್ಟಪುಷ್ಟವಾಗಿ ವೀರ್ಯಾಖಂಡದಿಂದ ಕೊಬ್ಬಿಕೊಂಡಿ ತ್ತು. ಅಮೂಲ್ಯವಾದ ರಾಜಭೂಷಣದಿಂದ ಮಂಡಿತನಾಗಿದ್ದರೂ, ಮೇಲು ಭಾಗದಲ್ಲಿ, ಉಕ್ಕಿನ ಕವಚವನ್ನು ತೊಟ್ಟುಕೊಂಡಿದ್ದನು. ಬೆನ್ನಿನಲ್ಲಿ ಬಾಣ ತುಂಬಿದ ಬತ್ತಳಿಕೆ; ತೋಳಿನಲ್ಲಿ ಧನುಸ್ಸು; ಕಟಿಯ ಇಬ್ಬದಿಗಳಲ್ಲಿ ನೇತಾಡು ತ್ತಿದ್ದವು ಎರಡು ಖಡ್ಗಕೋಶಗಳು. ಇವಲ್ಲದೆ ಒಂದು ಪಿಸ್ತೂಲು ಬೇರೆ; ಇಷ್ಟೂ ಸಾಲದೆ, ದೃಢಮುಷ್ಟಿಯಲ್ಲಿ ಸುತೀಕ್ಷ್ಣಾಗ್ರದ ಒಂದು ಭಲ್ಲೆ ಹಿಡಿದಿದ್ದನು. ಇಂತು, ವೀರಭೂಷಿತನಾದ ಆತನ ವದನಮಂಡಲವಾದರೋ, ಭರಯೌವನಗರ್ವಿತ ಗಂಭೀರಯುಕ್ತವಾದುದು. ಆ ಗಾಂಭೀರ್ಯಕ್ಕೊಂದು ದರ್ಪದ ಕಳೆಯನ್ನು ಕೊಟ್ಟಿತ್ತು – ತುಸುದಪ್ಪದಿಂದ ಮನೋಹರವಾಗಿರುವ ಆ ಸುಳಿಮೀಸೆ. ಆದಪ್ರಯುಕ್ತ ಮುಖಮಂಡಲದ ಶೋಭೆಯಿಂದ, ಶಾಂತಿ ಯನ್ನೀಗಿಸುತ್ತಿದ್ದುವು– ಉಭಯ ಪಾರ್ಶ್ವಗಳಲ್ಲಿ ಝಳಝಳನೆ ಬೆಳಗಿಸುವ ಶ್ರೇಷ್ಟವಾದ ವಜ್ರದ ಹರಳಿನ ಕರ್ಣಕುಂಡಲಗಳು. ಆಹಾ! ಮುತ್ತುರತ್ನ ಖಚಿತವಾದ ರಾಜಚಿಹ್ನದ ಶಿರಸ್ತ್ರಾಣದಿಂದಂತೂ, ಆ ವದನವಲಯದ ಸ್ವಾಭಾವಿಕವಾದ ಮಹತ್ಕಳೆಗೊಂದು ನೂತನ ಪ್ರಕಾಶವೇ ಸಂಪ್ರಾಪ್ತವಾಗಿ, ಅಷ್ಟು ಉಜ್ಜ್ವಲಶೋಭೆಯಿಂದ ಬೆಳಗುತ್ತಿತ್ತು. ಅವನನ್ನು ಕಂಡಮಾತ್ರಕ್ಕೆ

ಯಾರಿಗಾದರೂ ಅವನ ಮೇಲೆ ಗೌರವಬುದ್ಧಿ ಹುಟ್ಟಲೇಬೇಕು. ಶಿರವು ಬಾಗಲೇಬೇಕು. ಅಷ್ಟು ದೊಡ್ಡಸ್ತಿಕೆಯಿಂದ ಮೂರ್ತಿಮಂತನಾಗಿದ್ದನು ವೀರನಾದ ಅಶ್ವಾರೋಹಿ. ಅವನಂತೆಯೇ, ಅವನ ತುರಗವೂ ಸಾಮಾನ್ಯವಾದುದಲ್ಲ. ಸರ್ವೋತ್ತಮ ಲಕ್ಷಣಸಂಯುಕ್ತವಾದ, ಬೃಹತ್ತರ ಪಂಚಕಲ್ಯಾಣೀ ತುರಗ. ಅದು ಒಡಯನ ಸನ್ನೆಯನ್ನರಿತು, ಹರಿಣದ ಬೆಂಬತ್ತಿಕೊಂಡು ಧೂಳುಹಾರಿಸುತ್ತಾ ವೇಗದಿಂದ ಓಡುತ್ತಿತ್ತು.

ಆ ತುರುಗಾರೂಢನಾದ ನರವರೇಣ್ಯನೇ ಕರ್ನಾಟಕ ಭೂಭೃದ್ವರೇಣ್ಯನಾದ ಶ್ರೀ ಕೃಷ್ಣದೇವರಾಯನೆಂದು ವಾಚಕರು ತರ್ಕಿಸಿರಬೇಕು. ನಿಜ ನಿಜ.

ಹಾಗೆ ಪವನಜವದಿಂದ ಓಡುತ್ತಿರಲು ಹಠಾತ್ತಾಗಿ, ಹೃದಯವನ್ನು ಚುಚ್ಚುವಂತಹ ಏನೋ ಒಂದು ಶಬ್ದವು ಕೃಷ್ಣದೇವರಾಯನ ಕಿವಿಯನ್ನು ಪ್ರವೇಶಿಸಿತು. ಕೂಡಲೇ ತುರುಗದ ಕಡಿವಾಣವನ್ನು ಹಿಡಿದು, ಜಗ್ಗಿದನು. ಕುದುರೆ ತಿರುಗಿ, ಹಾರಿನಿಂತಿತು. ಕೃಷ್ಣದೇವರಾಯನು ಆ ಸ್ವರವು ಯಾವ ಕಡೆಯಿಂದ ಹೊರಟಿತೆಂದು ಆಲಿಸಲಾರಂಭಿದನು. ಅಷ್ಟರೊಳಗೆ ಹರಿಣವೂ ಕಣ್ಮರೆಯಾಗಿಹೋಯಿತು. ಇನ್ನು ಅದು ಎಂದಿಗೂ ಸಿಕ್ಕುವಂತಿಲ್ಲ. ಪಾಪ! ಹೋಗಲಿ.

ಆಗು ಹೊತ್ತು ಮುಳುಗುವ ಸಮಯ; ಸೂರ್ಯನು ಪಶ್ಚಿಮ ದಿಗಂತ ರೇಖೆಯ ಸಮೀಪವನ್ನು ಸೇರಿಬಿಟ್ಟಿದ್ದಾನೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ಕತ್ತಲೆಯಾಗಿ ಬಿಡುವುದು. ಆ ಪ್ರದೇಶವು ಸ್ಮಶಾನ ಸಮಾನವಾದ ಗೊಂಡಾರಣ್ಯವು. ಇನ್ನು ಸ್ವಲ್ಪ ಹೊತ್ತಿನಲ್ಲಿ, ಬಹು ಭಯಂಕರ ಭೂಮಿಯಾಗಿ ಪರಿಣಮಿಸಿ ಬಿಡುವುದು. ಅಂತಹ ಸ್ಥಳದಲ್ಲಿ ಅದೇನು ಸದ್ದು?..........ಜಗಳಾಟವೇ? ಆರ್ತನಾದವೇ? ಬಲಾತ್ಕಾರವೇ?..........ಹೌದು, ಹೌದು! ಮೂರೂ, ಹೌದು, ಸಮೀಪದಿಂದಲೇ ಹೊರಟು ಬರುತ್ತಿದೆ. ರಾಯನು ಕುದುರೆಯನ್ನು ಆ ಕಡೆಗೆ ತಿರುಗಿಸಿ, ಚಪ್ಪರಿಸಿದನು. ತುರಗ ಶ್ರೇಷ್ಠವು, ಒಡೆಯನ ಇಂಗಿತವಂತೆ ಟಣ್ಣನೆ ಪುಟನೆಗೆದು, ಪುಟ್ಟದೊಂದು ಬಂಡೆಯ ಗುಡ್ಡವನ್ನು ಕಡೆಹಾಯ್ದು, ಆ ಕಡೆಗೆ ಧಾವಿಸಿತು. ಆಗ, ಆರ್ತಸ್ವರವೊಂದು ಸ್ಪಷ್ಟವಾಗಿ ಅವನ ಕಿವಿಗೆ ಬಿತ್ತು.

"............ಹಾ! ಕೃಷ್ಣಾ! ಈ ಗೊಂಡಾರಣ್ಯದಲ್ಲಿ ಅಬಲೆಯ ಮಾನ ಸಂರಕ್ಷಣೆ ಮಾಡುವವರಾರೂ ಇಲ್ಲವೇ? ಅಯ್ಯೋ!........"ಎಂಬ ನಾರಿಯ ಆರ್ತಧ್ವನಿ. ಅದು ಕಿವಿಗೆ ಬಿದ್ದುದೇ ತಡ, ರಾಯನು ತಟ್ಟನೆ ಕುದುರೆ ಯಿಂದ ಕೆಳಗೆ ಧುಮುಕಿ ಕೋಶಮುಕ್ತ ಖಡ್ಗಪಾಣಿಯಾಗಿ, ಸರಸರನೆ ಆ ಕಡೆಗೆ ಹೋದನು. ಸುಮಾರು ಐದಾರಡಿ ಮುಂದಿಟ್ಟಿರಬಹುದು, ಅಷ್ಟರಲ್ಲಿ ಅಲ್ಲಿದ್ದೊಂದು ದೊಡ್ಡಪೊದರಿನಾಚೆ ಮರೆಯಾಗಿದ್ದ ನಾಲ್ವರು ತುರುಕರು, ಒಮ್ಮೆಗೇ ರಾಯನೆದುರಿಗೆ ಹಾರಿನಿಂತು, ಖಡ್ಗವನ್ನೆತ್ತಿ, ಒಂದೇ ಬಾರಿಗೆ ಗರ್ಜಿಸಿದರು. "ಖಬರ್ದಾರ್! ಮುಂದೆ ಕಾಲಿಕ್ಕಿದರೆ---ಎಚ್ಚರಿಕೆ!''

ನರರಾಜಸಿಂಹನು ಅವರಿಗೆಲ್ಲಾ ಅಂಜುವನೇ? ಆತನು ಹುಂಕರಿ ಸುತ್ತಾ ಸರ್ರನೆ, ತನ್ನ ಕತ್ತಿಯನ್ನೊಮ್ಮೆ ಬೀಸಲು, ಒಬ್ಬ ತುರುಕನ ಹಸ್ತವು ಖಡ್ಗಸಮೇತ ವಿದ್ಯುತ್ತಿನಂತೆ, ಆಕಾಶವಲ್ಲಿ ಅಂತರ್ಲಾಗಹಾಕುತ್ತಾ, ಕೆಳಗೆ ಬಿತ್ತು.

"ದುರುಳರೇ! ಒಳ್ಳೆಯ ಮಾತಿನಲ್ಲಿ ದಾರಿ ಬಿಡಿ! ಇಲ್ಲದಿದ್ದರೆ..........'' ಎಂದು ಕೈತೋರಿಸುತ್ತಾ, ಕೃಷ್ಣದೇವರಾಯನು ಮುಂದಕ್ಕೆ ನುಗ್ಗಿದನು. ಪಾಪ! ಉಳಿದ ಮೂವರಿಗೂ, ಅಂತ್ಯಕಾಲವು ಸಂಪ್ರಾಪ್ತಿಯಾಗಿತ್ತು. ಅವರು ರಾಯನನ್ನು ಮುಂಬಿಡದೆ, ಖಡ್ಗಹಸ್ತದಿಂದ ತಡೆಗಟ್ಟಿದರು. ಸರಿ, ಒಂದೆ ರಡು ನಿಮಿಷಗಳೊಳಗಾಗಿ ಆ ಮೂವರೂ, ಅಂಗವಿಚ್ಛೇದಿತರಾಗಿಬಿದ್ದು, ಮಿಲಮಿಲನೆ ಒದ್ದಾಡಲಾರಂಭಿಸಿದರು. ಪಥವು ನಿರಾತಂಕವಾಯಿತು. ಮಿಂಚಿನವೇಗದಿಂದ ರಾಯನು ಆ ಪೊದರಿನಾಚೆಗಿರುವ ದೊಡ್ಡದೊಂದು ಬಂಡೆಯ ಗುಹೆಯೊಳಗೆ ಹೋದನು.

ಆ ಗುಹೆಯ ಹೊರಭಾಗದಲ್ಲಿದ್ದಿತೊಂದು---ಬರಿಯ ಪಾಲಕಿ. ಒಳ ಗಡೆಯಲ್ಲಿಯೋ ದೊಡ್ಡಸ್ತಿಕೆಯ ಭೂಷಣದಿಂದ ಮಂಡಿತನಾಗಿದ್ದ, ತುರುಕ ಸರದಾರನೊಬ್ಬನು, ಬೆಪ್ಪು ಬೆರಗಾಗಿ, ಕೈಯಲ್ಲಿ ಉದ್ದವಾಗಿದ್ದ ಕತ್ತಿಯನ್ನು ಹಿಡಿದುಕೊಂಡು, ತವಕ ನೋಟದಿಂದ ನೋಡುತ್ತಿದ್ದನು. ಹೊರಗೆ ನಡೆದ ಗದ್ದಲವನ್ನು ಕೇಳಿಯೋ, ಅವನು ಆ ರೀತಿ ನೋಡುತ್ತಿರುವನೆಂಬುದು ನಿಸ್ಸಂ ದೇಹ. ಗುಹೆಯ ಇನ್ನೊಂದು ಮೂಲೆಯಲ್ಲಿ ಅಸ್ತವ್ಯಸ್ತವಾದ ಸೀರೆಯ---

ಬಿಚ್ಚಿದ ಕೇಶರಾಶಿಯ—ಸುಂದರ ರಮಣಿಯೊಬ್ಬಳು, ಆ ತುರುಕನನ್ನು ಭೀತಿಯಿಂದ ಮರುದುರನೆ ನೋಡುತ್ತಾ, ನಿಟ್ಟುಸಿರುಬಿಡುತ್ತಾ ನಿಂತಿದ್ದಳು. ಆವಳು ಕೃಷ್ಣದೇವರಾಯನನ್ನು ಕಾಣುತ್ತಲೇ, ಅತ್ಯಾನಂದಪರವಶಳಾಗಿ, "ಹಾ! ಕೃಷ್ಣಾ! ದ್ರೌಪದಿ ಮಾನಸಂರಕ್ಷಕಾ! ನನ್ನ ಮೊರೆಯನ್ನು ಕೇಳಿದೆಯಾ! ರಾಜಾ! ಕಾಪಾಡು! ಈ ದುಷ್ಟನ ಕೈಯಿಂದ ನನ್ನನ್ನು ಕಾಪಾಡು!" ಎಂದು ಚೀರಿದಳು. ರಾಯನು ಒಂದು ಕ್ಷಣ ಚಕಿತದೃಷ್ಟಿಯಿಂದ, ಆ ರಮಣಿಯನ್ನು ನೋಡಿ, ಅತ್ಯಾನಂದದಿಂದ, "ಆಹಾ! ಚಿನ್ನಾ! ಚಿನ್ನಾದೇವಿ!! ಭಯಪಡ ಬೇಡ" ಎಂದು ಅಭಯಪ್ರದಾನಮಾಡಿ, ಇದಿರಿಗೆ ನಿಂತಿರುವ ತುರುಕ ಸರ ದಾರನನ್ನು ಆಪಾದಮಸ್ತಕವಾಗಿ ಉರಿಗಣ್ಣಿನಿಂದೊಮ್ಮೆ ನೋಡಿದನು. ನಡೆದುದೆಲ್ಲವೂ ಪ್ರತ್ಯಕ್ಷವಾಗಿ ಹೋಯಿತು.

"ಓಹೋ! ಸೈಯದ್ ಮರ್ಕಾರನೇ! ಬಡಾಚೋರ್! ಬದ್ಮಾಷ್! ಎಂದು ಕೃಷ್ಣದೇವರಾಯನು ಹಲ್ಲುಕಡಿದು, ಕಣ್ಣು ಕೆಕ್ಕರಿಸಿ, ಮುಂದಕ್ಕೆ ಹಾರಿದನು.

"ನಿಲ್ಲು!" ಎಂದು ಸೈಯದ್ ಮರ್ಕಾರನೂ ತನ್ನ ಕತ್ತಿಯನ್ನು ಸೆಳೆದು, ರಾಯನ ಮೇಲಕ್ಕೆ ತಿರುಗಿಬಿದ್ದನು.

## ೧೩
## ಘೋರ ಅತ್ಯಾಚಾರ!

ಜನ್ಮತಃ ವಿದ್ಯಾನಗರ ಸಂಸ್ಥಾನಕ್ಕೆ ಶೂಲಪ್ರಾಯವಾದ ಬಹಮನೀ ರಾಜ್ಯದ ವಿಷಯವು, ಚರಿತ್ರವಾಚಕರಿಗೆ ತಿಳಿದಿರಬಹುದು. ಆ ರಾಜ್ಯವು ವಿದ್ಯಾನಗರವನ್ನು ಒಂದೇ ಗುಟುಕಿಗೆ 'ಗುಳುಂ' ಮಾಡಿಬಿಡಲು ಆಗಾಗ ಬಾಯಿ ತೆರೆದುಕೊಂಡು ಮುಂದುವರಿದರೂ ವಿದ್ಯಾನಗರವು ಅದರ ಬಾಯಿಗೆ ಹೋಗಲಾರದ ಗುಳಿಗೆಯಾಗಿತ್ತು. ಮಾಡುವುದೇನು? ಈಗ ಅಂದರೆ ಕಥಾ ಕಾಲದಲ್ಲಿ, ಅದು ಐದು ಭಾಗವಾಗಿ ಒಡೆದುಹೋದುದರಿಂದ ಪಾಪ! ಬಲವೂ ತಗ್ಗಿ ಹೋಗಿದೆ. ಅವುಗಳಲ್ಲಿಯೂ—ಬಿಜಾಪುರ, ಗೋಲ್ಕೊಂಡ ಎಂಬ ಎರಡು ಭಾಗಗಳು ಮಾತ್ರ ಮುಖ್ಯವಾಗಿದ್ದುವೇ ಹೊರತು ಉಳಿದ ಮೂರು ಸಮಾ

ನಶ್ಯೇಷವೇ ಸರಿ. ಇಂತಹ ಸಮಯದಲ್ಲಿಯೇ, ವಿದ್ಯಾನಗರ ಕಾಲಾಕಾಶದಲ್ಲಿ ಕೃಷ್ಣದೇವರಾಯ ಮಹಾರಾಜಸೂರ್ಯನು ಮೂಡಿದುದು. ಅವನ ಪ್ರಖರ ಕಿರಣಕ್ಕೆ ತಲೆಹಾಕಲಾರದೆ, ಪರರಾಜರು ವಿದ್ಯಾನಗರದ ನೆಳಲಲ್ಲಿ ತಲೆಮರೆಸಿ ಕೊಂಡುಬಿಟ್ಟರು. ಹಾಗೆಯೇ ಕೃಷ್ಣದೇವರಾಯನೊಡನೆ, ವಿರೋಧವಿಟ್ಟು ಕೊಳ್ಳುವುದು ಕ್ಷೇಮಕರವಲ್ಲವೆಂದೂ, ಎಲ್ಲಿಯಾದರೂ ಹಿಂದಿನ ದ್ವೇಷದಿಂದ ಅವನು ತಮ್ಮ ಮೇಲೆ ಬಿದ್ದರೆ, ತಾವು ನುಜ್ಜುಗುಜ್ಜಾಗುವುದೇ ಸರಿಯೆಂದೂ ಭಾವಿಸಿ ಬಹಮನೀ ಸುಲ್ತಾನಸಂಚಕವೂ ಕೃಷ್ಣದೇವರಾಯನೊಡನೆ ಮೈತ್ರಿ ಯನ್ನು ಬೆಳೆಸಿಕೊಂಡಿತ್ತು. ಆದರೆ ಒಳಗಿನ ಗುಟ್ಟು ಶಿವನೇ ಬಲ್ಲ! ಸಮಯ ಕಾದು ವಿದ್ಯಾನಗರವನ್ನು ನುಂಗಿಬಿಡಲಿಕ್ಕಾಗಿ ಒಳಗಿನ ಸನ್ನಾಹವೇನೋ ನಡೆಯುತ್ತಲೇ ಇತ್ತು. ಅದಂತಿರಲಿ!

ಪ್ರಕೃತ—'ಇಸ್ಮಾಯಿಲ್ ಅದಿಲ್‌ಷಹ' ಎಂಬಾತನು ಬಿಜಾಪುರದ ಸುಲ್ತಾನ. ಈ ಮಧ್ಯೆ ಆದಿಲ್‌ಶಹನಮೇಲೆ ಕೃಷ್ಣದೇವರಾಯನ ಮನಸ್ಸು ಮುರಿಯುವಂತಹ ಒಂದು ಸಣ್ಣ ಪ್ರಸಂಗ ಒದಗಿತು. ಏನೆಂದರೆ, "ಸೈಯದ್ ಮರ್ಕಾರ್" ಎಂಬ ಕುದುರೇ ವ್ಯಾಪಾರಿಯೊಬ್ಬನು ಒಮ್ಮೆ ಕೃಷ್ಣದೇವರಾ ಯನ ಸನ್ನಿಧಾನಕ್ಕೆ ಬಂದು, ಚೆಲೋ ಅರಬ್ಬೀ ಕುದುರೆಗಳನ್ನು ತರಿಸಿ ಕೊಡುವುದಾಗಿ ವಿಜ್ಞಾಪಿಸಿ, ನಲವತ್ತು ಸಾವಿರ ವರಹಗಳನ್ನು ಮುಂಬಾಗಿ ಪಡೆದುಕೊಂಡುಹೋದನು. ಗೂಢಚಾರರ ಮೂಲಕವಾಗಿ ಅದಿಲ್‌ಶಹ ಹನು ಆ ಸಂಗತಿಯನ್ನು ತಿಳಿದುಕೊಂಡು, ಮರ್ಕಾರನನ್ನು ತನ್ನಲ್ಲಿಗೆ ಕರೆಸಿ ಅವನಿಗೆ ದುರ್ಬೋಧನೆಯನ್ನು ಮಾಡಿ, ಆವನಿಗೆ ಆಶ್ರಯವಿತ್ತು ಕುದುರೆ ಗಳನ್ನು ತಾನೇ ತರಿಸಿಕೊಂಡು ಕೃಷ್ಣದೇವರಾಯನಿಗೆ ಮಿತ್ರದ್ರೋಹವನ್ನುಂ ಟುಮಾಡಿದನು. ಹಾಗೂ ಮರ್ಕಾರನು ಮಾಡಿಕೊಟ್ಟ ಲಾಭಕ್ಕೆ ಬಹು ಮಾನವಾಗಿ ವಿದ್ಯಾನಗರದ ಎಲ್ಲೆಯಲ್ಲಿರುವ, ಮುದಗಲ್ಲು ದುರ್ಗಾಧಿಪತ್ಯ ವನ್ನು ಅವನಿಗೇ ಕೊಟ್ಟುಬಿಟ್ಟನು. ಇದೆಲ್ಲಾ ಕೃಷ್ಣದೇವರಾಯನಿಗೆ ಆಗಿಂ ದಾಗಲೇ ತಿಳಿದುಹೋಗದಿರಲಿಲ್ಲ. ಒಮ್ಮೆನೊಂದಿದ ಹಿಂದಿನ ದ್ವೇಷಾನಲವು ಪುನಃ ಹೊಗೆಯೇಳಲಾರಂಭಿಸಿತು. ಆದರೆ ಆಗ ರಾಯನು ಉತ್ಕಲವಿಜಯೋ ದ್ಯೋಗದಲ್ಲಿ ನಿರತನಾಗಿದ್ದುದರಿಂದ ಅದಿಲ್‌ಶಹನ ಮಿತ್ರಾಘಾತಕ್ಕೆ ಪ್ರತೀ

ಕಾರವಮಾಡಲು, ಇದು ಕಾಲವಲ್ಲವೆಂದರಿತು, ತಿಳಿದರೂ ತಿಳಿಯುದವನಂತೆಯೇ ನಟಿಸಿಕೊಂಡಿದ್ದನು. ಅಷ್ಟರಲ್ಲಿ ಹೊಗೆಯೇಳುವ ಬೆಂಕಿಯ ಮೇಲೆ ಹುಲ್ಲು ಹಾಕಿದಹಾಗೆ,ಇನ್ನೊಂದು ಘೋರವಾದ ಸಂಗತಿ ನಡೆಯಿತು. ಇದಕ್ಕೂ ಮೂಲ, ಸೈಯದ್ ಮರ್ಕಾರನೇ ಹೊರತು ಬೇರೆಯಲ್ಲ. 'ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ । ಏಕೈಕಮಪ್ಯನರ್ಥಾಯ ಕಿಮುಯತ್ರ ಚತುಷ್ಟಯಂ' ಎಂಬಂತೆ ಜನ್ಮತಃ ಕೇವಲ ವಿಷಯಲಂಪಟನಾದ ಮರ್ಕಾರನಿಗೆ, ಈಗ ದುರ್ಗಾಧಿಪತ್ಯವೂ ದೊರೆತಮೇಲೆ ಕೇಳಬೇಕೆ?. ಆತನ ವಿಷಯಲಂಪಟತ್ವವು, ಮಹಾ ಅನರ್ಥಕಾರಕವಾಗಿ ಪರಿಣಮಿಸಿತು. ಆತನ ಆ ಸ್ವಾರ್ಥಕಾರ್ಯಾರ್ಥವಾಗಿ ಅನೇಕ ಗೂಢಚಾರರು ಅಲ್ಲಲ್ಲಿ ತಿರುಗುತ್ತಿದ್ದರು. ಒಂದುದಿನ ಅವನಿಗೊಂದು ಹೊಸ ಸುದ್ದಿಯುಸುಗ್ಗಿ ಸಿಕ್ಕಿತು. ವಿದ್ಯಾನಗರದ ಅರಸರ ಆಳಿಕೆಯಲ್ಲಿರುವ "ಗುತ್ತಿ" ಎಂಬ ದುರ್ಗದಲ್ಲಿ ಇತ್ತೀಚೆಗೆ ಒಂದು ಸುಂದರ ಅಬಲಾರತ್ನವು ಹೊಳೆಯಲಾರಂಭಿಸಿರುವುದೆಂದು ಕೇಳಿದನು. ಆ ರತ್ನದ ಹೆಸರು ಚಿನ್ನಾದೇವಿಯೆಂದೂ, ತದ್ದುರ್ಗಾಧೀಶನಾದ ಗೋವಿಂದರಾಜನು ತನ್ನ ಸಾಕುಮಗಳಾಗಿ, ಆಕೆಯನ್ನು ಕಾಪಾಡುತ್ತಿರುವನೆಂದೂ ಗೊತ್ತಾಯಿತು. ಆ ಕುಮಾರಿಯ ವರ್ಣನೆಯ ವಾರ್ತೆಯನ್ನು ಕೇಳಿಯಂತೂ, ಅವನು ಹುಚ್ಚು ಹುಚ್ಚಾದನು. ಹೇಗಾದರೂ ಮಾಡಿ, ಆ ಸುಂದರಿಯನ್ನು ಹೊಂದಬೇಕೆಂದು, ಕೃತನಿಶ್ಚಿತನಾದನು. ಆದರೆ, ಹೇಗೆ? ಆ ಕನ್ಯಾರತ್ನವನ್ನು, ತನಗೆ ಮದುವೆಮಾಡಿಕೊಡೆಂದು, ಗೋವಿಂದರಾಜನನ್ನು ಕೇಳಿದರೆ, ಅವನು ಎಂದಿಗೂ ಒಪ್ಪನು. ಹಾಗೆಂದು, ತಾನು ಯುದ್ಧಕ್ಕೆ ನಿಂತರೆ, ತಾನೆಂದಿಗೂ ಗೆಲ್ಲನು. ಕಡೆಗೆ ಅವನ ದುರ್ಬುದ್ಧಿ, ಬಹು ಭಯಂಕರ ಪರಿಣಾಮಿಯಾದ ಲಂಚದ ಜಾಲವನ್ನೇ ಹೆಣೆದುಕೊಂಡಿತು. ಆದರೆ, ಅದನ್ನು ಬೀಸುವ ಮೊದಲು, ಆದಿಲ್‌ಶಹನ ಅನುಮತಿಯನ್ನು ಕೇಳಿಕೊಳ್ಳಬೇಕಾದುದು ಅವನ ಕರ್ತವ್ಯವಾಗಿತ್ತು. ಅದರಂತೆ, ಗುತ್ತೀದುರ್ಗವೀಗ ಬಹಳ ದುರ್ಬಲ ಸ್ಥಿತಿಯಲ್ಲಿರುವುದೆಂದೂ, ಅದನ್ನು ಈಗ ವಶಪಡಿಸಿಕೊಳ್ಳುವುದು ಬಹು ಸುಲಭವೆಂದೂ, ಅನುಜ್ಞೆಯೊಂದು ಮಾತ್ರ ಕೊಟ್ಟುಬಿಟ್ಟರೆ, ತಾನೇ ಆ ಕಾರ್ಯವನ್ನು ಸಾಧಿಸಿಬಿಡುವೆನೆಂದೂ, ಆದಿಲ್‌ಶಹನಿಗೆ ಸಮಾಚಾರಕಳುಹಿಸಿದನು. ಅದರಲ್ಲಿ ಚಿನ್ನಾ

ದೇವಿಯ ಸಮಾಚಾರ ಮಾತ್ರ ತಿಳಿಸದೆ, ತನ್ನೊಳಗೇ ರಹಸ್ಯವಾಗಿ ಇರಿಸಿಕೊಂಡಿದ್ದನು. ಅಡಿಲ್‌ಶಹನಾದರೋ, ವಿದ್ಯಾನಗರವನ್ನು ನುಂಗಲಿಕ್ಕೆ ಬಾಯಿತೆರೆದುಕೊಂಡೇ ಇರುವ ಹೆಬ್ಬಾವಲ್ಲವೇ? ಹಾಗಿರಲು ಈಗ ಸಿಕ್ಕಿದ್ದೇ ಲಾಭವೆಂದು ಬಗೆದು, ಮರ್ಕಾರನ ಆಲೋಚನೆಗೆ ಅನುಜ್ಞೆಯನ್ನು ಕೊಟ್ಟು ಬಿಟ್ಟನು.

ಸೈಯದ್ ಮರ್ಕಾರನು ಲಂಚದ ಜಾಲವನ್ನು ಬೀಸಿಯೇ ಬಿಟ್ಟನು. ಬೇಕಾದರೆ, ಇಡೀ ಪ್ರಪಂಚವನ್ನೇ ಅದಲುಬದಲು ಮಾಡಿಬಿಡಬಲ್ಲುದಾದ, ಆ ಲಂಚದ ಜಾಲಕ್ಕೆ ಗುತ್ತಿದುರ್ಗದ ಕಾವಲೊಡೆಯನೊಬ್ಬನು ಸಿಕ್ಕಿಯೇ ಬಿದ್ದನು. ಅವನ ಮೂಲಕವಾಗಿ, ದುರ್ಗಪ್ರವೇಶದ ರಹಸ್ಯಮಾರ್ಗವೊಂದು ಗೊತ್ತಾಯಿತು. ಇನ್ನೇನು? ಒಂದಾನೊಂದು ದಿನ, ನಟ್ಟಿರುಳಿನ ಸಮಯ. ಮರ್ಕಾರನು, ಒಂದು ಸಣ್ಣ ಸೇನೆಯೊಂದಿಗೆ ದುರ್ಗದೊಳಗೆ ಹೊಕ್ಕನು. ಮೋಸಕ್ಕೆ ಸೈನ್ಯವೇಕೆ—ಶಕ್ತಿಯೇಕೆ? ಅದೊಂದೇ ಸಾಕು—ಇಡೀ ಲೋಕವನ್ನೇ ಮುಳುಗಿಸಲಿಕ್ಕೆ! ದುಷ್ಟಶಿರೋಮಣಿ ಮರ್ಕಾರನು, ಮೋಸದಿಂದ ದುರ್ಗದೊಳಗೆ ನುಗ್ಗಿ, ಕಂಡವರನ್ನು ತುಂಡರಿಸುತ್ತ, ಮುಂದಕ್ಕೆ ಹೋದನು. ಆ ಕತ್ತಲೆಯಲ್ಲಿ ಆಕಸ್ಮಿಕವಾಗಿ, ಆ ದೊಡ್ಡ ಘಾತಕ್ಕೊಳಗಾಗಿ ದಿಕ್ಕು ತೋಚದೆ—ಪಾಪ!—ದುರ್ಗದ ಸೈನಿಕರು, ಅನ್ಯಾಯವಾಗಿ ಅರಿ ಖಡ್ಗಕ್ಕೆ ಆಹುತಿಯಾಗಿಹೋದರು. ಹಾಗೆಯೇ ಮರ್ಕಾರನು, ಗೋವಿಂದರಾಜನ ಭವನದೊಳಗೂ ನುಸುಳಿದನು.

ನಿದ್ರಿಸುತ್ತಿದ್ದ ಗೋವಿಂದರಾಜನು, ಹೊರಗಣ ಸದ್ದನ್ನು ಕೇಳಿ, ಎಚ್ಚೆತ್ತು ನೋಡಿ, ಪರೀಕ್ಷಿಸಿ ಜಾಗ್ರತನಾದನು. ಅವನು ಸಾಮಾನ್ಯನಲ್ಲ, ಮಹಾ ವೀರ. ಬಿಚ್ಚುಗತ್ತಿಯನ್ನು ಹಿಡಿದು, ಕೋಣಗಳ ಹಿಂಡಿನಮೇಲೆ, ಬೀಳುವ ಸಿಂಹದಂತೆ, ಶತ್ರುಗಳ ದಂಡಿನಮೇಲೆ ಬಿದ್ದನು. ಅಷ್ಟರಲ್ಲಿ, ಚೆನ್ನಾದೇವಿಯೂ ಅಸಿತ ಕೃಪಾಣಪಾಣಿನಿಯಾಗಿ, ಘೋರಚಂಡಿಯಂತೆ ಅಲ್ಲಿ ಪ್ರತ್ಯಕ್ಷಳಾಗಿ, ಶತ್ರುಗಳ ಶಿರಗಳನ್ನು ಧರೆಗೆ ಉರುಳಿಸಲಾರಂಭಿಸಿದಳು. ಅವಳನ್ನು ಕಂಡು, ಮರ್ಕಾರನ ದುರ್ಮಾರ್ಗದರ್ಶಿಯು, "ಹುಜೂರ್! ಅವಳೇ! ಅವಳೇ! ಆ ಹುಡುಗಿ!" ಎಂದು ಮರ್ಕಾರನಿಗೆ ತೋರಿಸಿದನು. ಕೂಡಲೇ

ಅವಳಿಗೇನೂ ಘಾತವನ್ನುಂಟುಮಾಡದೆ, ಪ್ರತಿಬಂಧಿಸುವಂತೆ ಮರ್ಕಾರನು ಗಟ್ಟಿಯಾಗಿ ಸೈನಿಕರಿಗಾಜ್ಞಾಪಿಸಿದನು.

ಒಂದೆಡೆ, ಗೋವಿಂದರಾಜನು ಅರಿಗಳ ಶಿರವನ್ನು ಚೆಂಡಾಡುತ್ತಾ, ಅರಿಗಳು, ಚಿನ್ನಾದೇವಿಯಮೇಲೆ ಮುಗಿಬೀಳುವುದನ್ನು ಕಂಡು, ಉಗ್ರನರಸಿಂಹನಂತೆ ಆ ಕಡೆಗೆ ಹಾರಿದನು. ಆದರೇನು? ನೂರಾರು ಮಂದಿಯಮುಂದೆ, ಅವನಿಗೆ ಹೆಚ್ಚುಹೊತ್ತು ತಡೆಯಲಾಗಲಿಲ್ಲ. ಮಿಂಚಿನಂತೆ ವೇಗದಿಂದ ಕುಣಿಕುಣಿದು ಬೀಳುವ, ನೂರಾರು ಖಡ್ಗಾಘಾತದಿಂದ, ಸ್ವಲ್ಪಹೊತ್ತಿನಲ್ಲಿಯೇ, ಅವನ ಕರವೇಗವು ನಿದಾನವಾಯಿತು; ಬರುಬರುತ್ತಾ ಚಲನನೇ ನಿಂತಿತು. ಖಡ್ಗವು ಜಾರಿ, ಝುಣಝಣನೆ ಕೆಳಗೆ ಬಿದ್ದಿತು! "ಹಾ!.........ಮ.....ಗಳೆ! ಚಿನ್ನಾ!............" ಎನ್ನುತ್ತಾ ದೀರ್ಘದಂಡಾಕಾರವಾಗಿ ನೆಲದಲ್ಲಿ ಬಿದ್ದುಬಿಟ್ಟನು. ಹಾ! ಸರ್ವನಾಶ! ವೈರಿಗಳು ಹೆಡೆ ಮುಡಿಬಿಗಿದು ಕಂಬಕ್ಕೆ ಸೇರಿಸಿ, ಅವನನ್ನು ಕಟ್ಟಿಹಾಕಿದರು. ಈ ಭಯಂಕರ ಅತ್ಯಾಚಾರದಿಂದ ಚಿನ್ನಾದೇವಿಯ ಕೈಕಾಲುಗಳೂ ಬಿದ್ದುಹೋದುವು. 'ಹಾ! ಹಾ!' ಎನ್ನುವುದರೊಳಗಾಗಿ, ಅವಳೂ ಪ್ರತಿಬಂಧಿತಳಾಗಿ ಹೋದಳು. ಪರಿತಾಪಕರವಾದ ಆ ದೃಶ್ಯವನ್ನು ಕಂಡು ಗೋವಿಂದರಾಜನು, "ಅಯ್ಯೋ! ಚಿನ್ನಾದೇವಿ! ಮಗಳಂತೆ ಕಾಪಾಡಲಿಕ್ಕಾಗಿ, ಅಣ್ಣನು ನಿನ್ನನ್ನು ನನ್ನ ಬಳಿಗೆ ಕಳುಹಿಸಿಕೊಟ್ಟರೆ,—ಅಯ್ಯೋ! ನಾನು ನಿನ್ನನ್ನು ಈ ರಾಕ್ಷಸನಿಗೆ ಬಲಿಕೊಟ್ಟುಬಿಟ್ಟೆನಲ್ಲಾ! ನಿನ್ನನ್ನು ಕಾಪಾಡಲಾರದೆ ಹೋದೆನೇ?............" ಎಂದು ಪ್ರಲಾಪಿಸುತ್ತಿರಲು, ಮರ್ಕಾರನು ಅವನೆದುರಿಗೆ ಬಂದುನಿಂತು, "ಬೇಕೂಫ್! ಮುಚ್ಚುಬಾಯಿ!' ಎಂದು ಗರ್ಜಿಸುತ್ತಾ, ಬಲಗಾಲಿನಿಂದ ಗೋವಿಂದರಾಜನನ್ನು ಒದೆದನು. ಅದನ್ನು ಕಂಡು, ಚಿನ್ನಾದೇವಿ, "ಅಯ್ಯೋ! ಈ ನೀಚಾಗ್ರಣಿಯ ಕಾಲನ್ನು ಮುರಿವರಿಲ್ಲದೆ ಹೋದರೆ? ಹಾ! ಕೃಷ್ಣಾ!" ಎಂದು ಕೂಗಿ ಹಲ್ಲುಕಡಿದಳು.

ಗೋವಿಂದರಾಜನು ಕಣ್ಣುಕೆಕ್ಕರಿಸಿ ನೋಡುತ್ತಾ, ಬೋನಿನೊಳಗೆ ಸಿಕ್ಕಿಬಿದ್ದ ಸಿಂಹದಂತೆ, ಉರುಳಾಡುತ್ತಾ, "ಕಳ್ಳಾ! ರಣಹೇಡಿ! ನಿಲ್ಲು! ನಿನ್ನ ಮಂಡೆಯನ್ನೀಗಲೇ ಒಡೆಯುವೆನು" ಎಂದು ಅಬ್ಬರಿಸಿ, ದೇಹವನ್ನು ಕಟ್ಟು

ಸಿರಿನಿಂದ ಬೀಗಿಸಲು, ಕಟ್ಟುಗಳು ಚಟಚಟನೆ ಸಿಡಿಯಲಾರಂಭಿಸಿದುವು. ಕೂಡಲೇ ಆ ದುರುಳರು ಅವನನ್ನು ಬಿಗಿಯಾಗಿ ಹಿಡಿದುಕೊಂಡರು.

ಮರ್ಕಾರನು ಪೈಶಾಚಿಕ ನಗುವನ್ನು ನಕ್ಕು, ಹಲ್ಲುಕಡಿದು, "ಕಾಫರ್! ಇಷ್ಟು ಸೊಕ್ಕೆ; ಇಷ್ಟು ಬಲವೆ ನಿನಗೆ? ಸೈತಾನ್ ತಿನ್ನು! ನಮ್ಮ ಇಷ್ಟು ಮಂದಿಯನ್ನು ಕೊಂದ ಫಲವನ್ನು ತಿನ್ನು! ಸಾಯಿ! ಸೈತಾನ್!........" ಎಂದು ಘೋರ ರೂಪದಿಂದ ದೀರ್ಘವಾದ ಕತ್ತಿಯನ್ನೆತ್ತಿ, ವೇಗದಿಂದ ಗೋವಿಂದ ರಾಜನ ಕಂಠಕ್ಕಿಟ್ಟನು. ಆ ಕ್ರೂರದಿನದ ಪರಮಾವಧಿಯನ್ನು ನೋಡಲಾರದೆ, ಎಲ್ಲರೂ ಕಣ್ಣುಮುಚ್ಚಿದರು. ಗೋವಿಂದರಾಜನ ಶಿರವು "ಚಿನ್" ಎಂದು ಮೇಲಕ್ಕೆ ಹಾರಿ, "ನಾ" ಎಂದು ಆರ್ತನಾದಮಾಡಿ, ನೆಲಕ್ಕೆಬಿದ್ದು, ನಿಶ್ಶಬ್ದ ವಾಯಿತು.

"ಅಯ್ಯೋ!" ಎಂದು ಚಿನ್ನಾದೇವಿ ಮಹಾಸಂಕಟದಿಂದ ಉರುಳಾಡಿ, ಬಳಿಕ ಕೋಪದಿಂದ ಕಿಡಿಕಿಡಿಯಾಗಿ, ಘೋರ ದುರ್ಗಿಣಿಯಂತೆ ಮರ್ಕಾರ ನನ್ನು ನೋಡುತ್ತಾ, "ಪಾಪಿ! ಚಾಂಡಾಲ! ನಿನ್ನ ಈ ನೀಚವಾದ ಕೈಕಾಲು ಗಳನ್ನು ಮುರಿಯದಿದ್ದರೆ, ನಾನು ಕರ್ಣಾಟಕ ಸಾರ್ವಭೌಮ ಶ್ರೀಕೃಷ್ಣ ದೇವರಾಯನ ಪ್ರೇಮಪಾತ್ರಳಾದ ಚಿನ್ನಾದೇವಿಯೇ ಅಲ್ಲ!" ಎಂದು, ಉಚ್ಚ ಸ್ವರದಿಂದ ಹೇಳಿದಳು.

ಮರ್ಕಾರನು "ಅಹ್ಹಹ್ಹಹಾ" ಎಂದು ಭಯಂಕರವಾಗಿ ನಕ್ಕನು.

## ೧೪
## ಪ್ರೇಮ ವಧು

ಅವಳು ಯಾರು, ಎಲ್ಲಿಂದ ಬಂದಳು, ಏನು ಕತೆ, ಎಂಬುದೊಂದೂ ತಿಳಿಯದು. ಯಾರಾದರೂ ಕೇಳಿದರೆ, ಮೌನವಾಗಿರುವಳು. ಒತ್ತಾಯಪಡಿಸಿ ದರೆ, 'ಗೊತ್ತಿಲ್ಲ' ಎನ್ನುವಳು. ಇನ್ನು ಹೆಚ್ಚು ಮಾತನಾಡಿದರೆ, 'ಅನಾಥೆ' ಎಂದು ಹೇಳಿಬಿಡುವಳು. ಅಷ್ಟೇಸರಿ, ಅದಕ್ಕಿಂತ ಹೆಚ್ಚಿನ ವೃತ್ತಾಂತವು ಅವಳ ಬಾಯಿಂದ ಹೊರಡದು. ಅವಳ ಶೋಕಮೂರ್ತಿಯನ್ನು ಕಂಡರೆ, ಯಾರಿಗೂ ಅವಳನ್ನು ಹೆಚ್ಚಿಗೆ ಮಾತಾಡಿಸುವ ಬುದ್ಧಿ ಹುಟ್ಟದು.

ಅವಳ ನಿಜವಾದ ನಾಮವೂ ಯಾರಿಗೂ ಗೊತ್ತಿಲ್ಲ. ವಿದ್ಯಾನಗರಕ್ಕೆ ಬಂದಾಗ, ಅವಳು ತುಂಬಿದ ಗರ್ಭಿಣಿ. ಶಿಶುವನ್ನು ಹೆತ್ತಮೇಲೆ ಅವಳು ತಾಯಿಯಾದಳು. ಅಂದರೆ ಶಿಶುವಿಗೊಂದಕ್ಕೇ ತಾಯಿಯಲ್ಲ. ಎಲ್ಲರಿಗೂ ತಾಯಿ. 'ತಾಯಿ' ಎಂದೇ ಎಲ್ಲರೂ ಕರೆಯುವರು. ಅವಳು 'ತಾಯಿ' ಎಂದೇ ಪರಿಚಿತಳಾಗಿರುವಳು.

ತಾಯಿ ಸಾಧು; ಶಾಂತಸ್ವರೂಪಿಣಿ; ಸದಾಸರ್ವದಾ ಮನಸ್ಸಿನಲ್ಲಿ ಏನೋ ದಾರುಣವಾದ ವ್ಯಥೆಯನ್ನನುಭವಿಸುವಂತೆ ಕಾಣುವಳು. ಅವಳನ್ನು ನೋಡಿದರೆ, ಕಲ್ಲಾದರೂ ಕರುಣಾರ್ದ್ರವಾಗಿ ಕರಗೀತು. ಅಂತೆಯೇ ಅವಳು ತುಳುವ ನರಸರಾಯನ ಕರುಣಾದರಕ್ಕೆ ಪಾತ್ರಳಾದಳು. ಅವನ ಆಜ್ಞೆಯಿಂದ ಚಿಕ್ಕದೊಂದು ಮನೆಯಲ್ಲಿ ವಾಸವಾಗಿದ್ದಳು.

ಅವಳ ಕೊರಳಿನಲ್ಲಿ ಮಂಗಲಸೂತ್ರವಿದ್ದಿತು. ಆದುದರಿಂದ ಒಮ್ಮೊಮ್ಮೆ ಯಾರಾದರೂ ಅವಳ ಪತಿಯ ವಿಚಾರವನ್ನು ವಿಚಾರಿಸದಿರುತ್ತಿದ್ದಿಲ್ಲ. ಹಾಗೆ ವಿಚಾರಿಸಿದಾಗ ಅವಳ ಕಣ್ಣಿನಲ್ಲಿ ಫಕ್ಕನೆ ನೀರು ತುಂಬುವುದು. ಉಸಿರಾಡಲಿಕ್ಕಾಗದಂತೆ ಗಂಟಲು ಕಟ್ಟಿಕೊಳ್ಳುವುದು. ಆವಿಗೆಯೊಳಗಿನ ಬೆಂಕಿಯಂತೆ ಅವಳ ಮನಸ್ಸಿನೊಳಗಿರುವ ಆ ವ್ಯಥೆಯು ಸಹೃದಯರ ಹೃದಯಕ್ಕೆ ಚೆನ್ನಾಗಿ ನಾಟಿಕೊಳ್ಳುವುದು. ಕಡೆಗಂತೂ ಬಿಕ್ಕಿಬಿಕ್ಕಿ ಅಳುತ್ತಾ ಮನೆಯೊಳಗೆ ಹೋಗಿಬಿಡುವಳು. ಎಷ್ಟೋಹೊತ್ತು ಮೌನಮುದ್ರೆಯಿಂದ ಕಣ್ಣೀರು ಸುರಿಸಿದಮೇಲೆ, ಮಳೆಸುರಿದಮೇಲೆ ಸ್ವಚ್ಛವಾಗುವ ಗಗನಮಂಡಲದಂತೆ ಅವಳ ಮುಖಮಂಡಲವು ಶಾಂತಿಯುತವಾಗುವುದು. ಅವಳ ಆ ಅಜ್ಞಾತ ವೃತ್ತಾಂತಕಾರಣದಿಂದ ಜನರು ನಾನಾವಿಧವಾಗಿ ಸಂದೇಹಕ್ಕೊಳಗಾದರು. ಆ ಸಂದೇಹದ ಸಾರಾಂಶವೇನೆಂದರೆ:—'ಹಿಂದೆ ಅವಳಿಗೆ, ಬೇಕಾದಷ್ಟು ಐಶ್ವರ್ಯವಿತ್ತು. ಏನೋ ಕೆಟ್ಟಕೆಲಸವಮಾಡಿ, ಗಂಡನಿಂದ ತ್ಯಜಿಸಲ್ಪಟ್ಟು ಬಂದಿದ್ದಾಳೆ. ಈಗ ತಾನು ಮಾಡಿದ ಪಾಪಕಾರ್ಯವನ್ನು ನೆನೆನೆನೆದು ಅಳುತ್ತಾಳೆ, ಪಶ್ಚಾತ್ತಾಪಪಡುತ್ತಾಳೆ. ಪಾಪ ..........ಇತ್ಯಾದಿ' ಆದರೆ, ಆದರೆ ವಾಚಕರೇ! ನೀವೇನೂ ಇದನ್ನು ಸತ್ಯವೆಂದು ತಿಳಿಯಬೇಡಿರಿ. ಅದು ಕೇವಲ ಮಂದಿಯ ಕಲ್ಪನಾಪ್ರಮಾದ ಅಷ್ಟೆ. ಆ ಕಲ್ಪನಾಪ್ರಮಾದವು

ಅವಳೊಬ್ಬಳು ಜಾರೆಯೆಂದೂ ಅವಳ ಪುತ್ರಿ ಜಾರಾಪುತ್ರಿಯೆಂದೂ ಎಲ್ಲೆಲ್ಲಿಯೂ ಡಂಗುರಸಾರಿತ್ತು.

ಅವಳ ಮಗಳೇ, ವಾಚಕರಿಗೆ ಸ್ವಲ್ಪಸ್ವಲ್ಪ ಪರಿಚಿತಳಾಗಿರುವ ಚಿನ್ನಾದೇವಿ. ತಾಯಿ ರಾಜಪೋಷಣೆಗೆ ಪಾತ್ರಳಾಗಿದ್ದುದರಿಂದ ಚಿನ್ನಾದೇವಿ ತನ್ನ ಬಾಲ್ಯದಿಂದಲೇ ಕೃಷ್ಣದೇವರಾಯನಿಗೆ ಪರಿಚಿತಳಾಗಿರುವುದೇನೂ ಆಶ್ಚರ್ಯವಲ್ಲ. ಬರುಬರುತ್ತಾ ಆ ಪರಿಚಯವೇ ಪ್ರೀತಿಯಾಗಿ, ಪ್ರೀತಿಯೇ ಪ್ರೇಮವಾಗಿ, ಪ್ರೇಮವೇ ಗಾಢತಮವಾಗಿ — ಆತ್ಮಪ್ರೇಮವಾಗಿ ಪರಿಣಮಿಸಿಬಿಟ್ಟಿತು. ಕೃಷ್ಣದೇವರಾಯನು ಸಿಂಹಾಸನಾರೂಢನಾದಮೇಲೆ ಚಿನ್ನಾದೇವಿಯನ್ನು ವರಿಸಿ ಅವಳನ್ನು ಪಟ್ಟದರಾಣಿಯನ್ನಾಗಿ ಮಾಡಬೇಕೆಂದು ಬಗೆದು, ತನ್ನ ಆ ಇಚ್ಛೆಯನ್ನು ಪರಮಾಪ್ತಮಂತ್ರಿಯಾದ ತಿಮ್ಮರಸನ ಮುಂದೆ ಅರುಹಿದನು.

ಇಂತಹ ಪ್ರಸಂಗವು ಬಂದೀತೆಂದು, ಧೀಮಂತನಾದ ತಿಮ್ಮರಸು ಮೊದಲೇ ಊಹಿಸಿಕೊಂಡಿದ್ದನು. ಪರಮಪೂಜ್ಯ ಕರ್ಣಾಟಕ ಸಾರ್ವಭೌಮನು, ಯಾವಳೋ ಜಾರಾಪುತ್ರಿಯನ್ನು ಪಟ್ಟದ 'ರಾಣಿಯಾಗಿರಿಸಿ, ಸುಪವಿತ್ರವಾದ ವಿದ್ಯಾನಗರರತ್ನಸಿಂಹಾಸನವನ್ನು ಕಳಂಕದೂಷಿತವಾಗಿ ಮಾಡುವುದೆ? ಎಂತಹ ಅನ್ಯಾಯ! ಎಂತಹ ಅಗೌರವ! ರಾಜನಿಷ್ಠನಾದ ತಿಮ್ಮರಸನಿಗೆ ಅದೆಂದಿಗೂ ಸಹನೆಯಾಗಲಿಲ್ಲ. ಅವನು ನಾನಾರೀತಿಯಾಗಿ ಬೋಧಿಸಿ, ರಾಯನ ಮನಸ್ಸನ್ನು ಚಿನ್ನಾದೇವಿಯ ಮೇಲಿನಿಂದ, ತಿರುಗಿಸುವ ಪ್ರಯತ್ನ ಮಾಡಿದನು. ಆದರೆ, ರಾಯನ ಹೃದಯಾಂತರಾಳದಲ್ಲಿರುವ ಚಿನ್ನಾದೇವಿಯ ಮೇಲಿನ ಪ್ರೇಮವು ಜನ್ಮಜನ್ಮಾಂತರದಲ್ಲಿಯೂ ಅಳಿಯದಂತೆ, ಪ್ರಗಾಢವಾಗಿ ಬೇರೂರಿರುವುದೆಂದು ತಿಳಿದು, 'ರಾಜಾನೋ ಬಹು ವಲ್ಲಭಾಃ' ಎಂಬ ನ್ಯಾಯದಂತೆ, ರಾಜರಿಗೆ ಅನೇಕಮಂದಿ ಭೋಗಕಾಂತೆಯರಿರುವುದು ದೋಷವಲ್ಲವಾದುದರಿಂದ, ಬೇಕಾದರೆ ಚಿನ್ನಾದೇವಿಯನ್ನು ಭೋಗಕಾಂತೆಯಾಗಿಟ್ಟುಕೊಳ್ಳಬಹುದೆಂದು ತಿಳಿಸಿ ಹೇಳಿದನು.

ಮಂತ್ರಿಪುಂಗವನಾದ ವೃದ್ಧ ತಿಮ್ಮರಸನಮೇಲೆ ಕೃಷ್ಣದೇವರಾಯನಿಗೆ ಬಹಳ ವಿಶ್ವಾಸ; ಬಹಳ ಗೌರವ; ಬಹಳ ಭಕ್ತಿ; ಹೆಚ್ಚೇನು? ತಿಮ್ಮರಸ

ನನ್ನು 'ಅಪ್ಪಾಜಿ' ಎಂದು ಸಂಬೋಧಿಸುವುದನ್ನು ನೋಡಿದಾಗಲೇ ರಾಯ ನಿಗೆ ಅವನಮೇಲೆ ಪಿತೃಭಕ್ತಿಯೇ ತುಂಬಿರುವುದೆಂದು ವ್ಯಕ್ತವಾಗುವುದು. ಅಂತಹ ಸಚಿವ ಶ್ರೇಷ್ಠನು ತನ್ನ ಹಾಗೂ ರಾಜ್ಯದ ಹಿತಾರ್ಥವಾಗಿ ಹೇಳಿದ, ಯುಕ್ತಿಯುಕ್ತವಾದ ವಚನವನ್ನು ಮೀರಿಬಿಡಲು, ಸುಹೃದಯನಾದ ಕೃಷ್ಣ ದೇವರಾಯನಿಗೆ ಹೇಗೆ ಸಾಧ್ಯ? ತಾನು ರಾಜ, ತಾನೇನು ಮಾಡಿದರೂ ಮಾಡಬಹುದು; ತನ್ನನ್ನು ತಡೆಯಲು ಯಾರಿಗೂ ಅಧಿಕಾರವಿಲ್ಲ; ಎಂಬ ಗರ್ವಾವಿಧೇಯತೆಗಳು, ನಮ್ಮ ರಾಜನಿಗೆ ಗೊತ್ತೇ ಇಲ್ಲ. ತಾನು ಪ್ರಜಾ ಸೇವಕ, ದೇವರಕೈಯ್ಯಾಳು, ಎಂಬ ತತ್ವದಿಂದಲೇ ಸಿಂಹಾಸನಾರೂಢನಾಗಿ ದ್ದನು. ಆದುದರಿಂದ ಮಂತ್ರಿಯ ಮಾತನ್ನು ಮೀರಲು ಅವನಿಂದಾಗಲಿಲ್ಲ. ಆದರೆ, ತನ್ನ ಜೀವದ ಜೀವಾಳವ ಪ್ರೇಮಮಯಿಯಾದ—ಚಿನ್ನಾದೇವಿ ಯನ್ನು — ಕನ್ಯಾಶಿರೋಮಣಿಯನ್ನು — ಸೌಂದರ್ಯ ಸದ್ಗುಣಸಾಗರೆ ಯನ್ನು ತೊರೆದಿರುವುದು ಹೇಗೆ? ಹಾಗಾದರೆ ಆ ನಾರೀಮಣಿಯನ್ನು ಭೋಗಕಾಂತೆಯಾಗಿಟ್ಟುಕೊಳ್ಳಬಹುದೆ? ಛಿ! ಶಿರಸ್ಸಿನಲ್ಲಿ ಧರಿಸಲು ಯೋಗ್ಯ ವಾದ ತುಲಸಿಯನ್ನು, ಕಾಲಿನಿಂದ ತುಳಿಯುವುದುಂಟೆ? ಕಂಠದಲ್ಲಿ ಧಾರಣೆ ಮಾಡುವ ಕುಸುಮಮಾಲೆಯನ್ನು, ಕಾಲಿಗೆ ಕಟ್ಟುತ್ತಾರೆಯೆ? ಕೂಡದು; ಅದು ತೀರಾ ಅನ್ಯಾಯ. ಚಿನ್ನಾದೇವಿಯನ್ನು ಭೋಗಕಾಂತೆಯಾಗಿಟ್ಟುಕೊ ಳ್ಳುವುದಕ್ಕಿಂತಲೂ, ತೊರೆದಿರುವುದೇ ಮೇಲು. ಪ್ರೇಮವು ಎಂದಿಗೂ ಭೋಗ್ಯ ವಸ್ತುವಲ್ಲ. ಅದು ಹೃದಯದೊಳಗೆ ತಿಳಿನೀರ ಬುಗ್ಗೆಯಂತೆ, ಸದಾ ಒಸರು ತ್ತಿರುವ ಒಂದು ಆನಂದಲಹರಿ; ಆತ್ಮವಸ್ತು. ಅವನು ಅವಳ ಹೃದಯ ವನ್ನು—ಆ ಹೃದಯದೊಳಗಿನ ಆತ್ಮವನ್ನು ಪ್ರೀತಿಸಿದ್ದಾನೆ. ಹಾಗೆಯೇ ಅವಳ ಪ್ರೇಮವು ಕೃಷ್ಣದೇವರಾಯನ ಆತ್ಮವನ್ನು ಪ್ರೀತಿಸಿಕೊಂಡಿತ್ತು. ಆ ಎರಡು ಆತ್ಮಗಳಿಗೆ, ಒಂದನ್ನೊಂದು ಹೊಂದುವ ಯೋಗವಿಲ್ಲದಮೇಲೆ ಮಾಡುವುದೇನು? ಬೇಡ. ಹೃದಯದೊಳಗಿನ ಪ್ರೇಮವು, ಹೃದಯಾಂತ ರಾಳದ ಅಂತರ್ಯದಲ್ಲೇ ಇರಲಿ, ಎಂದು ಭಾವಿಸಿಕೊಂಡು, ರಾಯನು ತನ್ನ ಪ್ರೇಮವನ್ನು ಹೃದಯದೊಳಗೆ ಒತ್ತೊತ್ತಿಟ್ಟುಕೊಂಡು ಸುಮ್ಮನಿದ್ದನು.

ಅವನು ಸುಮ್ಮನಿದ್ದರೂ, ಅವನ ಮನಸ್ಸಿನ ಬೇಗೆ ಮಾತ್ರ ಚಾಣಾಕ್ಷ ನಾದ ತಿಮ್ಮರಸನಿಗೆ ಗೋಚರಿಸದೆ ಹೋಗಲಿಲ್ಲ. ರಾಜನ ಮನಸ್ಸು ಸರಿ

ಯಾಗಿರದಿದ್ದರೆ, ರಾಜಕಾರ್ಯವು ಸುಗಮವಾಗದಲ್ಲವೇ? ರಾಜನ ಮನಸ್ಸನ್ನು ಸರಿಗೊಳಿಸಬೇಕಾದರೆ, ಚಿನ್ನಾದೇವಿಯ ನೆನಪನ್ನು ಅವನ ಮನದಿಂದ ಮರೆಸಬೇಕು. ಅದಕ್ಕಾಗಿ ಚಿನ್ನಾದೇವಿಯನ್ನು, ರಾಯನ ಕಣ್ಮರೆ ಮಾಡಿಬಿಡುವುದೇ ಉಪಾಯ. ಅವಳ ರೂಪವು ಪದೇ ಪದೇ ಅವನ ಕಣ್ಣಿಗೆ ಬೀಳುತ್ತಿದ್ದರೆ, ಪ್ರೇಮಾಂಕುರವು ಬಳೆಯುತ್ತಲೇ ಹೋಗುವುದಲ್ಲದೆ, ಎಂದಿಗೂ ನಾಶವಾಗದು. ಅವಳು ಕಣ್ಮರೆಯಾದರೆ ಕಾಲಕ್ರಮದಲ್ಲಿ ಅವಳ ನೆನಪೂ ಮರೆಯಾಗವುದು. ಆಗ ರಾಯನ ಮನವು ನೆಮ್ಮದಿಗೂ ಬಂದುಬಿಡುವುದು. ಹಾಗೆ ಯೋಚಿಸಿ ತಿಮ್ಮರಸನು, ರಾಯನ ಹೃದಯದಲ್ಲಿ ಇನ್ನೊಬ್ಬಳು ಕುಮಾರಿಯ ಪ್ರೇಮಬೀಜವನ್ನು ಬಿತ್ತಿದನು. ಅವಳು ಉತ್ಕಲೇಶನ ಮಗಳಾದ ಜಗನ್ಮೋಹಿನೀ – ತಿರುಮಲಾದೇವಿಯೇ ಹೊರತು, ಇನ್ನಾರೂ ಅಲ್ಲವೆಂದು ವಾಚಕರಿಗೆ ಗೊತ್ತಿದೆ. ಆದರೆ, ನವೀನ ಪ್ರೇಮಬೀಜವು ರಾಯನ ಹೃದಯದಲ್ಲಿ ಅಂಕುರಿಸಿತೋ ಇಲ್ಲವೋ ತಿಳಿಯದು. ಆದರೆ ಹೃದಯದಲ್ಲಿ ನೆಲೆಗೊಂಡಿತೆಂಬುದು ಮಾತ್ರ ನಿಶ್ಚಯ. ಅದು ಅಂಕುರಿಸುವಂತೆ, ತಿಮ್ಮರಸನು ರೂಪಲಾವಣ್ಯದ ವರ್ಣನೆಯ ಜಲಸೇಚನವನ್ನು ಎಡಬಿಡದೆ ಮಾಡುತ್ತಲೇ ಇದ್ದನು.

ಅದು ಹಾಗಿರಲು ರಾಯನು ಅದೇ ನೆವವನ್ನೇ ಮುಂದಿಟ್ಟುಕೊಂಡು ಉದಯಗಿರಿ ಮುತ್ತಿಗೆಗೆ ಹೊರಟನಷ್ಟೆ! ಆಗಲೇ ತಿಮ್ಮರಸನು ಚಿನ್ನಾದೇವಿಯನ್ನು ಕಣ್ಮರೆಗೊಳಿಸಲು ಬೇಕಾದ ಏರ್ಪಾಡನ್ನು ಮಾಡಿದನು. ಆ ಏರ್ಪಾಡಿನ ಕ್ರಮದಂತೆ, ಒಂದಾನೊಂದು ದಿನ ರಾತ್ರಿ ಕೆಲವುಮಂದಿ ಕಟ್ಟಾಳುಗಳು ತಾಯಿಯ ಚಿಕ್ಕಮನೆಯೊಳಗೆ ಹೊಕ್ಕು ಔಷಧಪ್ರಯೋಗದಿಂದ ಚಿನ್ನಾದೇವಿಯನ್ನು ಮೂರ್ಛೆಗೊಳಿಸಿ, ಎತ್ತಿ, ಪಾಲಕಿಯಲ್ಲಿ ಹಾಕಿಕೊಂಡು ಪಯಣದ ಮೇಲೆ ಪಯಣವನ್ನು ಮಾಡುತ್ತಾ, ಗುತ್ತಿದುರ್ಗವನ್ನು ಸೇರಿದರು. ನಿದ್ರಾಪರವಶಳಾಗಿದ್ದ ತಾಯಿಗೆ ಈ ಸಂಗತಿ ಗೊತ್ತಾಗದಂತೆ ನಡೆಯಿಸಲ್ಪಟ್ಟಿತು ಅಲ್ಲದೆ ಚಿನ್ನಾದೇವಿ ಯಾವನೋ ಒಬ್ಬನೊಂದಿಗೆ ಓಡಿಹೋದಳೆಂಬುದಕ್ಕೆ ಗುರುತಾಗಿ ಅವಳ ಬಟ್ಟೆಬರೆಯೆಲ್ಲವೂ ಆ ಮನೆಯಿಂದ ಮಾಯವಾಗಿದ್ದುವು. ಇದಿರಲಿ.

ಗುತ್ತಿ ದುರ್ಗಾಧೀಶನಾದ ಗೋವಿಂದರಾಜನು ತಿಮ್ಮರಸನ ನಿಜ ಸಹೋದರನೇ ಹೊರತು ಬೇರೆಯಲ್ಲ. ಆಳುಗಳು ಗೋವಿಂದರಾಜನ ವಶಕ್ಕೆ ಚಿನ್ನಾದೇವಿಯನ್ನು ಒಪ್ಪಿಸಿ, ತಿಮ್ಮರಸನ ಪತ್ರವನ್ನು ಕೊಟ್ಟರು. ಆ ಪತ್ರದಲ್ಲಿ—ಚಿನ್ನಾದೇವಿಯನ್ನು ರಹಸ್ಯದಲ್ಲಿ ತನ್ನ ಸ್ವಂತಮಗಳಹಾಗೆ ಸಲಹಿ, ಶೀಘ್ರದಲ್ಲಿಯೇ ಯೋಗ್ಯವರನಿಗೆ ಕೊಟ್ಟು ವಿವಾಹಮಾಡಿಸೆಂಬ ಅಭಿಪ್ರಾಯವನ್ನು ತಿಮ್ಮರಸನು ಬರೆದಿದ್ದನು.

ಆಗ ಚಿನ್ನಾದೇವಿ ಹದಿನಾಲ್ಕುವರ್ಷಪ್ರಾಯದ ಹುಡುಗಿ; ತನ್ನ ಸರ್ವಸ್ವಳಾದ ತಾಯಿಯಿಂದ ಆಕಸ್ಮಾತ್ತಾಗಿ ಅಗಲಿದುದು ಅವಳಿಗೆಷ್ಟು ದುಃಖವನ್ನುಂಟುಮಾಡಿರಬಹುದೋ, ವಾ ಚ ಕ ರೇ ಊಹಿಸಿಕೊಳ್ಳೋಣವಾಗಲಿ. ಗೋವಿಂದರಾಜನು ಪ್ರೀತಿಯನ್ನೊಸರುತ್ತಾ, ಬಗೆಬಗೆಯಿಂದ ಅವಳನ್ನು ಸಮುದಾಯಿಸಿ, ತನ್ನಮೇಲೆ ಅವಳಿಗೆ ನಂಬಿಗೆಯುಂಟಾಗುವಂತೆ ಮಾಡಿದನು. ಕೃಷ್ಣದೇವರಾಯನ ಪ್ರೇಮಸಂಬಂಧವೇ ತನ್ನ ಈ ದುರ್ಗತಿಗೆ ಮೂಲವೆಂದು ಅವಳಿಗೆ ಗೊತ್ತಾಯಿತು. ಆದಕ್ಕೂ ಬೀಜವು ಅವಳ ತಾಯಿಯ ಅಜ್ಞಾತವೃತ್ತಾಂತವಲ್ಲವೇ? ಹೌದು. ಹಿಂದೆ ಅವಳು ತಾಯಿಯನ್ನು ಕುರಿತು ತನ್ನ ತಂದೆ ಯಾರೆಂದು ವಿಚಾರಮಾಡದಿರಲಿಲ್ಲ. ಅದಕ್ಕೆ, "ನಿನ್ನ ತಂದೆ ಒಬ್ಬ ಪ್ರಸಿದ್ಧಪುರುಷನೆಂದೂ, ತನ್ನ ಮೇಲೊಂದು ಕಳಂಕ ಪ್ರಾಪ್ತವಾದುದರಿಂದ, ತನ್ನನ್ನು ತ್ಯಜಿಸಿ ಹೊರಗಟ್ಟಿದ"ನೆಂದೂ ಹೇಳುತ್ತ ತಾಯಿ ಅಳುತ್ತಿದ್ದಳು. ಆದರೆ ತಂದೆ ಇಂತಹವನೆಂಬುದು ಮಾತ್ರ ಅವಳ ಬಾಯಿಯಿಂದ ಹೊರಡುತ್ತಿರಲಿಲ್ಲ. ಅಂತು ತಾನು ಜಾರಾಪುತ್ರಿಯಲ್ಲವೆಂದೂ ಅದನ್ನು ಸ್ಥಾಪಿಸಲು ಮಾರ್ಗವಿಲ್ಲದಿದ್ದುದರಿಂದ ಈಗ ಈ ಬಗೆಯ ಮಹಾವಿಯೋಗ ದುಃಖಕ್ಕೆ ಒಳಗಾಗಬೇಕಾಯಿತು. ಇನ್ನೆಂದಿಗೂ ತಾನು ಒಳ್ಳೇದಿನಗಳನ್ನು ಕಾಣಲಾರೆನೆಂದೂ, ತಾನು ಹುಟ್ಟಿದುದು ಬರಿ ಅನ್ನದಂಡ—ಭೂಭಾರವಾಯಿತೆಂದು ಯೋಚಿಸಿಕೊಂಡು ಆವಳು ತನ್ನ ಜೀವನದಲ್ಲಿಯೇ ನಿರಾಶಳಾಗಿ ಹೋಗಿದ್ದಳು.

ಗೋವಿಂದರಾಜನಿಗೆ ಮಕ್ಕಳಿರಲಿಲ್ಲ. ಆದುಕಾರಣ, ಅವನು ಚಿನ್ನಾದೇವಿಯನ್ನು ಬಹು ಅಕ್ಕರೆಯಿಂದ ಕಾಪಾಡತೊಡಗಿದನು. ಹಾಗೂ, ತಿಮ್ಮ

ರಸನ ಆಜ್ಞೆಯಂತೆ ಅವಳಿಗೆ ಯೋಗ್ಯವರನನ್ನು ಹುಡುಕಲಾರಂಭಿಸಿದನು. ಆದರೆ, ವಿರಕ್ತಳಾದ ಚಿನ್ನಾದೇವಿ ಅದನ್ನರಿತು, ತನಗೆ ವಿವಾಹವೇ ಬೇಡ ವೆಂದು, ಕಲ್ಲುಕರಗುವಂತೆ ಅಂಗಲಾಚಿದುದರಿಂದ, ಆತನು ಆ ಪ್ರಯತ್ನ ದಲ್ಲಿ ಸ್ವಲ್ಪ ನಿಧಾನಿಸಿ, ಚಿನ್ನಾದೇವಿಯನ್ನು ಸಾಂತ್ವವಚನಗಳಿಂದ ಸಮದಾ ಯಿಸುತ್ತಿದ್ದನು.

ಹಾಗಿರುವಾಗಲೇ, ಹಿಂದೆ ಹೇಳಿದಂತೆ ರಣಹೇಡಿಯಾದ ಸೈಯದ್ ಮರ್ಕ್ಕರನು ಘಾತುಕತನದಿಂದ ಚಿನ್ನಾದೇವಿಯನ್ನು ಸೆರೆಹಿಡಿದುಕೊಂಡು ಹೋದನು.

ಅವಳ ಗತಿ ಹೀಗಾಗಿರಲು ವಿದ್ಯಾನಗರದಲ್ಲಿ—ಆವಳು ಯಾವನೊಂ ದಿಗೋ ಓಡಿಹೋದಳೆಂಬ ಸುದ್ದಿ ಹರಡಿತ್ತು. ಆ ರೀತಿಯಾದ ಸುದ್ದಿ ಹರಡಿ, ಕೃಷ್ಣದೇವರಾಯನ, ಚಿನ್ನಾದೇವಿಯಮೇಲಣ ಪ್ರೇಮವು ಭಗ್ನವಾಗಬೇ ಕೆಂದೇ ತಿಮ್ಮರಸನು ಅಂತಹ ಯುಕ್ತಿತೆಗೆದಿದ್ದನು. ಮಗಳೊಂದಿಗೆ ತಾಯಿ ಯೂ ಮಾಯವಾಗಿರುತ್ತಿದ್ದರೆ, ಅಂತಹ ಸುದ್ದಿ ಹರಡುತ್ತಿದ್ದಿಲ್ಲ. ಇಬ್ಬರೂ, ಬೇಕೆಂದೇ ಊರುಬಿಟ್ಟು ಹೋದರೆಂದು ಎಲ್ಲರೂ ತಿಳಿಯುತ್ತಿದ್ದರು. ರಾಯನು ಅವಳನ್ನು ಹುಡುಕಲಿಕ್ಕೂ ಪ್ರಯತ್ನಪಟ್ಟಾನು. ಅಂತೆಯೇ ತಿಮ್ಮರಸನು ಹಾಗೆ ತಾಯಿ ಮಗಳನ್ನು ಅಗಲಿಸಬೇಕಾಯಿತು. ಕೆಟ್ಟಸುದ್ದಿಯೂ ಹರ ಡಿತು. ಆದರೆ ಕೃಷ್ಣದೇವರಾಯನು ಮಾತ್ರ ಆ ಕೆಟ್ಟಸುದ್ದಿಯನ್ನು ನಿಜ ವೆಂದು ನಂಬಲಿಲ್ಲ. ತಿಮ್ಮರಸನ ತಂತ್ರವಾಗಿರಬಹುದೆಂದು ತರ್ಕಿಸಿಕೊಂ ಡನು. ಆದರೂ ಚಿನ್ನಾದೇವಿಯನ್ನು ಮರೆತಂತೆ ನಟಿಸಿಕೊಂಡು, ಮೌನವಾ ಗಿಯೇ ಇದ್ದನು. ಅವನು ಅತೀಧೀರನಾದುದರಿಂದಲೇ, ಅಷ್ಟು ಆತ್ಮಸಂ ಯಮನಶಕ್ತಿ ಅವನಿಗುಂಟಾಯಿತು. ಇಲ್ಲದಿದ್ದರೆ, ಹೃದಯದೊಳಗಿನ ಬೇಗೆಯ ಹೊಗೆ ಮುಖದಲ್ಲಿ ಕಪ್ಪಾಗಿ ಕಾಣಿಸದೆ ಹೋದೀತೆ? ಪ್ರಿಯವಾಚ ಕರೇ! ಇಷ್ಟೊಂದು ಆತ್ಮಸಂಯಮನಕ್ಕೆ ನಮ್ಮ ರಾಯನ ಪ್ರಜಾಹಿತಕಾಂಕ್ಷೆ ಯೇ ಕಾರಣವಲ್ಲದೆ ಮತ್ತೇನು?

*

# ೧೫
# ಪ್ರಿಯ ದರ್ಶನ

ಆಕಸ್ಮಾತ್ತಾಗಿ, ಶ್ರೀಕೃಷ್ಣದೇವರಾಯನ ಆಜ್ಞೆಯಾಯಿತು. ಅಹ ರಂತೆ ಅಪಾರವಾದ ಸೇನಾಸಾಗರವು, ಜಯರವ ಕಲ್ಲೋಲದಿಂದಲೂ, ವರ ಭಯಂಕರವ್ಯಾಳದಂತೆಯೂ, ಮಂದಮಂದವಾಗಿ ಮುಂದಕ್ಕೆ ಸಾಗುತ್ತಿತ್ತು. ಕೊಂಡವೀಡಿಗೆ ಸಮೀಪವಾಗಿರುವುದು, 'ಬೆಲ್ಲಮುಕೊಂಡ.' ರಾಯನ ಸೈನ್ಯವು ಬೆಲ್ಲಮುಕೊಂಡಕ್ಕೆ ಅಭಿಮುಖವಾಗಿ ನಡೆಯುತ್ತಿತ್ತು. ಕೃಷ್ಣದೇವ ರಾಯನು, ಒಳ್ಳೇ ಉಲ್ಲಾಸದಿಂದ ಹೊರಟಿದ್ದನು. ಭೇರಿ, ನಗಾರಿ ವಾದ್ಯ ಗಳ ಅಮಿತ ನಿಸ್ವನದಿಂದ, ಅದೊಂದು ವಿವಾಹದ ಮೆರವಣಿಗೆಯಂತೆಯೇ ಕಾಣುವುದಲ್ಲದೆ, ಯುದ್ಧಯಾತ್ರೆಯಂತೆ ಕಾಣುವುದಿಲ್ಲ. ಪ್ರಿಯವಾಚಕರೇ! ನಿಜವಾಗಿಯೂ ಅದೊಂದು ವಿವಾಹಯಾತ್ರೆಯೆಂದೇ ತಿಳಿಯೋಣಾಗಲಿ!

ಈ ಬಗೆಯ ಪ್ರಯಾಣದಲ್ಲಿ ರಾಯನು ಸೇನೆಯನ್ನು ಮುಂದಕ್ಕೆ ಕಳು ಹಿಸಿ, ತಾನು ಕೆಲಮಂದಿ ಅಂಗರಕ್ಷಕರೊಂದಿಗೆ ಅಲ್ಲಲ್ಲಿ ತಂಗಿ, ಅಲ್ಲಲ್ಲಿಯ ಸೃಷ್ಟಿಯ ವಿಶೇಷಗಳನ್ನು ಸವಿಯುತ್ತಾ, ಅಲ್ಲಲ್ಲಿ ಬನದಲ್ಲಿ ಮಿತವಾಗಿ ಮೃಗ ಯಾವಿನೋದವಾಡುತ್ತಾ, ಮನಸ್ಸನ್ನು ಪ್ರಫುಲ್ಲಗೊಳಿಸಿಕೊಂಡು, ಮುಂದು ವರಿಯುವುದು ವಾಡಿಕೆ. ಅದರಂತೆ, ಒಂದು ದಿನ ಸಂಧ್ಯಾಕಾಲದಲ್ಲಿ ಬೆಲ್ಲಮು ಕೊಂಡದ ಸಮೀಪದಲ್ಲಿರುವ ಗೊಂಡಾರಣ್ಯದಲ್ಲಿ ಬೇಟೆಗೆ ಹೊರಟನು. ಅವ ನೊಂದಿಗೆ ಆರುಮಂದಿ ಅಂಗರಕ್ಷಕರೂ ಹೊರಟಿದ್ದರು. ಆಗ, ಒಂದಾನೊಂದು ಹರಿಣವನ್ನು ಬೆನ್ನಟ್ಟುತ್ತಾ, ಶರವೇಗದಿಂದ ಓಡಿದ ರಾಯನನ್ನು ಅನುಸರಿ ಸಲು, ಅವನ ಅಂಗರಕ್ಷಕರಿಂದ ಸಾಧ್ಯವಾಗಲಿಲ್ಲ. ನೋಡ ನೋಡುತ್ತಿದ್ದಂತೆ, ರಾಯನು ಅವರ ಕಣ್ಮರೆಯಾಗಿ ಹೋಗಿಬಿಟ್ಟನು. ಹಾಗೆ ಏಕಾಂಗಿಯಾಗಿ ಹೋಗುತ್ತಿದ್ದಾಗಲೇ, ಹಿಂದೆ ಹೇಳಿದಂತೆ, ನೀಚ ಸೈಯದ್ ಮರ್ಕಾರನ ಅತ್ಯಾಚಾರವು ಅವನನ್ನು ಸಂಧಿಸಿತು.

ಸೈಯದ್ ಮರ್ಕಾರನು, ಘಾತುಕತನದಿಂದ ಗುತ್ತೀದುರ್ಗವನ್ನು ಒಳ ಪಡಿಸಿಕೊಂಡಮೇಲೆ, ತನ್ನೊಳಗಿನ ಒಬ್ಬ ದಳವಾಯಿಯನ್ನು ಆ ದುರ್ಗಾಧಿ

ಕಾರಿಯಾಗಿ ನೇಮಿಸಿ, ಚಿನ್ನಾದೇವಿಯನ್ನು ಸಾಗಿಸಿಕೊಂಡು, ಮುದಗಲ್ಲಿನ ಕಡೆಗೆ ಹೋಗುತ್ತಿದ್ದನು. ಆತನು ಕೃಷ್ಣದೇವರಾಯನಿಗೆ ಮೋಸಮಾಡಿದ ದೊಡ್ಡ ಕಳ್ಳನಾದುದರಿಂದಲೂ, ಬಲು ಹೇಡಿಯಾದುದರಿಂದಲೂ, ವಿದ್ಯಾನಗರದ ಗಾಳಿ ಸೋಂಕಿಸಿಕೊಳ್ಳಲಿಕ್ಕೂ ಅಂಜಿ, ಗುಡ್ಡಗಾಡಿನ ಸುತ್ತುಸುತ್ತಾದ ದಾರಿಯಿಂದ ಬಳಸುತ್ತಾ ಹೊರಟು, ಆ ಗೊಂಡಾರಣ್ಯಕ್ಕೆ ಬಂದಿದ್ದನು. ಕೃಷ್ಣದೇವರಾಯನು ಕೊಂಡವೀಡಿನಿಂದ, ಬೆಲ್ಲಮುಕೊಂಡದ ಕಡೆಗೆ ಹೊರಟಿರುವ ಸಂಗತಿ ಅವನಿಗೆ ತಿಳಿಯದು. ಆ ಗೊಂಡಾರಣ್ಯವು ನಿರ್ಭಯಸ್ಥಾನವೆಂದು ಅವನಿಗೆ ತೋರಿತು. ಮನಸ್ಸಿನಲ್ಲಿ ಚಿನ್ನಾದೇವಿಯ ಮೋಹವೂ ಮಿತಿಮೀರಿತು. ಅವಳ ಸೌಂದರ್ಯವನ್ನು ನೋಡಿ ನೋಡಿ, ಇನ್ನು ತಡೆಯಲು ಆ ನೀಚನಿಂದಾಗಲಿಲ್ಲ. ಕರಾಳಕಾರ್ಯಕ್ಕೆ ತಕ್ಕಂತಹ ಬೃಹತ್ತರವಾದ, ಕರಾಳಗುಹೆಗಳು ಆ ಗೊಂಡಾರಣ್ಯದಲ್ಲಿ ಬೇಕಾದಷ್ಟಿದ್ದವು. ಅಂತಹ ಒಂದು ಗವಿಯನ್ನು ಆರಿಸಿಕೊಂಡು, ಅಳಿದುಳಿದ ಸೈನಿಕರನ್ನು ಮುಂದಕ್ಕೆ ಕಳುಹಿಸಿ, ಚಿನ್ನಾದೇವಿಯ ಪಾಲಕಿಯನ್ನು ಆ ಗವಿಯ ಬಳಿಯಲ್ಲಿರಿಸಿ, ನಾಲ್ಕು ಮಂದಿ ಬೋವಿಗಳನ್ನು ಸಮೀಪವೇ ಕಾವಲು ನಿಲ್ಲಿಸಿ, ಚಿನ್ನಾದೇವಿಯನ್ನು ಗವಿಯೊಳಕ್ಕೆ ತಳ್ಳಿ, ಪಶುವೃತ್ತಿಗೆ ಹೆಣಗಲಾರಂಭಿಸಿದನು. ಪಾಪ! ನಿರ್ಬಲ-ನಿಸ್ಸಹಾಯ-ನಿರಾಯುಧಳಾದ ಚಿನ್ನಾದೇವಿ, ಆ ನರರಾಕ್ಷಸನ ಬಾಧೆಯಿಂದ ತತ್ತಳಿಸಿ, ತಪ್ಪಿಸಿಕೊಳ್ಳುತ್ತಾ ಕೂಗಿಟ್ಟಳು. ಆಗಲೇ ಅದೃಷ್ಟಬಲದಿಂದ, ಓಡುತ್ತಿದ್ದ ಹರಿಣದ ಬೆನ್ನಟ್ಟಿಬಂದ-ಕೃಷ್ಣದೇವರಾಯನು, ಹಿಂದೆ ಹೇಳಿದಂತೆ ಆ ನಾಲ್ವರು ಬೋವಿಗಳನ್ನು ತನ್ನ ಖಡ್ಗಕ್ಕೆ ಆಹುತಿಗೊಟ್ಟು, ಗುಹೆಯ ಬಳಿಗೆ ಹಾರಿಬಂದು, ಆ ದುರುಳನನ್ನು ಇದಿರಿಸಿದನು.

ಸೈಯದ್ ಮರ್ಕಾರನೂ ಖಡ್ಗಪಾಣಿಯಾಗಿ, ರಾಯನಮೇಲೆ ಧುಮುಕಿದನು. ಐದಾರು ನಿಮಿಷಗಳ ತನಕ ಖಡ್ಗಯುದ್ಧವು ನಡೆಯಿತು. ಮರ್ಕಾರನ ಮೈಯಲ್ಲಿ ಬರೆಬಿದ್ದ ಹಲಸಿನ ಮರದಂತೆ ಅನೇಕ ಗಾಯಗಳು ಮೂಡಿದುವು. ಬರಿಯ ಹೇಡಿಯಾದ ಆತನು ವೀರಶ್ರೇಷ್ಠನಾದ ಕೃಷ್ಣದೇವರಾಯನ ಮುಂದೆ ಎಷ್ಟುಹೊತ್ತು ನಿಂತಾನು? ಅವನ ಕೈಯಿಂದ ಖಡ್ಗವೇ ಹಾರಿಹೋಯಿತು. ಇನ್ನು ನಿಂತರೆ ಪ್ರಾಣಾಪಾಯವೇ ಸಂಭವಿಸುವುದೆಂದು ಹೆದರಿ

ಹೌಹಾರಿ ಫಕ್ಕನೆ ದೌಡಾಯಿಸಿಬಿಟ್ಟನು. "ಬದುಕಿದರೆ ಬೇಡಿತಿಂದೇನೆಂ"ಬ ಹಾಗೆ ಹಾರಿಹಾರಿ ಓಡಿದನು.

"ಛಿ! ಇಂತಹ ಪುಕ್ಕ ಕಳ್ಳನ ಮೇಲೆ ಕತ್ತಿಯನ್ನೆತ್ತಿ, ನನ್ನ ಕೈಯನ್ನು ಕಳಂಕಮಾಡಿಕೊಂಡಂತಾಯಿತು" ಎಂದು ಹೇಳಿಕೊಳ್ಳುತ್ತಾ, ರಾಯನು ಕತ್ತಿಯನ್ನು ಒರೆಯಲ್ಲಿ ಹಾಕಿ, ಚಿನ್ನಾದೇವಿಯ ಕಡೆಗೆ ತಿರುಗಿದನು.

## ೧೬
## ತಣಿಯಿತೇ ತಿಮ್ಮರಸನ ಹೃದಯ?

ಚಿನ್ನಾದೇವಿಯನ್ನು ತದೇಕ ದೃಷ್ಟಿಯಿಂದ ನೋಡುತ್ತಾ, ಮೆಲ್ಲಮೆಲ್ಲನೆ ಅವಳ ಬಳಿಗೆ ಸಾರುತ್ತ ಕೃಷ್ಣದೇವರಾಯನು, "ಚಿನ್ನಾ! ನಿನ್ನನ್ನು ಕಂಡು ಧನ್ಯನಾದೆ. ಚಿನ್ನಾ! ಇದೇನು? ನೀನು ಈ ಕಿರಾತನ ಕೈಗೆ ಸಿಕ್ಕಿಬಿದ್ದ ಬಗೆ ಹೇಗೆ?'' ಎಂದು ಕೇಳಿದನು.

ಚಿನ್ನಾದೇವಿ ಮೆಲ್ನಡೆಯಿಂದ, ರಾಯನ ಬಳಿಗೆ ಬರುತ್ತ, "ರಾಜೇಂದ್ರಾ! ಎಲ್ಲವೂ ನಿನ್ನ ಸಚಿವಾಗ್ರೇಸರನ ಮಾಯೆ!" ಎಂದು ದುಃಖದಿಂದ ಉತ್ತರವನ್ನಿತ್ತಳು.

"ಓಹೋ!........ನನಗೆ ಸರಿಯಾಗಿ ಬೆಳಗಲಿಲ್ಲ. ಚಿನ್ನಾ!"

ಚಿನ್ನಾದೇವಿ, ರಾಯನ ಸಮೀಪವನ್ನು ಸೇರಿ, ಚಿಂತಾದೃಷ್ಟಿಯಿಂದ ರಾಯನ ಮುಖಮಂಡಲವನ್ನು ನೋಡುತ್ತ, ''ಭೂಪಾಲತಿಲಕಾ! ಈಗಲಾದರೂ ನಿನ್ನ ಮಹಾಮಂತ್ರಿ ತಿಮ್ಮರಸನ ಮನಸ್ಸಿಗೆ ತೃಪ್ತಿಯುಂಟಾದೀತು!" ಎಂದು ಕಣ್ಣೀರನ್ನು ಮಿಡಿದಳು.

ರಾಯನು ವಿಚಾರದಿಂದ, ''ಅದೇನು ಸಂಗತಿ ಚಿನ್ನಾ?" ಎಂದು ಪ್ರಶ್ನಿಸಿದನು.

ಚಿನ್ನಾದೇವಿ, ತುಂಬಾ ಕಣ್ಣೀರು ತಂದು, "ಮತ್ತೇನು ಹೇಳಲಿ, ರಾಜಾ! ಆತನ ಸಹೋದರ ಗುತ್ತಿದುರ್ಗಾಧೀಶ ಗೋವಿಂದರಾಜನ ಮರಣದಿಂದ ಈಗಲಾದರೂ, ತಿಮ್ಮರಸನ ಹೃದಯವು ಶಾಂತವಾಗಿರಬಹುದು" ಎಂದು ಉಸುರಿದಳು.

"ಹಾ! ಏನೆಂದೆ? ಗೋವಿಂದರಾಜನ ಮರಣವೆ? ಹೇಗೆ? ಎಂದು? ಸಮಾಚಾರವೇನು ಚಿನ್ನಾ?"

"ರಾಜೇಂದ್ರಾ! ನಿನ್ನ ಈ ಪ್ರಶ್ನೆಯನ್ನು ನೋಡಿದರೆ ನಿನಗೆ ಯಾವುದೂ ತಿಳಿದಂತೆ ಕಾಣುವುದಿಲ್ಲ..........."

"ಇಲ್ಲ ಚಿನ್ನಾ! ನನಗೆ ಯಾವುದೂ ತಿಳಿಯದು. ನಾನು ಒಂದು ಜಿಂಕೆಯನ್ನು ಬೆನ್ನಟ್ಟಿಕೊಂಡು ಬಂದವನು; ನಿನ್ನನ್ನು ಸಂಧಿಸಿದುದೊಂದು, ದೈವಯೋಗವೆನ್ನಬೇಕು ಹೇಳು ಚಿನ್ನಾ, ನಡೆದ ಸಂಗತಿಯೇನು?"

"ಘೋರವಾದ ಸಂಗತಿ, ರಾಜಾ! ಘೋರ ಅತ್ಯಾಚಾರ! ಈಗ ನೀನು ಯಾವ ಚಂಡಾಲನನ್ನು ಓಡಿಸಿದೆಯೋ, ಆತನು ಮೊನ್ನೆ ಮಧ್ಯರಾತ್ರಿಯಲ್ಲಿ ಹೇಗೋ ಮೋಸದಿಂದ ಗುತ್ತಿದುರ್ಗದೊಳಗೆ ಹೊಕ್ಕು, ಸಿಕ್ಕಿದವರನ್ನು ಕೊಂದು ಗೋವಿಂದರಾಜನನ್ನು ಕ್ರೂರರೀತಿಯಿಂದ ಕೊಂದುಬಿಟ್ಟನು....."

"ವಧಿಸಿಯೇ ಬಿಟ್ಟನೇ?...........ಅಯ್ಯೋ! ಪಾಪಿ! ಚಾಂಡಾಲ!" ಎಂದು ರಾಯನು ಹಲ್ಲುಕಡಿದನು.

"ತೀರಿಸಿಯೇಬಿಟ್ಟನು ರಾಜಾ! ಆದರೆ ವೀರ ಗೋವಿಂದರಾಜನು ಸುಲಭದಲ್ಲಿ ಸಿಕ್ಕಿಬಿದ್ದನೆಂದು ತಿಳಿಯಬೇಡ. ಹುಲ್ಲುಕೊಯ್ದಹಾಗೆ ನೂರಾರು ಶತ್ರುಸೈನಿಕರ ಶಿರಗಳನ್ನು ಚರಚರನೆ ತರಿದಮೇಲೆಯೇ ಸಿಕ್ಕಿಬಿದ್ದನು"

"ಭಲೆ!"

"ಹಾಗೆ ಸಿಕ್ಕಿಬಿದ್ದು, ಕೈಕಾಲು ಬಿಗಿಯಲ್ಪಟ್ಟ ಗೋವಿಂದರಾಜನನ್ನು ಈಗ ನಿನ್ನಿದಿರಿನಿಂದ ಓಡಿಹೋದವನಲ್ಲಾ—ಈ ಪಾಪಿ, ತನ್ನ ಸ್ವಂತ ಹಸ್ತದಿಂದಲೇ ತಲೆಹಾರಿಸಿಬಿಟ್ಟನು!"

"ಹರಿ! ಹರಿ!! ದ್ರೋಹಿ! ಪಿಶಾಚಿ!..........." ಎಂದು ರಾಯನು ಕರಕರನೆ ಹಲ್ಲುಕಡಿಯುತ್ತಾ, ಕತ್ತಿಯನ್ನೆತ್ತಿ ಬೀಸಿದನು. ಆಗ ಸೈಯದ್ ಮುಕರ್ರಾರನು ಅವನ ದೃಷ್ಟಿಗೆ ಗೋಚರನಾಗಿದ್ದರೆ, ನಿಶ್ಚಯವಾಗಿಯೂ ಎರಡು ತುಂಡಾಗಿ ಬೀಳದಿರುತ್ತಿದ್ದಿಲ್ಲ.

"ರಾಜ ಮಾರ್ತಾಂಡಾ! ಮೋಸಕ್ಕೆ ಇದಿರೇ ಇಲ್ಲ. ಕತ್ತಲೆಯಲ್ಲಿರುವ ವಸ್ತುವಿನಂತೆ ಮೋಸವು ಯಾರ ಕಣ್ಣಿಗೂ ಗೋಚರಿಸದು. ಆ ಘಾತುಕನು ಬಹಳ ದೊಡ್ಡ ಮೋಸದಿಂದ, ಈ ಘೋರವಾದ ಅತ್ಯಾಚಾರವನ್ನು ನಡೆಸಿದನು. ಅಯ್ಯೋ! ನನ್ನನ್ನು ತಂದೆಯಂತೆ ಬಹುಪ್ರೀತಿಯಿಂದ ಕಾಪಾಡಿದ ಗೋವಿಂದರಾಜನು ಕ್ರೂರವಾದ ದುರ್ಮರಣಕ್ಕೆ ಈಡಾದನಲ್ಲಾ! ಅಯ್ಯೋ ನನಗೆ ತಾಯಿಯ ನೆನಪನ್ನೇ ಮರೆಸಿದ ಆತನ ಹೆಂಡತಿ ಆಕ್ಷಣವೇ ಬಾವಿಯೊಳಗೆ ಬಿದ್ದು ಸತ್ತುಹೋದಳು............!"

"ಅಯ್ಯೋ! ಪಾಪ! ಆ ಚಾಂಡಾಲನ ಪಾಪಕೃತ್ಯವು ನನಗೆ ತಿಳಿಯದೆ ಹೋಯಿತು, ಇಲ್ಲವಿದ್ದರೆ ಅವನು ಜೀವಂತನಾಗಿ ಓಡುತ್ತಿದ್ದನೇ? ಹಾಯ್ ಹಾಯ್!! ನನ್ನ ಸಮಶಾಸನದ ರಾಜ್ಯದಲ್ಲಿಯೂ ಇಂತಹ ಅತ್ಯಾಚಾರವೇ?"

"ರಾಜಸೂರ್ಯಾ! ಸೂರ್ಯನ ಪ್ರಖರವಾದ ಮಧ್ಯಾಹ್ನ ಕಿರಣಕಾಲದಲ್ಲಿಯೂ, ಮೂಲೆಮೂಲೆಯಲ್ಲಿ ಕತ್ತಲೆರಾಶಿಗಳು ಸೇರಿಕೊಂಡಿರುವುವು. ಸೂರ್ಯನು ಸ್ವಲ್ಪ ಮೇಘಚ್ಛಾಯೆಗೊಳಗಾದರೆ ಸಾಕು, ಅವು ಮುಂದಕ್ಕೆ ತಲೆಹಾಕುವುದಿಲ್ಲವೆ? ಅದರಂತೆ ನಿನ್ನ ಗಮನವು, ಈಗ ಉತ್ಕಲದಮೇಲೆ ತಿರುಗಲು ಆ ಮೂಲೆಯ ಗುತ್ತೀದುರ್ಗಕ್ಕೆ ಈ ಬಗೆಯ ಅಕಸ್ಮಿತಾಘಾತವು ಸಂಭವಿಸಿದುದೇನೂ ಆಶ್ಚರ್ಯವಲ್ಲ. ರಾಜೇಂದ್ರಾ! ಇದಕ್ಕೆ ಪ್ರತೀಕಾರ ಮಾಡುವುದೊಂದು ನಿನಗೆ ದೊಡ್ಡ ಕೆಲಸವೆ?"

"ಶಹಭಾಸ್, ಚಿನ್ನಾ! ಇದಕ್ಕೆ ತಕ್ಕ ಪ್ರತೀಕಾರ ಮಾಡದೆ ಬಿಡುವೆನೇ? ಆ ಪಾಪಿಯೂ, ಅವನ ಮುದಗಲ್‌ದುರ್ಗವೂ, ಬೇಗನೆ ನೆಲಸಮವಾಗುವ ಕಾಲವು ಬಂದಿತು. ಇಷ್ಟೇ ಅಲ್ಲ, ಈ ಅಲ್ಪ ಮನುಷ್ಯನ ಮೂಲಕವಾಗಿ, ಆ ಮೂರ್ಖ ಆದಿಲ್‌ಶಹನೂ, ಅವನ ಬಿಜಾಪುರವೂ, ಶೀಘ್ರವೇ ನನ್ನ ಸೇನಾಘಾತದಿಂದ ತತ್ತಳಿಸಿ ಹೋಗುವುದು ನೋಡು!" ಎಂದು ಚಿನ್ನಾದೇವಿಯ ಬೆನ್ನು ಸವರುತ್ತ, ಅದಿರಲಿ, "ಚಿನ್ನಾ! ನೀನು ಗುತ್ತೀದುರ್ಗವನ್ನು ಸೇರಿದ ಬಗೆ ಹೇಗೆ?" ಎಂದನು.

"ಇನ್ನೂ ಗೊತ್ತಾಗಲಿಲ್ಲವೆ? ನಿನ್ನ ಮಂತ್ರಿಶಿರೋಮಣಿಯ ಮಾಯೆಯಿಂದಲೇ ಹೀಗಾಯಿತು. ಆತನು, ನನ್ನ ಹೃದಯದಲ್ಲಿರುವ ನಿನ್ನನ್ನೂ

ನಿನ್ನ ಹೃದಯದಲ್ಲಿರುವ ನನ್ನನ್ನೂ, ಅಳಿಸಬೇಕೆಂದು ಈ ಬಗೆಯ ತಂತ್ರ ಹೂಡಿದನು”.

“ಓಹೋ! ಅಪ್ಪಾಜಿಯ ಮಾಯೆಯೋ ಇದು? ಸರಿ, ನಿಜವಾಯಿತು ನನ್ನ ಸಂದೇಹ”.

“ಆದರೆ—ರಾಜಾ! ಆ ವೃದ್ಧ ತಿಮ್ಮರಸನು, ಪ್ರೇಮದ ಮಹಿಮೆಯನ್ನೇನು ಬಲ್ಲನು? ರಾಜಕಾರಣವೊಂದೇ ಅವನಿಗೆ ಗೊತ್ತು. ನಮ್ಮ ಹೃತ್ಫಲಕದಲ್ಲಿ ಅಚ್ಚಾಗಿರುವ ಪ್ರೇಮವು, ಎಂದಾದರೂ ಮಾಸುವಂತಹುದೇ?”

ರಾಯನು ಚಿನ್ನಾದೇವಿಯ ಗಲ್ಲವನ್ನು ಹಿಡಿದು, “ಇಲ್ಲ, ಚಿನ್ನಾ! ಎಂದಿಗೂ ಮಾಸದು, ತಿಮ್ಮರಸನು ಎಂತಹ ತಂತ್ರಿ! ಎಷ್ಟು ರಹಸ್ಯವಾಗಿ ನಿನ್ನನ್ನು ಅಡಗಿಸಿದನು! ಹಾ! ನನ್ನ ಈ ಚಿನ್ನವು, ಈ ಲೋಕದಲ್ಲಿಲ್ಲವೆಂದೇ ಯೋಚಿಸಿದ್ದೆ. ಈಗ ನನ್ನ ಈ ಮುದ್ದಿನಮಣಿ,— ಪ್ರೇಮದರಗಿಣಿ— ನನ್ನ ಕೈಗೆ ದೊರೆಯಿತಲ್ಲ!” ಎಂದು ಅವಳ ಗಲ್ಲವನ್ನು ತಟ್ಟುತ್ತಾ, “ಹಾ! ಹರಿಣವೇ! ನಿನ್ನ ವೈರಿಯಾಗಿ ಬಂದ ನನಗೆ, ಈ ಚಿನ್ನವನ್ನು ದೊರಕಿಸಿ ಕೊಟ್ಟ, ನಿನ್ನನ್ನು ನಾನು ಎಷ್ಟೆಂದು ಹೊಗಳಲಿ? ನೀನು ನನಗೆ ಇಂದು ಒಳ್ಳೇ ಬುದ್ಧಿಯನ್ನು ಕಲಿಸಿದೆ! ಇನ್ನುಮೇಲೆ, ನಿನ್ನಂತಹ ಕೋಮಲ ಪ್ರಾಣಿಯನ್ನು ನಾನು ಎಂದಿಗೂ ಹಿಂಸಿಸಲಾರೆನು!” ಎಂದನು.

ಚಿನ್ನಾದೇವಿ, ಆರ್ದ್ರದೃಷ್ಟಿಯಿಂದ ರಾಯನ ಮುಖಮಂಡಲವನ್ನು ನೋಡುತ್ತಾ, “ರಾಜಾ! ನನ್ನ ತಾಯಿಯ ಗತಿ ಏನಾಯಿತೆಂದು ಗೊತ್ತಿದೆಯೆ?” ಎಂದು ಕೇಳಿದಳು.

“ಗೊತ್ತಿಲ್ಲ ಚಿನ್ನಾ! ಅವಳು ನಿನ್ನ ಹಂಬಲದಿಂದ, ಎಲ್ಲಿಗೋ ಹೊರಟು ಹೋಗಿದ್ದಾಳೆ”.

“ಅಯ್ಯೋ! ಅಮ್ಮಾ!........ನೀನೆಲ್ಲಿ ಹೋದೆ?........ಹಾ! ಈಗಾದರೂ ತಿಮ್ಮರಸನ ಹೃದಯವು ತಣಿಯಿತೇ? ಅಯ್ಯೋ! ನಿನ್ನ ಹೃದಯದಲ್ಲಿಯೂ, ನನ್ನ ಹೃದಯದಲ್ಲಿಯೂ, ನನ್ನ ತಾಯಿಯ ಹೃದಯದಲ್ಲಿಯೂ, ಘೋರವಾದ ವಿಯೋಗ ದುಃಖಾನಲವನ್ನು ಉರಿಸಿ, ತನ್ನ ಸಹೋದರ

ಗೋವಿಂದರಾಜನನ್ನೂ, ಆಹುತಿಗೊಟ್ಟಮೇಲಾದರೂ, ತಣಿಯಿತೇ ತಿಮ್ಮರಸನ ಹೃದಯ........?" ಎಂದು ಚಿನ್ನಾದೇವಿ ಅಳತೊಡಗಿದಳು.

## ೧೭

## ಪ್ರೇಮ ಸಂಯಮನ!

ಕೃಷ್ಣದೇವರಾಯನು ಚಿನ್ನಾದೇವಿಯ ಕಣ್ಣೀರನ್ನು ತನ್ನ ಕರವಸ್ತ್ರದಿಂದ ಒರಸುತ್ತಾ, "ಸೈರಿಸು, ಚಿನ್ನಾ! ಆದುದುಆಗಿಹೋಯಿತು. ಇನ್ನೆಂದಿಗೂ ನಿನ್ನನ್ನು ಕೈಬಿಡುವುದಿಲ್ಲ ಪ್ರಿಯೆ! ಹಿಂದೆ ನನ್ನ ಮನಸ್ಸು ದೃಢವಾಗಿರದಿದ್ದರಿಂದಲೇ ಇಂತಹ ಮಹಾವಿಯೋಗದುಃಖವು ಪ್ರಾಪ್ತವಾಯಿತು. ಚಿನ್ನಾ! ಈಗ ನನ್ನ ಮನಸ್ಸು ದೃಢವಾಗಿದೆ ಬಾ, ಹೋಗೋಣ. ನಿಜವಾಗಿಯೂ ನಿನ್ನನ್ನು ನನ್ನ ಪಟ್ಟದರಾಣಿಯನ್ನಾಗಿ ವರಿಸುವೆನು" ಎಂದನು.

ಈ ಮಾತನ್ನು ಕೇಳಿ, ಬೇರೆ ಸಾಮಾನ್ಯ ಹೆಂಗಸಾಗಿದ್ದರೆ ಆನಂದದಿಂದ ಉಬ್ಬಿಹೋಗಿಬಿಡುತಿದ್ದಳು. ಆದರೆ ಚಿನ್ನಾದೇವಿ ಅಂತಹವಳಲ್ಲ; ಮೇಲ್ತರಗತಿಯ ನಾರಿ. ಅಜ್ಞಾತವೃತ್ತಾಂತದವಳಾದ ತಾನು ಪಟ್ಟವನ್ನು ಅಲಂಕರಿಸಲು ಯೋಗ್ಯಳಲ್ಲವೆಂದೇ ತಿಳಿದುಕೊಂಡಿದ್ದಳು. ಆದುದರಿಂದ ರಾಯನು ಹೇಳಿದಮಾತನ್ನು ಕೇಳಿದೊಡನೆಯೇ, ಅವಳು ರಾಯನ ಕೈಯನ್ನು ದೂರಕ್ಕೆ ಸರಿಸಿ, ಅವನ ಮುಖವನ್ನು ನೋಡುತ್ತಾ, "ರಾಜೇಂದ್ರಾ! ಬೇಡ; ಇಂತಹ ಆಲೋಚನೆಯನ್ನು ಬಿಟ್ಟುಬಿಡು" ಎಂದಳು.

ರಾಯನು, "ಅದೇಕೆ ಪ್ರಿಯೆ?" ಎಂದು ಅವಳ ಕೈಹಿಡಿದನು.

"ಅದೇಕೆ," ಎಂದು ಚಿನ್ನಾದೇವಿ ರಾಯನ ಭುಜದಮೇಲೆ ಹಸ್ತವನ್ನಿಟ್ಟು, ವ್ಯಸನದಿಂದ, "ಪ್ರಿಯಾ! ನಿನ್ನನ್ನು ಪ್ರಿಯಾ! ಎಂದು ಸಂಬೋಧನಾಮಾತ್ರದಿಂದಲೇ ತೃಪ್ತಿಗೊಳ್ಳಬೇಕಾಯಿತಲ್ಲದೆ, ವಿವಾಹಸಾಧ್ಯವೇ ಇಲ್ಲದೇ ಹೋಯಿತು." ಎಂದಳು.

"ಏಕಿಲ್ಲ?"

"ಇಲ್ಲ ಪ್ರಿಯಕರಾ! ನಾನು ಕುಲಗೋತ್ರವಿಲ್ಲದ ಪರದೇಶಿನಿ. ಅಪ್ಪಾ! ಎಂದು ಯಾರನ್ನು ಕರೆಯಬೇಕೋ, ನನಗೆ ಗೊತ್ತಿಲ್ಲ......." ಚಿನ್ನಾ ದೇವಿಯ ಕಣ್ಣಿನಲ್ಲಿ ನೀರು ತುಂಬಿ, ಕಂಠವು ಗದ್ಗದವಾಯಿತು.

ರಾಯನು ಅವಳ ಕಣ್ಣೀರನ್ನು ಒರೆಸುತ್ತಾ, "ಸಾಕು, ಬಿಡು ಚಿನ್ನಾ! ......." ಎಂದು ಸಮಾಧಾನ ಮಾಡಿದನು.

ಅಷ್ಟರಲ್ಲಿ, ಚಿನ್ನಾದೇವಿ ಕೊರಳನ್ನು ಸರಿಪಡಿಸಿಕೊಂಡು, ಮತ್ತೆ ಹೇಳಿದಳು, "ಪ್ರಿಯಾ! ನೀನೋ, ಚಂದ್ರವಂಶಕ್ಷತ್ರಿಯೋತ್ಪನ್ನನಾದ ರಾಜಾಧಿರಾಜ! ಮುಖ್ಯವಾದ ಕರ್ಣಾಟಕ ಧರಣೀಶ್ವರ! ನೀನು ನನ್ನನ್ನು ವಿವಾಹ ಮಾಡಿಕೊಂಡರೆ, ನಿನ್ನ ಧವಳಕೀರ್ತಿಗೆ........"

"ಸಾಕು, ಬಿಡು ಎಲ್ಲಾ ಗೊತ್ತಿದೆ. ಚಿನ್ನಾ! ನೀನು ಎಂದಿಗೂ ಹೀನ ಕುಲ ಸಂಭೂತೆಯಲ್ಲ. ಕಮಲವು ಎಂದಿಗೂ ಒಣನೆಲದಲ್ಲಿ ಹುಟ್ಟದು. ಚಿನ್ನಾ! ನಿನ್ನ ಮುಖಲಕ್ಷಣವೇ ಇದನ್ನು ಸಾರುತ್ತಿರುವುದು. ಇದೂ ಅಲ್ಲದೆ, ನಿನ್ನ ಹಸ್ತದಲ್ಲಿ ಸಾರ್ವಭೌಮನ ರಾಣಿಯಾಗುವಂತಹ, ಸುಲಕ್ಷಣವಾದ ರೇಖೆಗಳಿರುವುವೆಂದು, ನಮ್ಮ ಆಸ್ಥಾನ ಕವೀಶ್ವರನೂ ಹಸ್ತರೇಖಾಶಾಸ್ತ್ರಜ್ಞನೂ ಆದ ತೆನ್ನಾಲ ರಾಮಕೃಷ್ಣನು ಹೇಳಲಿಲ್ಲವೆ? ಅಗೂ ಅಲ್ಲದೆ ವಿದ್ಯಾನಗರ ಸಿಂಹಾಸನವನ್ನೇರಿದ ನನ್ನ ಪ್ರೇಮವು ನಿನ್ನಲ್ಲಿ ಅಂಕುರಿಸಬೇಕಾದರೆ, ನೀನು ನಿಜವಾಗಿಯೂ ಉತ್ತಮ ಕುಲೋತ್ಪನ್ನಳೇ ಆಗಿರಬೇಕೆಂದು ನನ್ನ ಅಂತರಾತ್ಮವು ಉಸುರುತ್ತಿದೆ. ಇನ್ನು ಸಂದೇಹವೇಕೆ? ಬಾ, ಚಿನ್ನಾ! ಹೋಗೋಣ" ಎಂದು ರಾಯನು ಚಿನ್ನಾದೇವಿಯ ಕೈಯನ್ನು ಎಳೆದನು. ಚಿನ್ನಾದೇವಿ ಅಲುಗದೆ, "ಇಲ್ಲ, ರಾಜಾ! ನೀನು ನನ್ನನ್ನು ಕಂಡು, ಮೋಹಕ್ಕೆ ಸಿಕ್ಕಿಬಿದ್ದಂತೆ ತೋರುವುದು. ಮೋಹದಿಂದ ಕರ್ತವ್ಯವನ್ನು ಮರೆತಂತೆ ಕಾಣುವುದು. ಅಲ್ಪಳಾದ ನನ್ನನ್ನು ಕಮಲಕ್ಕೆ ಹೋಲಿಸುವುದೂ, ನನ್ನ ಮುಖವನ್ನು ಬಣ್ಣಿಸುವುದೂ, ಇದೆಲ್ಲಾ ಮೋಹಲಕ್ಷಣವೆಂದೇ ನನ್ನ ಅಭಿಪ್ರಾಯ." ಎಂದಳು.

ಶಹಭಾಸ್! ಚಿನ್ನಾದೇವಿ! ನಿನ್ನಂತಹ ಸುಶೀಲರಮಣಿಯನ್ನು ನಾನು ಎಲ್ಲಿಯೂ ಕಂಡಿಲ್ಲ. ಸುಶೀಲೆಯಾದ ನೀನು, ಮುಖಸ್ತುತಿಗೆ ಹಿಗ್ಗದೆ, ತನ್ನ

ನ್ನು ತಾನೇ ನಿಂದಿಸಿಕೊಳ್ಳುವುದೇನೂ ಆಶ್ಚರ್ಯವಲ್ಲ. ಇರಲಿ, ಚಿನ್ನಾ! ನಡೆ - ಹೋಗೋಣ.''

"ಎಂದಿಗೂ ಇದಾಗದು, ರಾಜಾ! ಇದು ನಿನಗೆ ತರವಲ್ಲ. ನಿನ್ನ ಮಂತ್ರಿಪುಂಗವನು ಇದಕ್ಕೆ ಎಂದಿಗೂ ಅನುಮತಿಯನ್ನೀಯನು.''

"ಅವನ ಅನುಮತಿ ನನಗೇಕೆ, ಚಿನ್ನಾ! ನಾನು ರಾಜ; ನಾನು ಮನಸ್ಸುಮಾಡಿದರೆ ನನ್ನ ಇಚ್ಛೆಗೆ ಯಾರು ವಿರುದ್ಧರಾಗಿ ಬರುವರು?''

ಚಿನ್ನಾದೇವಿ, ಸ್ಥೈರ್ಯದಿಂದ ನಿಂತು ಗಂಭೀರದಿಂದ ಹೇಳಿದಳು, "ಹಾಗೆನ್ನಬೇಡ ರಾಜಾ! ಇದು ರಾಜಧರ್ಮಕ್ಕೆ ವಿರೋಧವಾದ ಅಭಿಪ್ರಾಯ. ಪ್ರಜೋಪಕಾರಾರ್ಥವಾಗಿ, ಸಿಂಹಾಸನಾರೋಹಣಮಾಡಿರುವ ರಾಜನು, ತನ್ನ ಹಿತಚಿಂತಕರಾದ ಮಂತ್ರಿಮಾಂಡಲಿಕರನ್ನು ಲೆಕ್ಕಿಸದೆ, ಸ್ವೇಚ್ಛೆಯಿಂದ ಸ್ವಾರ್ಥಸಾಧಕನಾಗಬಹುದೆ? ರಾಜಾ!........" ಎಂದು ರಾಯನ ಭುಜದ ಮೇಲೆ ಕೈಯಿಟ್ಟು, "ರಾಜೇಂದ್ರಾ! ಕರ್ಣಾಟಕ ರಮಾರಮಣಾ! ನೀನು ಸಾಮಾನ್ಯನಲ್ಲ, ಮಹಾವಿದ್ವಾನ್! ಸ್ವಯಂ ಕವಿ! ಕವಿಕುಲಪಾಲಕ! ನಿನ್ನ ಕೃಪಾಛತ್ರದ ನೆಳಲಲ್ಲಿ ನಾನಾಭಾಷೆಯ ಪಂಡಿತರು ವಿಶ್ರಾಂತಿಯನ್ನು ಹೊಂದುತ್ತಿದ್ದಾರೆ! ಇಂತಹ ವಿದ್ವತ್ತಾರಾನಾಥನಾದ ನಿನಗೆ, ರಾಜನೀತಿಯನ್ನು ಬೋಧಿಸಲಿಕ್ಕೆ ನಾನೆಷ್ಟರವಳು? ಆದರೂ, ನೀನು ಈಗ ಸ್ವಲ್ಪ ಮೋಹಾವೃತನಾಗಿರಬಹುದೆಂದು ಸಂದೇಹಿಸಿ, ನನಗೆ ತಿಳಿದ ಒಂದೇ ವಾಕ್ಯದಿಂದ, ನಿನ್ನ ವಿವೇಕವನ್ನು ಎಬ್ಬಿಸಿದೆನು. ಇದಕ್ಕಾಗಿ ನನ್ನನ್ನು ಕ್ಷಮಿಸು...." ಎಂದು ಬಾಗಿ ರಾಯನ ಕಾಲಿಗೆ ನಮಸ್ಕರಿಸಿ ಎದ್ದಳು.

ರಾಯನು ಸ್ತಂಭೀಭೂತನಾಗಿ ನಿಂತಿದ್ದನು. ಚಿನ್ನಾದೇವಿಯು ಮತ್ತೂ ಹೇಳಿದಳು, "ರಾಜಾ! ಏನಿದು? ಕದಲದೆ ಸುಮ್ಮನೆ ನಿಂತಿರುವೆಯಲ್ಲ? ವಿಜಯವಧುವನ್ನು ವರಿಸಲಿಕ್ಕಾಗಿ ಹೊರಟಿರುವ ನೀನು, ಈ ಬಗೆ ಮೌಢ್ಯತೆಯಿಂದಿರುವುದನ್ನು ನೋಡಿ, ನನಗೆ ಆಶ್ಚರ್ಯವಾಗುತ್ತಿದೆ. ರಾಜಾ! ವಿಜಯವಧುವನ್ನು ವರಿಸಿ, ಸುಖಿಯಾಗಿರು! ಇನ್ನು, ಈ ಪ್ರೇಮವಧುವಿನಗೊಡವೆಯೇ ನಿನಗೆ ಬೇಡ; ಮರೆತುಬಿಡು. ಮರೆಯಲಿಕ್ಕಾಗದೆಹೋದರೆ, ಹೃದಯಾಂತರಾಳದಲ್ಲಿಯೇ ಸಂಯಮಿಸಿಕೊಂಡಿರು. ನಮ್ಮಿಬ್ಬರ ಹೃದಯದಲ್ಲಿ ಮೂಡಿ

ರುವ ಪ್ರೇಮವು, ಪವಿತ್ರವಾದ ಆತ್ಮಪ್ರೇಮವೆಂಬುದು ನಿಜ, ಮೋಹಜನ್ಯವಾದ ಭೋಗಪ್ರೇಮವಲ್ಲ. ಆದುದರಿಂದ ಪ್ರಿಯಕರಾ! ನನ್ನ ವಿವಾಹ ಆಶೆಯನ್ನು ಸಂಯಮಿಸಿಕೊಂಡಿರು. ನೀನು ಉತ್ಕಲೇಶನ ಕುಮಾರಿಯನ್ನು ವರಿಸಲಿಕ್ಕೆ ಹೋಗುವುದಾಗಿ ಕೇಳಿದೆ. ಆ ವಿಜಯ ವಧುವನ್ನು ವರಿಸಿ ವಿಜಯ ಮಾಲೆಯನ್ನು ಧರಿಸು. ಕರ್ಣಾಟಕಾಂಧ್ರರನ್ನು ಒಟ್ಟುಗೂಡಿಸಿ, ಧರ್ಮದಿಂದ ಧರೆಯನ್ನು ಪಾಲಿಸು.''

ಕೃಷ್ಣದೇವರಾಯನು ಉಕ್ಕಿಬರುವ ದುಃಖವನ್ನು ನುಂಗಿಕೊಂಡು— ''ಇಲ್ಲ, ಚಿನ್ನಾದೇವಿ! ತಿಮ್ಮರಸನ ಪ್ರೇರೇಪಣೆಯಿಂದ, ನಾನು ಆ ತಿರುಮಲಾದೇವಿಯನ್ನು ವರಿಸಲು ಅಂಗೀಕರಿಸಿಕೊಂಡರೂ, ಅವಳು ನನ್ನನ್ನು ವರಿಸಲು ಒಪ್ಪಲಿಲ್ಲ ಅತೀ ತುಚ್ಛೀಕಾರವಾಗಿ ನನ್ನನ್ನು ನಿಂದಿಸಿ, ಮಹಾಪರಾಧವನ್ನು ಮಾಡಿದ್ದಾಳೆ. ಅದಕ್ಕಾಗಿ ಅವಳನ್ನು ಹಿಡಿದುತರಿಸಿ, ಒಬ್ಬ ಸಾಮಾನ್ಯ ಮನುಷ್ಯನಿಗೆ ವಿವಾಹಮಾಡಿಸುವುದಾಗಿ ನಾನು ಪ್ರತಿಜ್ಞೆಮಾಡಿದ್ದೇನೆ!'' ಎಂದನು.

''ಪ್ರತಿಜ್ಞೆ!........ಪ್ರಮಾದವಾಯಿತು!''

''ಪ್ರಮಾದವೇನು! ಅವಳ ಗರ್ವಾತಿರೇಕಕ್ಕೆ ತಕ್ಕ ಮದ್ದನ್ನರೆಯ ಬೇಕಾದುದು ಪ್ರಮಾದವೇ?''

''ಅಲ್ಲದೆ, ಮತ್ತೇನು? ಅಂತಹ ಕುಲೀನಕನ್ಯೆಯ ಮಾನಭಂಗಮಾಡುವುದು ದೋಷವಲ್ಲವೇ! ಮಹಾ ಪಾಪವಲ್ಲವೆ?''

''ಚಿನ್ನಾ! ನೀನು ಹೇಳಿದುದು ನಿರ್ದೋಷಿಯ ಮಾತಾಯಿತು. ಆದರೆ ಅವಳು ನನ್ನನ್ನು ಶ್ವಾನಸಮಾನನೆಂದು ನಿಂದಿಸಿ, ನನ್ನ ಮಾನನಷ್ಟದ ಮಹಾಪರಾಧವನ್ನು ಮಾಡಿದ್ದಾಳೆ. ಅಂತಹ ದುರಭಿಮಾನಿಗೆ ಪ್ರತ್ಯಪಮಾನಮಾಡಿ ಶಿಕ್ಷಿಸಬೇಕಾದುದು ರಾಜನಾಗಿರುವ ನನ್ನ ಕರ್ತವ್ಯವಾಗಿದೆ''

''ಆದರೂ ಪಾಪ! ನಿನ್ನಪ್ರಭಾವವನ್ನು ತಿಳಿಯದೆ, ಏನೋ ಮೌಢ್ಯತೆಯಿಂದ ಹಾಗೆ ನಿಂದಿಸಿರಬಹುದು. ರಾಜೇಂದ್ರಾ! ಅವಳನ್ನು ಸನ್ನಂತೆಯೇ ತಿಳಿದು, ಒಂದುಬಾರಿ ಕ್ಷಮಿಸಿಬಿಡು.''

"ಇನ್ನು ಕ್ಷಮಿಸಲು ಆಗುವುದಿಲ್ಲ. ಒಂದೆರಡುಬಾರಿ ಕ್ಷಮಿಸಿದುದಾಯಿತು. ಅಂತೆಯೇ ಅವಳ ಗರ್ವವು ಮಿತಿಮೀರಿಹೋಗಿದೆ. ವಿಪರೀತದ ಉಚ್ಛ ಶಿಖರಕ್ಕೇರಿದೆ. ಇನ್ನು ಕ್ಷಮಿಸಲಾಗುವುದೇ ಇಲ್ಲ. ಪ್ರತಿಜ್ಞೆಮಾಡಿಯೇ ಬಿಟ್ಟಿದ್ದೇನೆ. ಪೂರ್ಣಮಾಡಿಯೇ ತೀರಬೇಕು."

ಚಿನ್ನಾದೇವಿಗೆ, ತಿರುಮಲಾದೇವಿ ಪರಿಚಿತಳೇನೂ ಅಲ್ಲ. ಆದರೆ, ಅವಳೂ ತನ್ನಂತೆಯೇ ಹೆಂಗಸಲ್ಲವೆ? ಸಹೋದರಿ ಸಮಾನೆಯಲ್ಲವೆ? ಎಂದು, ಕನಿಕರದಿಂದ ಮಮತಾಭಾವನೆಯಿಂದ ಅವಳ ಪರವಾಗಿ, ರಾಯನೊಡನೆ ಇಷ್ಟು ಮಾತನಾಡಿದಳು. ಕಡೆಗೆ ಚಿಂತೆಯಿಂದ, "ಏನೋ ಭಗವಂತನ ಚಿತ್ತ. ಹೃದಯವು ಸದಾ ಭಗ್ನವಾಗಲೇಬೇಕೆಂದು, ವಿಧಿಲಿಖಿತವಿದ್ದರೆ ಯಾರೇನು ಮಾಡುವರು? ದೇವರು ನಡೆಸಿದಂತಾಗಲಿ ರಾಜವರೇಣ್ಯ! ನಾನು ಹೋಗುತ್ತೇನೆ. ಇನ್ನು ಮೇಲೆ, ನನ್ನನ್ನು ನೋಡಬಯಸಬೇಡ" ಪ್ರಿಯಾ! - ಪ್ರೇಮಾತ್ಮಾ!—" ಎನ್ನಲು, ರಾಯನು ಗುಂಗುರು ಗುಂಗುರಾದ ಅವಳ ಮುಂಗುರುಳ ತೀಡುತ್ತಾ, "ಪ್ರೇಮಸ್ವರೂಪಿಣಿ ! ನನ್ನನ್ನು ಬಿಟ್ಟು ನೀನೆಲ್ಲಿಗೆ ಹೋಗುತ್ತಿ ?" ಎಂದನು.

"ಎಲ್ಲಿಂಗೆಂದರೇನು? ನನಗೇನಾದರೂ ಕೊರತೆ ಇದೆಯೇ? ಹುಟ್ಟಿದಂದಿನಿಂದಲೇ, ತಂದೆಯ ಬಂಧನದಿಲ್ಲ. ಈಗ ತಾಯಿಯ ಸಂಬಂಧದಿಂದಲೂ ಮುಕ್ತಳಾಗಿದ್ದೇನೆ. ಇನ್ನೇನು? ಇಡೀ ಜಗತ್ತೇ ನನ್ನದು. ಜಗತಿನಲ್ಲಿ ನನಗೆ ಇನ್ನು ಯಾರಹಂಗೂ ಇಲ್ಲ ರಾಜಾ, ಹೋಗುತ್ತೇನೆ ಇನ್ನು".

"ಬೇಡ ಚಿನ್ನಾ! ಹೋಗಬೇಡ. ನನ್ನನ್ನು ಬಿಟ್ಟು ಎಲ್ಲಿಗೂ ಹೋಗಬೇಡ".

"ನಿನ್ನನ್ನು ಬಿಟ್ಟು ನಾನೆಲ್ಲಿಗೆ ಹೋಗಲಿ, ರಾಜಾ? ನೀನು ವಿಶಾಲ ಕರ್ಣಾಟಕ ಸಾರ್ವಭೌಮ! ನಿನ್ನ ಕರ್ಣಾಟಕ ಸಾಮ್ರಾಜ್ಯವನ್ನು ಬಿಟ್ಟು ನಾನು ಎಲ್ಲಿಗೂ ಹೋಗುವುದಿಲ್ಲ. ನಿನ್ನ, ಈ ಪೂಜ್ಯ ಮೂರ್ತಿಯನ್ನೇ ನನ್ನ ಹೃದಯಪೀಠದಲ್ಲಿಟ್ಟುಕೊಂಡು ಪೂಜಿಸುತ್ತಾ, ಈ ಕರ್ಣಾಟಕ ಮಧುವನದಲ್ಲಿಯೇ ವಿಹಾರಮಾಡುವೆನೆಂದು ತಿಳಿ".

ರಾಯನು ದುಃಖದಿಂದ, "ಅಯ್ಯೋ! ನಿನ್ನನ್ನಗಲಿ, ಇನ್ನು ಒಂದ ನಿಮಿಷವೂ ಜೀವಿಸಿರಲಾರೆನು" ಎಂದನು.

ಪ್ರೇಮಸಂಯಮನ ಶಕ್ತಿಸಂಪನ್ನಳಾದ ಚಿನ್ನಾದೇವಿ, ದೂರನಿಂತ ರಾಯನ ಹೃದಯದಿಂದ ಮೋಹದ ಪರದೆಯನ್ನು ಎತ್ತುವಳೋ ಎನ್ನುವಂತೆ ಅವನ ಹೃದಯವನ್ನು ಮುಟ್ಟಿ, "ಏನಿದು, ರಾಜ? ರಾಜಾಧಿರಾಜನಾ ರಾಜಧರ್ಮಪಾರಾಯಣನಾದ ನೀನು ಈ ರೀತಿಯಾಗಿ ಅತ್ಯಲ್ಪವಾದ ಸ್ತ್ರೀ ವ್ಯಾಮೋಹದಿಂದ ಅಂಧನಾಗಬಹುದೇ? ನೀನು ಕ್ಷತ್ರಿಯ ಕುಲಾವತಂಸನಾ ವೀರಾಧಿವೀರನಲ್ಲವೆ? ಧೀರವರಾ! ನಿನ್ನ ದೃಢವಾದ ಈ ಹೃದಯವು ಅ ಸ್ಮಾತ್ ಇಷ್ಟು ದೌರ್ಬಲ್ಯಕ್ಕೊಳಗಾಗುವುದೆಂದರೇನಾಶ್ಚರ್ಯ? ನಾಚಿಕೆ ಛೀ! ಬಿಡು. ನಾನಿಂದು ನಿನ್ನ ಕಣ್ಣಿಗೆ ಬಿದ್ದುದೇ ಸರಿಯಾಗಲಿಲ್ಲ. ಹಳೆಂ ದಾಗಿರುವ ಹುಣ್ಣನ್ನು ಪುನಃ ತಿವಿದಹಾಗಾಯಿತು. ಪ್ರಕೃತಿಧರ್ಮರಹಸ್ಯಜ್ಞ ನೂ, ರಾಜಧರ್ಮಸೂತ್ರಜ್ಞನೂ ಆದ ತಿಮ್ಮರಸನ ಯೋಚನೆ ಸುಸಂಗ ವಾದುದೇ ಸರಿ. ದೀರ್ಘಾಲೋಚನೆಮಾಡಿಯೇ, ಅವನು ನನ್ನನ್ನು ನಿನ್ನ ಕಣ್ಮ ಮಾಡಿದನು. ರಾಜಚೂಡಾಮಣಿ! ಆ ಮಂತ್ರಿವರ್ಯನ ಯೋಚನೆಯಂ ನಡೆಯುವುದೇ ನಿನಗೆ ಶ್ರೇಯಸ್ಕರವಾದುದು. ನಾನು ಸಾರಿಸಾರಿ ಹೇ ತ್ತೇನೆ. ನಮ್ಮಿಬ್ಬರ ಪ್ರೇಮವೂ ನಮ್ಮಿಬ್ಬರ ಹೃದಯಗಳಲ್ಲಿಯೇ ಅ ಗಿರಲಿ. ಮನಸ್ಸನ್ನು ದೃಢಮಾಡಿಕೊ. ಗೋವಿಂದರಾಜನ ಹಂತಕನಾ ಆ ಪರಮಪಾಪಿಗೆ ತಕ್ಕ ಪ್ರತೀಕಾರಮಾಡುವುದೀಗ ನಿನ್ನ ಪ್ರಥಮ ಕರ್ತ ವಾಗಿದೆ. ಗೋವಿಂದರಾಜನನ್ನು ಒದೆದ ಅವನ ಬಲಗಾಲನ್ನೂ ತಲೆಗಡಿ ಆ ಚಾಂಡಾಲನ ಬಲಗೈಯ್ಯನ್ನೂ ಛೇದಿಸಬೇಕೆಂದು ನಾನು ಪ್ರತಿಜ್ಞೆಮಾ ದ್ದೇನೆ. ನನ್ನ ಕೈಯಲ್ಲಿ ಆಯುಧವಿರುತ್ತಿದ್ದರೆ, ಆಗಲೇ ಆ ಪ್ರತಿಜ್ಞೆ ನೆರವೇ ಬಿಡುತ್ತಿತ್ತು. ಇನ್ನು ಅದು ನಿನ್ನಿಂದ ನೆರವೇರಬೇಕಾಗಿದೆ. ರಾಜಾ! ಕರ್ತ ಬಾಹಿರನಾಗಬೇಡ. ನಾನಿನ್ನೋ ಹೋಗುವೆನು!" ಎಂದು ನುಡಿದ ಮತ್ತೊಂದು ಕ್ಷಣವೂ ನಿಲ್ಲದ ಚಿನ್ನಾದೇವಿ ಆ ಸ್ಥಳವನ್ನು ಬಿಟ್ಟು, ಪರವೇ ದಿಂದ ಓಡಿಹೋದಳು.

ಪ್ರಿಯ ವಾಚಕರೇ! ಆ ದೇವಿಯ ಪ್ರೇಮ ಸಂಯಮನಶಕ್ತಿ ಅದೆಷ್ಟು ಬಲವತ್ತರವಾಗಿರುವುದೆಂದು ಊಹಿಸಬಲ್ಲಿರಾ? ಅಂತಹ ಸ್ತ್ರೀರತ್ನವನ್ನು ಹೆತ್ತ ನಮ್ಮ ಭಾರತಮಾತೆಯೇ ಧನ್ಯಳು!

## ೧೮

## ಹೊಸ ವಿಪತ್ತು

ಕೃಷ್ಣದೇವರಾಯನು ಕಿಂಕರ್ತವ್ಯತಾಮೂಢನಾಗಿ ಒಂದೆರಡು ನಿಮಿಷ ಭ್ರಾಂತನೋಪಾದಿಯಲ್ಲಿ ಸುಮ್ಮನೆ ನಿಂತನು. ಚಿನ್ನಾದೇವಿಯಷ್ಟು ಆತ್ಮ ಸಂಯಮನಶಕ್ತಿ ಆಗ ರಾಯನಿಗಿಲ್ಲದೆ ಹೋಯಿತು. ಸುಮಾರು ಮೂರು ವರ್ಷಗಳಿಗೂ ಮಿಕ್ಕು, ವಿಯೋಗವನ್ನನುಭವಿಸಿದಮೇಲೆ, ಅಕಸ್ಮಾತ್ತಾಗಿ ಈ ದಿನ ಅವಳ ದರ್ಶನವಾಗಿದೆ. ಅದೂ, ಆ ನಿರ್ಜನಸ್ಥಾನದಲ್ಲಿ. ಆದುದರಿಂದಲೇ ಅವನ ಮನಸ್ಸು ಸ್ವಲ್ಪ ಕವಲಿತು. ಸ್ವಲ್ಪ ಮೋಹಿಸಿತು. ಆದರೆ ಬಲಾತ್ಕರಿಸುವಷ್ಟು ಪ್ರಬಲವಾಗಲಿಲ್ಲ. ವಿವೇಕವು ಮಾತ್ರ ನಂದಿಹೋಗಲಿಲ್ಲ. ಅದರ ಪ್ರಕಾಶವೇನೋ ತುಸು ತಗ್ಗಿತ್ತು; ಅಷ್ಟೆ. ಚಿನ್ನಾದೇವಿಯ ಬೋಧನ ವಾಕ್ಯಗಳಿಂದ ಅದು ಆಗಾಗ ಪ್ರಕಾಶವೇರುತ್ತಲೂ ಇತ್ತು. ಅದುಕಾರಣವೇ, ಅವನು ಸುಮ್ಮನೆ ನಿಂತು, ಅವಳು ಬೋಧಿಸುತ್ತಿದ್ದುದನ್ನು ಕೇಳುತ್ತಿದ್ದನು. ಅವಳು ಓಡಿಹೋದಮೇಲೆ, ಹಾಗೆ ಕಂಬದಂತೆ ನಿಲ್ಲಲಿಕ್ಕೂ ಅದೇ ಕಾರಣ. ಆದರೆ, ಎರಡು ನಿಮಿಷಗಳೊಳಗೆ ಮೇಲೇರಿದ ವಿವೇಕದ ಬೆಳಕು ಪುನಃ ತಗ್ಗಿತು. ಮೋಹದ ಹೊಗೆ ಏರಿತು. ಕೂಡಲೇ ಹುಚ್ಚನಂತೆ, "ಹಾ! ಚಿನ್ನಾ! ಚಿನ್ನಾ! ಎಲ್ಲಿ ಹೋದೆ? ಎಲ್ಲಿ ಹೋದೆ? ಚಿನ್ನಾ!........" ಎಂದು ಕೂಗುತ್ತಾ, ಅವಳು ಓಡಿದ ದಿಕ್ಕನ್ನು ಹಿಡಿದು ಅವನೂ ಓಡಿದನು. ಚಿನ್ನಾದೇವಿ ಎಲ್ಲಿ ಹೋದಳೋ ಅವನ ಕಣ್ಣಿಗೆ ಬೀಳಲೇ ಇಲ್ಲ. ಆದರೂ ಬಿಡದೆ, "ಚಿನ್ನಾ! ಚಿನ್ನಾ!" ಎಂದು ಕೂಗುತ್ತಾ, ಆ ಗೊಂಡಾರಣ್ಯದ ಗಂಡಶಿಲೆಗಳನ್ನು ಎಡವುತ್ತಾ ಓಡುತ್ತಿದ್ದಾನೆ.

ವಿಚಿತ್ರ! ಸಮಸ್ತ ರಾಜವೈಭವ ಪರಿವೇಷ್ಟಿತನಾಗಿ ತಿರುಗಾಡತಕ್ಕವನಾದ, ಅಖಿಳ ಕರ್ಣಾಟಕ ಚಕ್ರವರ್ತಿ — ಮಹಾನ್, ಮಹಾನ್ ವಿದ್ವ

ತ್ತಾ ರಾಸುಧಾಕರನು, ಭಯಂಕರವಾದ ಆ ಅರಣ್ಯದಲ್ಲಿ ಯಾವಳೋ ಹೆಂಗಸೊಬ್ಬಳ ಹಿಂದೆ ಹೇಗೆ ಓಡುತ್ತಿದ್ದಾನೆ! ಆಶ್ಚರ್ಯ!

ಓಡುತ್ತಿದ್ದಂತೆ, ನೇಸರು ಮುಳುಗಿಬಿಟ್ಟಿತು. ಅಂದು ವೈಶಾಖ ಶುಕ್ಲ ತ್ರಯೋದಶಿ. ಪೂರ್ವದಿಶಾಕಾಶದಲ್ಲಿ, ಚಂದ್ರನು ತನ್ನ ತಣ್ಣದಿರನ್ನು ಬೆಳಗಿಸಲಾರಂಭಿಸಿದನು. ಆ ಗೊಂಡಾರಣ್ಯವು ಭೀಕರ ಶೋಭೆಯಿಂದ ಬೆಳಗಲಾರಂಭವಾಯಿತು. ಅಲ್ಲಲ್ಲಿ ನರಿ ಚಿರತೆಗಳ ಗರ್ಜನೆ; ಅಲ್ಲಲ್ಲಿ ಹಾವು ಹರಿಣಗಳ ಸರಭರ ಶಬ್ದ. ಅಲ್ಲಲ್ಲಿ ವಿವಿಧ ಜಂತುಗಳ ವಿಕಾರ ಸ್ವರ. ಆ ಗುಂಡುಗಲ್ಲುಗಳ ಬುಡದಲ್ಲಿ ಏನಿರುವುದೋ? ಈ ಗವಿಯೊಳಗೆ ಯಾವ ಪ್ರಾಣಿಯೋ? ಆ ಮರಗಳಮೇಲೆ ಯಾವ ಬ್ರಹ್ಮರಾಕ್ಷಸವೋ? ಈ ಪೊದರುಗಳೆಡೆಯಿಂದ ಯಾವ ಭೂತವೆದ್ದು ಬರುವುದೋ? ಆ ಕೊಳ್ಳದಿಂದ ಯಾವ ಪ್ರೇತವು ಪ್ರತ್ಯಕ್ಷವಾಗುವುದೋ? ಈ ಬೋಳುಬಂಡೆಯಮೇಲೆ ಯಾವ ಪಿಶಾಚಿ ಗೋಚರಿಸುವುದೋ? ಆ ಗುಡ್ಡದ ತುದಿಯಿಂದ ಯಾವ ರಾಕ್ಷಸನು ಕೆಳಗೆ ಧುಮುಕುವನೋ? ತಿಳಿಯದು. ಅಬ್ಬಾ! ಭಯಂಕರ! ಅಳ್ಳೆದೆಯವರ ಜೀವವು ನೆತ್ತಿಯಿಂದಲೇ ಹಾರಿಬಿಡುವಂತಹ ಸ್ಥಾನ. ಆದರೆ ಕೃಷ್ಣದೇವರಾಯನು ನಿರ್ಭೀತನಾಗಿದ್ದನು. ಹಾಗೆಯೇ ಜೀವದ ಪಂಗುತೊರೆದ ಚಿನ್ನಾದೇವಿಯೂ ನಿರ್ಭಯಳಾಗಿದ್ದಿರಬಹುದು. ಆದರೆ ಅವಳು ದೃಷ್ಟಿಗೋಚರವಾದರಲ್ಲವೆ, ಅವಳ ಸ್ಥಿತಿಯನ್ನು ಅರಿಯಬಹುದು? ರಾಯನು ಹುಡುಕುವುದನ್ನು ಇನ್ನೂ ಬಿಡಲಿಲ್ಲ. ಆ ದಟ್ಟಕಾಡಿನಲ್ಲಿ ನಡೆ ನಡೆಯುತ್ತಲೇ ಇದ್ದಾನೆ. ಏನಾದರೂ ಹಲ್ಲಿ ಹರಿಣಿಯ ಸದ್ದಾದರೆ ಸರಿ, ಚಿನ್ನಾದೇವಿಯ ಸದ್ದೆಂದೇ ತಿಳಿದು, ಅವಳನ್ನು ಕರೆಯುತ್ತಾ ಆ ಕಡೆಗೆ ತಿರುಗುವನು. ಹೀಗೆ ಹುಚ್ಚನಂತೆ ತಿರುಗುತ್ತಿರಲು, ಹಟಾತ್ತಾಗಿ ಹಿಂದಿನಿಂದ "ಹಾ! ಕಳ್ಳ! ಕೃಷ್ಣಾ! ಸಿಕ್ಕಿದ್ದೆ! ನಿಲ್ಲು! ನಿಲ್ಲು!" ಎಂದೊಂದು ಕಠೋರ ಗರ್ಜನೆ ಕೇಳಿಸಿತು. ರಾಯನು ಬೆಚ್ಚಿಬಿದ್ದು, ತಿರುಗಿ ನೋಡಿದನು.

ಸಮೀಪವೇ, ಒಂದಾನೊಂದು ವ್ಯಕ್ತಿಯ ಕರಗತ ನಿಷ್ಕಾಸಿತ ದೀರ್ಘ ಕರವಾಲವು, ಚಂದ್ರಕಿರಣದಲ್ಲಿ ಥಳಥಳಾಯಮಾನವಾಗಿ ನರ್ತಿಸುತ್ತಾ—ಅದೋ!—ವೇಗವಾಗಿ ರಾಯನಮೇಲೆ ಬೀಳಲು ಬರುತ್ತಿತ್ತು.

ರಾಯನು ಚಕಿತನಾದನು! ಕೂಡಲೇ ಮೋಹವು ಮರೆಯಾಗಿ ಹೋಯಿತು!

## ೧೯
## ಪ್ರತಿರಕ್ಷಣೆ

ಕೃಷ್ಣದೇವರಾಯನು ಜಾಗ್ರತನಾಗಿ ವೀರಾವೇಶದಿಂದ ಕತ್ತಿಯನ್ನೆತ್ತಿ, "ಯಾಗು ನೀನು?" ಎಂದು ನುಡಿದು ದಿಟ್ಟಿಸಿದನು.

ಕಾವಿಯ ಬಟ್ಟೆಯನ್ನೂ ಅಂಗಿಯನ್ನೂ ಧರಿಸಿಕೊಂಡು, ಉದ್ದುದ್ದವಾಗಿ ಬೆಳೆದಿರುವ ಕೆಂದಾಡಿ, ಕೆನ್ಮೀಸೆ, ಕೆಂಜೆಡೆಗಳಿಂದ, ಭಯಂಕರಾಕಾರನಾದ, ರುದ್ರ ಸನ್ಯಾಸಿಯೊಬ್ಬನು, ಕೃಷ್ಣದೇವರಾಯನ ನಟ್ಟಿದಿರಿನಲ್ಲಿ ನಿಂತುಕೊಂಡು, ಸುನಿಶಿತಾಗ್ರದ ದೀರ್ಘ ಕರವಾಲವನ್ನು ಕುಣಿಸುತ್ತಾ, ಕಠೋರ ಸ್ವರದಿಂದ, "ನಿನ್ನ ವೈರಿ! ನಿನ್ನ ಯಮ!" ಎಂದು ಗರ್ಜಿಸಿದನು.

ರಾಯನೂ ಕಠೋರ ಸ್ವರದಿಂದಲೇ ಕೇಳಿದನು, "ನನಗೂ ನಿನಗೂ ಎಂತಹ ವೈರ? ಎಲ್ಲಿಯ ವೈರ?"

"ಭಂಡರಾಯಾ! ನನ್ನ ರಾಜ್ಯವನ್ನು ಕಸಿದು, ನನ್ನ ಪುತ್ರನನ್ನು ಬಂಧಿಸಿ, ನನ್ನನ್ನು ಹೀಗೆ ಕಾಡುಪಾಲುಮಾಡಿ, ಈಗ ನನ್ನ ತಮ್ಮನಮೇಲೂ ದಂಡೆತ್ತಿ ಹೊರಟಿರುತ್ತಾ, ನನಗೂ ನಿನಗೂ ಎಂತಹ ವೈರ ಎಂದು ಕೇಳಿದೆಯಾ?"

"ಓಹೋ! ತಾವು ಉದಯಗಿರಿ ದುರ್ಗಾಧೀಶರಾದ ವೀರರುದ್ರ ಗಜಪತಿಗಳೋ!........"

"ಅಧಮ! 'ತಾವು' ಎಂದು ಏರಿಸಿ ಮಾತಾಡಿ, ನನ್ನನ್ನು ಶಾಂತಗೊಳಿಸಲು ನೋಡುತ್ತೀಯಾ? ಅದಿನ್ನು ಸಾಗದು! ನಿನ್ನ ಆಯುಸ್ಸು ಇಂದು ಪೂರ್ತಿಯಾಗಿಯೇ ಮುಗಿಯಿತು" ಎಂದು ಸನ್ಯಾಸಿ ಕತ್ತಿಯನ್ನು ಬೀಸಿದನು.

ರಾಯನು ಲಂಘನದಿಂದ, ಆ ಏಟನ್ನು ತಪ್ಪಿಸಿಕೊಂಡು, ತನ್ನ ಕತ್ತಿಯನ್ನು ಅಡ್ಡ ಹಿಡಿದು, "ಗಜಪತಿ ವೀರಾಗ್ರಗಣ್ಯಾ! ಸ್ವಲ್ಪ ಶಾಂತರಾಗಲಿ, ನನ್ನ ಒಂದು ಮಾತನ್ನು ಕೇಳಿಕೊಂಡು, ತರುವಾಯ ಯುದ್ಧಕ್ಕೆ

ಧುಮುಕಿರಿ. ಅಯ್ಯಾ! ಯೋಚಿಸಿದರೆ, ತಾವು ನನ್ನ ಮೇಲೆ ಇಷ್ಟು ಹಗೆಯನ್ನಿಟ್ಟುಕೊಳ್ಳುವ ಕಾರಣವಿಲ್ಲ......." ಎಂದನು.

"ಕಾರಣವಿಲ್ಲ .......!"

"ಇಲ್ಲ. ತಮ್ಮ ಪುತ್ರನು ಉದಯಗಿರಿ ಸಿಂಹಾಸನಾರೂಢನಾಗಲು ಒಲ್ಲದಿದ್ದುದರಿಂದಲೇ ಅವನನ್ನು ಸೆರೆಯಲ್ಲಿಡಬೇಕಾಯಿತು. ನಿಮ್ಮ ದುರ್ಗವನ್ನು ಹೆಸರಿಗೆ ಮಾತ್ರವೇ ಜಯಿಸಿದ್ದೇನೆ. ಅದು ಈಗಲೂ ನಿಮಗಾಗಿಯೇ ಕಾದಿಡಲ್ಪಟ್ಟಿದೆ......."

"ಸಾಕು ನಿಲ್ಲಿಸು! ಇಂತಹ ಜಳ್ಳು ಪೊಳ್ಳು ಮಾತುಗಳಲ್ಲೊಂದೂ ಈಗ ಫಲಿಸದು. ನಿನ್ನನ್ನು ಸಂಹರಿಸಿ, ನನ್ನ ತಪ್ತ ಹೃದಯಕ್ಕೆ ನಿನ್ನ ರಕ್ತದಿಂದ ಶಾಂತಿಮಾಡಬೇಕೆಂದು, ಎಷ್ಟೋ ಕಾಲದಿಂದ ಹೊಂಚು ಹಾಕುತ್ತಿದ್ದ ನಾನು ಈ ಸುಸಂಧಿಯನ್ನು ಎಂದಿಗೂ ವ್ಯರ್ಥಗೊಳಿಸೆನು. ನಿಲ್ಲು!" ಎನ್ನುತ್ತಾ, ಸಂನ್ಯಾಸಿ ಪುನಃ ಖಡ್ಗವನ್ನೆತ್ತಿ, ರಾಯನನ್ನು ಹೊಡೆಯ ಹೋದನು. ಕಡು ವೀರಾವೇಶಭರದಿಂದ, "ಹಾಗೋ! ತಮ್ಮ ವೈರಮದವನ್ನು ಈಗಲೇ ಇಳಿಸುವೆನು ಎಂದು, ರಾಜಸಿಂಹನು ಗರ್ಜಿಸುತ್ತಾ, ಮತ್ತೇಭದಮೇಲೆ ಬೀಳುವ ಮೃಗರಾಜನಂತೆ ಗಜಪತಿ ಸಂನ್ಯಾಸಿಯಮೇಲೆ ಧುಮುಕಿದನು.

ನಟ್ಟಿರುಳ ಆ ಕಾರಡವಿಯಲ್ಲಿ, ಆ ವೀರರಿಬ್ಬರಿಗೂ ಪ್ರಬಲವಾದ ಖಡ್ಗಾಖಡ್ಗಿ ತೊಡಗಿತು. ಹೊಂಚಿ, ಹಾರಿ, ನುಸುಳಿ, ತಿರುಗಿ, ಬಿದ್ದು, ಎದ್ದು, ಹೊರಳಿ, ಉಭಯತರೂ ಯುದ್ಧಮಾಡಿದರು. ಖಡ್ಗಗಳು ಚಂದ್ರಕಿರಣದಲ್ಲಿ ಹೊಳೆಹೊಳೆದು, ಕುಣಿಕುಣಿದು, ಖಣಖಣನೆ ಒಂದನ್ನೊಂದು ತಾಡಿಸುತ್ತಿದ್ದುವು. "ಹುಂ! ಹುಂ! ಭಲೆ! ಕೊಲೆ! ಶಹಭಾಷ್! ಹುಷಾರ್...." ಇತ್ಯಾದಿ ವೀರೋದ್ಗಾರಗಳು ಗುಡುಗುದನಿಯ ಸಿಡಿಲಿನಂತೆ ಧ್ವನಿತವಾದುವು. ಉಭಯತರ ಅಂಗೋಪಾಂಗಗಳಲ್ಲಿಯೂ ವಿಪುಲ ಖಡ್ಗಾಹತಿಗಳಾದುವು. ಮುಳ್ಳು ಕಲ್ಲುಗಳು ಚುಚ್ಚಿದುವು. ಈ ಬಗೆಯ ಖಡ್ಗಾಖಡ್ಗಿ ಯುದ್ಧವು ಸುಮಾರು ಎರಡು ಘಳಿಗೆಗಳತನಕ ನಡೆಯಿತು. ಗಜಪತಿಸಂನ್ಯಾಸಿ ರಾಯನ ಗ್ರೀವಾನಾಳವನ್ನು ಭೇದಿಸಬೇಕೆಂದು ಎಷ್ಟು ಪ್ರಯತ್ನಮಾಡಿದರೂ, ಸಾಧ್ಯ

ವಾಗಲಿಲ್ಲ. ಹಾ! ನೋಡಿರಿ! ಏನಾಗಿ ಹೋಯಿತು? ಒಮ್ಮಿಂದೊಮ್ಮೆ, ಕೃಷ್ಣ ದೇವರಾಯನ ಕಾಲು ನಯವಾದೊಂದು ಬಂಡೆಯಮೇಲೆ ಜಾರಲು, ಅವನು ಆಯತಪ್ಪಿ ಫಕ್ಕನೆ ಬಿದ್ದುಬಿಟ್ಟನು. ಖಡ್ಗವು ಕೈತಪ್ಪಿ ಎಲ್ಲಿಗೋ ಸಿಡಿದು ಹೋಯಿತು.

ಇದೇ ಸುಸಂದರ್ಭವೆಂದುಕೊಂಡು, ಘಾತುಕನಾದ ಆ ಗಜಪತಿ ಸಂನ್ಯಾಸಿ, ಮಿಂಚಿನ ವೇಗದಿಂದ ರಾಯನ ಎದೆಯಮೇಲೆ ಹಾರಿ ಕುಳಿತು, ಏಳಬಿಡದೆ, "ಶಹಭಾಷ್! ನನ್ನ ಸರ್ವನಾಶಕರನಾದ ವೈರಿಯೇ! ಕೊನೆಯ ಬಾರಿ ಜಪಿಸು! ಇಷ್ಟದೇವತೆಯ ನಾಮವನ್ನು ಜಪಿಸು!" ಎಂದು ಗರ್ಜಿಸುತ್ತಾ, ರಕ್ತದಾಹದ ಕರಾಳಕರವಾಲವನ್ನು ಮೇಲಕ್ಕೆತ್ತಿ ಅದರ ತೀಕ್ಷ್ಣಾಗ್ರವನ್ನು ರಾಯನ ಎದೆಗೆ ಗುರಿಹಿಡಿದನು!

ಕೃಷ್ಣದೇವರಾಯನು ಶ್ರೀ ಭುವನೇಶ್ವರಿಯನ್ನು ಧ್ಯಾನಿಸುತ್ತಾ, ತನ್ನ ಸಂಪೂರ್ಣಬಲವನ್ನೂ ಉಪಯೋಗಿಸಿ ಮೇಲಕ್ಕೇರುವ ಪ್ರಯತ್ನ ಮಾಡಿದರೂ ಸಂನ್ಯಾಸಿ ಒಳ್ಳೇ ಬಲಿಷ್ಠನಾದುದರಿಂದ ಅವನಾ ಪ್ರಯತ್ನವು ಫಲಿಸಲಿಲ್ಲ. ಸಂನ್ಯಾಸಿ ಒಂದು ಕೈಯಿಂದ ಅವನ ಗಂಟಲನ್ನು ಒತ್ತಿ ಹಿಡಿದಿದ್ದನು. ರಾಯನ ಕೈಗಳು ಸಂನ್ಯಾಸಿಯ ಕ್ರೂರಕರಗಳನ್ನು ಹಿಡಿದುಕೊಂಡು ತಡೆಯುತ್ತಿದ್ದವು. ಆದರೂ ಆ ತೀಕ್ಷ್ಣಕರವಾಲವು ಕೆಳಕ್ಕಿಳಿಯಲು ಯಾವ ಆತಂಕವೂ ಇರಲಿಲ್ಲ. ಅಯ್ಯೋ! ಭುವನೇಶ್ವರೀ! ಹಾ! ಪಂಪಾಪತೀ! ಅಖಿಳ ಕರ್ಣಾಟಕ ಸಾರ್ವಭೌಮನಾದ ಶ್ರೀ ಕೃಷ್ಣದೇವರಾಯನು ಸ್ಮಶಾನಸಮಾನವಾದ ಆ ಗೊಂಡಾರಣ್ಯದಲ್ಲಿ ಪ್ರೇತದ ಕಯ್ಯಿಗೆ ಸಿಕ್ಕಿಬಿದ್ದ ಹೆಣ್ಣುಹೆಂಗಸಿನಂತೆ ಮರಣವನ್ನು ಇದಿರುನೋಡುತ್ತಾ ಬಿದ್ದಿದ್ದಾನೆ. ಅವನ ಪರಿವಾರವು ಯಾವುದೂ ಈಗ ಅವನನ್ನು ರಕ್ಷಿಸಲು ಬರುವಂತಿಲ್ಲ. ಹಾ! ಹಾ! ಇನ್ನೇನು ಘಾತಕ ಸಂನ್ಯಾಸಿ ಖಡ್ಗದ ಕೈಯನ್ನು ವೇಗವಾಗಿ ರಾಯನ ಕಂಠದ ಪ್ರದೇಶಕ್ಕಿಡಲು ಇನ್ನಷ್ಟು ಮೇಲಕ್ಕೆತ್ತಿದನು. ಹಾಯ್! ಅಷ್ಟರೊಳಗೆ, "ನರಾಧಮಾ!" ಎಂಬ ಕರ್ಕಶ ಶಬ್ದದೊಂದಿಗೆ ಸಂನ್ಯಾಸಿಯ ಆ ಕ್ರೂರಹಸ್ತವು ಖಡ್ಗಸಮೇತವಾಗಿ ಹಾರಿ ನೆಲಕ್ಕೆಬಿತ್ತು. ಸಂನ್ಯಾಸಿಯು ಚೀತ್ಕಾರಮಾಡುತ್ತಾ, ಆ ನೋವನ್ನು ಸಹಿಸಲಾರದೆ, ಮೂರ್ಛಿತನಾಗಿ ಬಿದ್ದುಬಿಟ್ಟನು. ಆಗಲೇ

ಕೃಷ್ಣದೇವರಾಯನು ಧಿಗ್ಗನೆದ್ದು ನಿಂತು, ತನ್ನ ಪ್ರಾಣವನ್ನುಳಿಸಿದವರು ಯಾರೆಂದು ನೋಡಿದನು. ಖಡ್ಗಪಾಣಿಯಾದ ಶ್ರೀ ಭುವನೇಶ್ವರಿಯ ಮೂರ್ತಿಯೇ ಆವನ ಇದಿರು ಬಂದುನಿಂತಂತೆ ತೋರಿತು.

## ೨೦
## ಮಾನವಿಯಲ್ಲ ದೇವಿ!

"ಆಃ! ಚಿನ್ನಾದೇವಿ! ನನ್ನ ಪ್ರಾಣವನ್ನುಳಿಸಲಿಕ್ಕಾಗಿ ಬಂದೆಯಾ? ಎಲ್ಲಿಂದ ಬಂದೆ?" ಎಂದು ಆನಂದದಿಂದ ಕೇಳುತ್ತ, ರಾಯನು ಚಿನ್ನಾದೇವಿಯ ಕೈಗಳನ್ನು ಹಿಡಿದು ನೋಡಿದನು. ನಾನು ಎಲ್ಲಿಂದ ಬಂದರೇನು? ಶ್ರೀ ಭುವನೇಶ್ವರೀದೇವಿಯೇ ನನ್ನನ್ನು ಕಳುಹಿಸಿದ್ದಳೆನ್ನೋಣ! ಪ್ರಾಣಕ್ಕಿಂತಲೂ ಮಿಗಿಲಾದ ನನ್ನ ಮಾನವನ್ನು ನೀನು ಕಾಪಾಡಲಿಲ್ಲವೆ? ಅದಕ್ಕೆ ಪ್ರತಿರಕ್ಷಣೆಯನ್ನು ಮಾಡಿ ಋಣತೀರಿಸುವಯೋಗವನ್ನು ದೇವನು ನನಗೆ ಈಗಲೇ ಒದಗಿಸಿದಂತಾಯಿತು. ಆದರೆ ದೇಶಕ್ಕೆ ಮಹತ್ತಾದ ನಿನ್ನೀಜೀವವನ್ನುಉಳಿಸಿದವಳು ನಾನಲ್ಲ. ನಿನ್ನ ಈ ಭುವನೇಶ್ವರೀ ಖಡ್ಗವೇ ನಿನ್ನ ಜೀವವನ್ನುಳಿಯಿಸಿತು'' ಎಂದು ಚಿನ್ನಾದೇವಿ ಖಡ್ಗವನ್ನು ತೋರಿಸಿದಳು.

''ಚಿನ್ನಾದೇವೀ! ನೀನು ಒಳ್ಳೇ........'' ಎಂದು, ರಾಯನು ಏನೋ ಹೇಳಲಿಕ್ಕಿರಲು ಚಿನ್ನಾದೇವಿಯೇ ಮುನ್ನುಡಿದಳು:—

''ರಾಜೇಂದ್ರಾ! ನೀನು ನಿನ್ನ ಶಿಬಿರಕ್ಕೆ ಹೋಗುವುದನ್ನು ಬಿಟ್ಟು, ಈ ಕರಾಳರಾತ್ರಿಯಲ್ಲಿ, ಈ ಗೊಂಡಾರಣ್ಯದಲ್ಲಿ ಅದೂಕೂಡ, ನನ್ನೊಬ್ಬಳ ಹಂಬಲದಿಂದ ಹೀಗೆ ತಿರುಗಬಹುದೇ? ನಿನಗೆ ಅನೇಕಮಂದಿ ವೈರಿಗಳು ತುಂಬಿಕೊಂಡಿರುವರೆನ್ನಲು ಸಂದೇಹವಿಲ್ಲ ನೋಡಿದೆಯಾ?—ವಿಶಾಲಕರ್ಣಾಟಕ ಭೂರಮಣನಾದ ನಿನಗೆ ಎಂತಹ ವಿಪತ್ತು ಸಂಭವಿಸಿಬಿಟ್ಟಿತ್ತು? ನರಾಧಮನಾದ ಈ ಸಂನ್ಯಾಸಿ ಯುದ್ಧಧರ್ಮವನ್ನೇ ನೆನೆಯದೆ ನಿರಾಯುಧನಾಗಿ ಬದ್ಧಿರುವ ಕ್ಷತ್ರಿಯವೀರನನ್ನು ಕಟುಕನಂತೆ ಕೊಲೆಗೆಯ್ಯಲೆಣಿಸಿದನಲ್ಲ! ಈತನ ಕೃತ್ಯಕ್ಕೆ ಈತನ ತಲೆಯನ್ನೇ ಛೇದಿಸಿಬಿಡಬೇಕಿತ್ತು. ಆದರೆ ಅಷ್ಟು ಕ್ರೌರ್ಯವು ನನ್ನ ಮನಸ್ಸಿನಲ್ಲಿ ಹುಟ್ಟದೆಹೋಯಿತು ಇವನ ಪಾಪಕರ

ವಾದ ಹಸ್ತವನ್ನಷ್ಟೇ ಛೇದಿಸಿಬಿಟ್ಟಿದ್ದೇನೆ. ಭೂವಲ್ಲಭಾ ! ಇವನಂತಹ ಕ್ರೂರವೈರಿಗಳು ಎಷ್ಟುಮಂದಿ ಈ ಹಾಳಡವಿಯಲ್ಲಿ ಅಲೆಯುತ್ತಿರಬಹುದೋ ತಿಳಿಯದು. ರಾಜಾಧಿರಾಜನಾದ ನೀನು, ಒಂಟಿಯಾಗಿ ಅಲೆದಾಡುವುದು ಸರಿಯಲ್ಲ; ಇನ್ನಾದರೂ ಬೇಗನೆ ಈ ಸ್ಥಳವನ್ನು ಬಿಟ್ಟು ಹೊರಟುಹೋಗು. ಇದೋ, ಕೈತಪ್ಪಿ ಸಿಡಿದುಹೋದ ನಿನ್ನ ಖಡ್ಗ'' ಎಂದು ಚಿನ್ನಾದೇವಿ ರಕ್ತಸಿಕ್ತವಾದ ಖಡ್ಗವನ್ನು ಮುಂದಕ್ಕೆ ಚಾಚಿದಳು.

ಚಿನ್ನಾದೇವಿಯಮೇಲೆ ಇದ್ದ ಮೋಹದ ಬದಲಾಗಿ, ರಾಯನಿಗೀಗ ಯಾವುದೋ ಒಂದು ಅನಿರ್ವಚನೀಯವಾದ ಗೌರವಭಾವವು ಉತ್ಪನ್ನವಾಗಿದ್ದಿತು. ''ಧೀರೆ! ಬೇಡ, ನನ್ನ ಜ್ಞಾಪಕಾರ್ಥವಾಗಿ ಇನ್ನುಮೇಲೆ ಈ ಭುವನೇಶ್ವರಿ ಖಡ್ಗವು ದೇವಿಯ ಕೈಯ್ಯನ್ನೇ ಅಲಂಕರಿಸಿಕೊಂಡಿರಲಿ. ನನ್ನ ಬಳಿಯಲ್ಲಿ ಇನ್ನೊಂದು 'ಶಕ್ತೀ' ಖಡ್ಗವಿದೆ" ಎಂದು ಅದನ್ನು ಚಿನ್ನಾದೇವಿಯ ಕೈಗೆ ಒಪ್ಪಿಸಿದನು.

ಚಿನ್ನಾದೇವಿ ಮನಸ್ಸಿನಲ್ಲಿ ''ಇರಲಿ, ದೇವಿಯ ಕೃಪೆ! ಇದು ಪ್ರಯೋಜನಕ್ಕೆ ಬಂದೀತು'' ಎಂದುಕೊಂಡು, ''ಹಾಗೆಯೇ ಆಗಲಿ ರಾಜಾ! ನೀನಿನ್ನು ಹೊರಟುಹೋಗು'' ಎಂದು ಖಡ್ಗವನ್ನು ಅಂಗೀಕರಿಸಿದಳು.

ರಾಯನ ಮನವು ಚಿನ್ನಾದೇವಿಯಮೇಲೆ ಈಗ ಒಂದು ನೂತನವಾದ ಭಾವವನ್ನು ತಾಳಿತು. ಮೊದಲಿನಂತೆ ಅವನು ಮೋಹಾವೃತನಾಗಲಿಲ್ಲ. ಪೂಜ್ಯಬುದ್ಧಿ ಹುಟ್ಟಿತು.

"ದೇವಿ! ನೀನು ಮಾನವಿಯಲ್ಲ; ಮಾನವೀರೂಪದಿಂದ ಜನಿಸಿದದೇವಿ. ನಿನ್ನಷ್ಟು ಆತ್ಮಸಂಯಮನಶಕ್ತಿ ನನಗಿಲ್ಲದೆಹೋಯಿತು. ಆದರೆ ದೇವಿ! ನಿನ್ನನ್ನು ಭಯಂಕರವಾದೀಗೊಂಡಾರಣ್ಯದಲ್ಲಿ ಒಂಟಿಯಾಗಿ ಬಿಟ್ಟು ಹೇಗೆ ಹೋಗಲಿ?"

"ನನ್ನ ಚಿಂತೆ ನಿನಗೆ ಬೇಡ ರಾಜಾ! ನೀನು ದಯಪಾಲಿಸಿದ ನಿನ್ನ ಈ ಭುವನೇಶ್ವರೀ ಖಡ್ಗವೇ ನನಗೆ ರಕ್ಷೆಯಾಗಿರಲು ಇನ್ನೇನು ಭಯ? ಅಗೋ ಮತ್ತೆ ಅದೇನು ಶಬ್ದ!"

ಚಿನ್ನಾದೇವಿ ಖಡ್ಗವನ್ನು ನೆಟ್ಟಗೆ ಹಿಡಿದುನಿಂತಳು. ರಾಯನೂ ತನ್ನ ಒರೆಯಿಂದ ಶಕ್ತೀ ಕತ್ತಿಯನ್ನು ಸೆಳೆದನು. ಅನತಿದೂರದಲ್ಲಿಯೇ ನಾಲ್ಕಾರುಮಂದಿ ರಾಹುತರು ಓಡಿಬರುವುದು ಕಾಣಿಸಿತು. ರಾಯನು ಗಟ್ಟಿಯಾಗಿ, "ಯಾರವರು?" ಎಂದು ಕೂಗಿದನು.

"ಜೈ ವಿರೂಪಾಕ್ಷ! ಜೈ ಕರ್ಣಾಟಕ ಮಾತಾ!" ಎಂದು ಆ ಗುಂಪಿನಿಂದ ಉತ್ತರವು ಬಂದಿತು. "ಜೈ ಕರ್ಣಾಟಕ ಮಾತಾ" ಎಂದು ರಾಯನೂ ಕೂಗಿ ಪ್ರತ್ಯುತ್ತರವಿತ್ತನು.

ಅಷ್ಟರಲ್ಲಿ ಆ ರಾಹುತರು ಒಂದು ಬಿಡುಗುದುರೆಯೊಂದಿಗೆ ಅಲ್ಲಿಗೆ ಬಂದು ನೀಳ್ದನಿಯಿಂದ ಜಯಘೋಷಮಾಡುತ್ತಾ, ಕುದುರೆಯಿಂದ ಕೆಳಕ್ಕೆ ಧುಮುಕಿ ರಾಯನಿಗೆ ಮುಜುರೆಮಾಡಿ ನಿಂತರು. ಫಕ್ಕನೆ ರಾಯನು ಏನೋ ಕಳೆದುಕೊಂಡವನಂತೆ ಅತ್ತಿತ್ತ ನೋಡಿದನು. ಅವನ ನೋಟದವಸ್ತುವಾದ ಚಿನ್ನಾದೇವಿ ಕಾಣಲಿಲ್ಲ. ಅಷ್ಟರಲ್ಲಿಯೇ ಮಾಯವಾಗಿಹೋಗಿದ್ದಳು. ಹೃದಯದಿಂದ ಉಕ್ಕಿ ಮೇಲಕ್ಕೇಳುವ ಯಾವುದನ್ನೋ ಬಲಾತ್ಕಾರದಿಂದ ಒತ್ತಿ ತುರುಕಿಕೊಂಡನೋ ಎಂಬಂತೆ ರಾಯನು ಒಂದು ದೀರ್ಘ ನಿಶ್ವಾಸವನ್ನು ಎಳೆದುಬಿಟ್ಟನು.

ಬಂದ ಕಟ್ಟಾಳುಗಳು ರಾಯನ ಷಡಂಗರಕ್ಷಕರಾಗಿದ್ದರು. ರಾಯನು ಅವರ ಮುಖ್ಯಸ್ಥನನ್ನು ಕುರಿತು, "ವಿಶ್ವನಾಥರಾವ್! ನನ್ನನ್ನು ಹುಡುಕುತ್ತಾ ಬಂದಿರೇನು?" ಎಂದು ಕೇಳಿದನು.

ವಿಶ್ವನಾಥರಾಯನು ವಿನಯದಿಂದ, "ಹೌದು ದೇವಾ! ಅರಣ್ಯದಿಂದ ಪವನವೇಗದಲ್ಲಿ ಮಾಯವಾಗಿಹೋದ, ತಮ್ಮ ತುರಂಗದ ಬೆಂಬತ್ತಲು ನಮ್ಮಿಂದಾಗದೇಹೋದ ಅಪರಾಧವನ್ನು ಕ್ಷಮಿಸೋಣಾಗಲಿ. ದೇವರು ಕ್ಷೇಮರೂಪದಿಂದ ನಮ್ಮ ಕಣ್ಣಿಗೆ ಬಿದ್ದುದು ನಮ್ಮ ಭಾಗ್ಯ" ಎಂದನು.

ರಾಯನು ಮನಸ್ಸಿನಲ್ಲಿ —"ನನ್ನ ಮನೋದೇವಿಯನ್ನು ನನ್ನ ಪ್ರೇಮಮಧುವನ್ನು, ಪ್ರಾಣದಾಯಿಕೆಯನ್ನು, ಭುವನೇಶ್ವರಿಯ ಸಮಾನಳನ್ನು ನನಗೆ ದರ್ಶನಮಾಡಿಸಿದ ಆ ಹರಿಣವು ನನ್ನ ಕಣ್ಣಿಗೆ ಬಿದ್ದುದು ನನ್ನ ಭಾಗ್ಯ" ಎಂದು ತಲೆಯೊಲಿದನು.

ವಿಶ್ವನಾಥನು, "ದೇವಾ! ತಮ್ಮನ್ನು ಹುಡುಕುತ್ತಾ, ನಾವು ಈ ಗೊಂಡಾರಣ್ಯದೊಳಗೆ, ಅಲ್ಲಲ್ಲಿ ಅಲೆದಾಡಲು ಒಂದೆಡೆಯಲ್ಲಿ ತಮ್ಮ ಈ ತುರಂಗಶ್ರೇಷ್ಠವು ನಮ್ಮ ಕಣ್ಣಿಗೆ ಗೋಚರಿಸಿತು. ಅಲ್ಲಿಯೇ ನಾಲ್ಕುಮಂದಿ ಶತ್ರುಗಳು ಗತಜೀವಿಗಳಾಗಿ ಬಿದ್ದಿದ್ದರು. ದೇವಾ! ಆಗ ನಮಗಾದ ಭಯವು ಅಷ್ಟಿಷ್ಟಲ್ಲ. ಅಲ್ಲಲ್ಲಿ ಹುಡುಕಾಡುತ್ತಾ ಈಗ ತಮ್ಮನ್ನು ಕಂಡು ಧನ್ಯರಾದೆವು. ಇಲ್ಲಿ ಬಿದ್ದಿರುವ ಈ ಸಂನ್ಯಾಸಿಯನ್ನು ನೋಡಿದರೆ, ತಾವೇನೋ ದೊಡ್ಡ ಗಂಡಾಂತರಕ್ಕೆ ಸಿಕ್ಕಿಬಿದ್ದಿರಬೇಕೆಂದು ಬೋಧೆಯಾಗುತ್ತಿದೆ" ಎಂದನು.

ರಾಯ, "ನಿಜ, ಒಂದು ಸಣ್ಣ ಗಂಡಾಂತರವೇನೋ ಪ್ರಾಪ್ತವಾಯಿತು. ಆದರೆ, ಶ್ರೀ ಭುವನೇಶ್ವರೀದೇವಿ ಕಾಪಾಡಿದಳು. ಈಗ ಸಂನ್ಯಾಸಿಯನ್ನು ನಮ್ಮ ಶಿಬಿರಕ್ಕೆ, ಕೊಂಡೊಯ್ಯಬೇಕು. ಎತ್ತಿ ಕುದುರೆಯಮೇಲೆ ಹಾಕಿಕೊಳ್ಳಿರಿ" ಎಂದು ಹೇಳಿದನು.

ರಾಯನಿಗೊದಗಿದ ಗಂಡಾಂತರ ಸಮಾಚಾರಗಳನ್ನು ತಿಳಿದುಕೊಳ್ಳಬೇಕೆಂಬ ಕುತೂಹಲವೇನೋ ವಿಶ್ವನಾಥಾದಿಗಳಿಗೆ ತುಂಬಾ ಇತ್ತು. ಆದರೆ, ಕೇಳುವಷ್ಟು ಧೈರ್ಯವಿಲ್ಲ. ರಾಯನನ್ನು ಪ್ರಶ್ನಿಸುವಷ್ಟು ಧೈರ್ಯವು ತಿಮ್ಮರಸನಿಗೆ ಹೊರತು ಮತ್ತಾರಿಗೂ ಬಾರದು. ಆದುದರಿಂದ ಅವರು ಏನೂ ಪ್ರಶ್ನಿಸದೆ, ರಾಯನ ಅಪ್ಪಣೆಯನ್ನು ಶಿರಸಾವಹಿಸಿಕೊಂಡು ಸಂನ್ಯಾಸಿಯ ಕಡೆಗೆ ತಿರುಗಿದರು.

## ೨೧

## ಹಲ್ಲುಮುರಿದ ಹಾವು

ಗಜಪತಿ ಸಂನ್ಯಾಸಿ, ಈ ಮೊದಲೇ ಎಚ್ಚರಕ್ಕೆ ಬಂದು, ರಾಯನ ಮಾತನ್ನು ಕೇಳುತ್ತಿದ್ದನು. ರಾಯನ ಕಡೆಯವರು ತನ್ನನ್ನು ಎತ್ತಿಕೊಳ್ಳಲು ಬರುವುದನ್ನು ಕಂಡು, "ಹಾ! ಮುಟ್ಟಬೇಡಿರಿ! ಈ ಪಾಪಿಯನ್ನು ಮುಟ್ಟಬೇಡಿರಿ!" ಎಂದು ಕೂಗಿದನು.

ಕೃಷ್ಣದೇವರಾಯನು ಅವನ ಬಳಿಗೆ ಬಂದು, "ಗಜಪತಿರಾಜಾ! ನನ್ನ ಉದ್ದೇಶವು ದುರುದ್ದೇಶವಾದುದಲ್ಲ. ತಮ್ಮನ್ನು ನಮ್ಮ ಶಿಬಿರಕ್ಕೆ ಕೊಂಡೊಯ್ದು........" ಎಂದನು.

“ಅದು ಗೊತ್ತಿದೆ; ನನ್ನ ಹಸ್ತಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡಿಸುವುದೇ ನಿನ್ನ ಉದ್ದೇಶ. ಕಟುಕನಾದ ನನ್ನನ್ನು ಕೂಡಲೇ ಶಿರಚ್ಛೇದನಮಾಡಿ ಕೊಲ್ಲ ದಿರುವುದನ್ನು ನೋಡಿದಾಗಲೇ, ನಿನ್ನ ಉದಾರ ಕ್ಷಮಾಗುಣವು ನನಗೆ ಗೊತ್ತಾ ಯಿತು. ಆದರೆ, ಯುದ್ಧಧರ್ಮವನ್ನು ಮೀರಿ, ಘಾತಮಾಡಲೆಳಸಿದ ನಾನು, ಎಂದಿಗೂ ನಿನ್ನ ಕ್ಷಮೆಗೆ ಅರ್ಹನಲ್ಲ. ನನ್ನನ್ನು ಇಲ್ಲಿಯೇ ಬಿಟ್ಟು ನೀನು ಹೊರಟುಹೋಗು.”

ರಾಯನು, “ಗಜಪತಿರಾಜಾ!—ತಾವಿಷ್ಟು ಮನಸ್ಸಿಗೆ ಹಚ್ಚಿಕೊಳ್ಳಬಾರ ದು. ಉದಯಗಿರಿ ಸಿಂಹಾಸನದಮೇಲೆ, ತಮ್ಮ ವಂಶೀಯರನ್ನೇ ಇರಿಸಬೇ ಕೆಂಬುದು ನನ್ನ ಆಶೆ. ತಮ್ಮ ಪುತ್ರನು, ಅರಿದತ್ತರಾಜ್ಯಸ್ವೀಕಾರಮಾಡಲಾರೆ ನೆಂದು ಹಟಹಿಡಿದಿರುವುದರಿಂದಲೇ, ನಮ್ಮ ಸೆರೆಮನೆಯಲ್ಲಿ ಬೀಳಬೇಕಾಯಿ ತು. ಉದಯಗಿರಿ ರಾಜಾಸನವು ಈಗ ತಮಗಾಗಿಯೇ ಕಾದುಕೊಂಡಿದೆ. ತಾವು ವಿದ್ಯಾನಗರದ ಸಾರ್ವಭೌಮತ್ವವನ್ನು ಒಪ್ಪಿಕೊಳ್ಳುವುದೇ ನನಗೆ ಬೇಕಾದುದಲ್ಲದೆ, ತಮ್ಮ ರಾಜ್ಯವು ನನಗೆ ಬೇಡ. ಕಾರಣ ಹೀಗಿರುವುದರಿಂದ ತಾವು ಮನಸ್ಸಿನ ವಿರಕ್ತಿಯನ್ನು ತೊರೆದು, ನಮ್ಮೊಂದಿಗೆ ದಯಮಾಡಿ ಬಂದು, ತಮ್ಮ ಪುತ್ರನನ್ನು ಸಮಾಧಾನಪಡಿಸಿ, ತಮ್ಮ ರಾಜ್ಯವನ್ನು ಪುನಃ ಸ್ವೀಕರಿಸ ಬೇಕಲ್ಲದೆ, ನಾವು ಕೈಕೊಂಡಿರುವ ಪ್ರಕೃತಕಾರ್ಯದಲ್ಲಿಯೂ ನಮಗೆ ಸಹಾಯಮಾಡಬೇಕಾಗಲಿ” ಎಂದನು.

ಗಜಪತಿ ಸಂನ್ಯಾಸಿಯು ಎದ್ದು ಕುಳಿತು, “ಅದೆಂದಿಗೂ ಈ ವೀರರುದ್ರ ಗಜಪತಿಯಿಂದ ಸಾಧ್ಯವಾಗದು. ಸ್ವಾಭಿಮಾನ ಶೂರರಿಗೆ ಶತ್ರುದತ್ತ ರಾಜ್ಯ ಸ್ವೀಕಾರದಷ್ಟು ಅಗೌರವವು ಬೇರೊಂದಿದೆಯೆ? ಆದರೆ, ನಿನ್ನನ್ನು ಕಟುಕ ತನದಿಂದ ಕೊಲ್ಲಲೆಳಸಿದ ನಾನು, ಸ್ವಾಭಿಮಾನಶೂರನೆಂದು ಹೊಗಳಿಕೊಳ್ಳು ವುದು ತೀರಾ ನಾಚಿಗೆಗೇಡಿತನದ ಮಾತಾದರೂ, ಆಗಲಿ. ಕೇಳು! ಈಗಲೂ ಹೇಳುತ್ತೇನೆ; ಗಜಪತಿರಾಜ್ಯಭಂಗಕ್ಕಾಗಿಯೇ ಕಂಕಣತೊಟ್ಟಿರುವ ನೀನು ಈಗಲೂ, ನನಗೆ ವೈರಿಯೇ ಸರಿ. ಆದರೆ, ಯಾವಾಗ ನಾನು ಘಾತುಕತನದಿಂದ ಕಟುಕನಂತೆ—ಹೇಡಿಯಂತೆ ನಿನ್ನನ್ನು ಕೊಲ್ಲಲೆಳಸಿದನೋ, ಆಗಲೇ ನೀನೇ ನನ್ನನ್ನು ಕೊಂದಂತಾಯಿತು. ನಾನು ಸೋತೇಹೋದೆನು. ನಿನ್ನ ಮೇಲಿನ ವ್ಯಕ್ತಿಗತ ವೈರವು ಇಲ್ಲಿಗೇ ಮುರಿದುಹೋಯಿತು. ಇನ್ನು ಸ್ವಾಭಾವಿಕವಾದ

ವಂಶಗತ ವೈರವಿದ್ದೇ ಇರುವುದು. ಈ ವೈರವನ್ನು ತೀರಿಸಲು ಇನ್ನು ನನಗೆ ಸಾಧ್ಯವಿಲ್ಲ. ಕಾಲಚಕ್ರವೀಗ ಸಂಪೂರ್ಣವಾಗಿ ನಿನ್ನ ಕಡೆಗೆ ತಿರುಗಿರುವುದರಿಂದ, ನಾನೀಗ ಹಲ್ಲುಮುರಿದ ಹಾವಾಗಿದ್ದೇನೆ. ಇನ್ನು ನಿನಗೆ ಪ್ರತೀಕಾರ ಮಾಡಲಿಕ್ಕೆ ನನ್ನಿಂದ ಸಾಧ್ಯವಿಲ್ಲ. ಹಟದಿಂದ ಪ್ರಯತ್ನಿಸಹೋದರೂ, ನನಗೇ ಅಪಮಾನವಾದೀತೆಂದು ಈಗ ನಡೆದ ಪ್ರಸಂಗದಿಂದಲೇ ಗೊತ್ತಾಗುತ್ತದೆ. ಆಃ! ಯಾರೂ ನೋಡುವುದಿಲ್ಲವೆಂದು ನಂಬಿ ನಾನು ಕಟುಕ ಕೃತ್ಯವನ್ನು ಮಾಡಲೆಳಸುವಾಗ, ಸರ್ವಸಾಕ್ಷಿಯಂತೆ ಧರ್ಮೋದ್ಧಾರಕ್ಕೆ ಬಂದೊದಗಿ, ನನ್ನ ಪಾಪಹಸ್ತಕ್ಕೆ ಮೋಕ್ಷವನ್ನಿತ್ತ ಆ ದೇವಿ ಈಗೆಲ್ಲಿ ಹೋದಳು? ವಿಷ್ಣುಶಂಖಸ್ಪರ್ಶದಂತೆ, ಜ್ಞಾನಪ್ರದಾನ ಖಡ್ಗಾಘಾತವನ್ನುಂಟುಮಾಡಿದ ಆ ದಿವ್ಯನಾರಿ ಎಲ್ಲಿ ಹೋದಳೀಗ? ಮಾಯವಾದಳೆಲ್ಲಿ ಆ ದೇವಿ?" ಎಂದು, ಅತ್ತಿತ್ತ ನೋಡುತ್ತ, ಕಷ್ಟದಿಂದ ಎದ್ದು, ಕೈಗಾಯವನ್ನು ಲಕ್ಷಿಸದೆ, ಸೀದಾ ಹೊರಟೇ ಹೋದನು. ರಾಯನು ಮತ್ತೆ ಅವನ ಗೊಡವೆಗೆ ಹೋಗಲಿಲ್ಲ.

## ೨೨

# ಹೊಸ ತಂದೆ

ಮುಂಡಗೈಯಲ್ಲಿ ರಕ್ತವು ತೊಟ್ಟಿಕ್ಕುತ್ತಲೇ ಇದ್ದಿತು. ಅದಕ್ಕೆ ತನ್ನ ಅಂಗಿಯ ಭಾಗವನ್ನೇ ಬಲವಾಗಿ ಒತ್ತಿಹಿಡಿದುಕೊಂಡು, ಸಂನ್ಯಾಸಿವೇಷದ ವೀರರುದ್ರ ಗಜಪತಿ ಹೋಗುತ್ತಿದ್ದಾನೆ. ಪಾದಗಳಿಗೆ ಮುಳ್ಳು, ಕಲ್ಲುಗಳು ಮುತ್ತಿಕ್ಕುತ್ತಲೇ ಇವೆ. ಅಲ್ಲಲ್ಲಿ ಎಡವುತ್ತಿದ್ದಾನೆ; ತಡವುತ್ತಿದ್ದಾನೆ; ಅಡಿಗಡಿಗೆ ಬವಳಿಯೂ ಬರುತ್ತಿದೆ. ಮುಗ್ಗರಿಸುತ್ತಿದ್ದಾನೆ. ಬೀಳುತ್ತಾನೆ. ಹಾ! ಬಿದ್ದನು. ಇಲ್ಲ ಇಲ್ಲ! ಬೀಳಲಿಕ್ಕಿದ್ದ ಆತನನ್ನು ಒಂದಾನೊಂದು ವ್ಯಕ್ತಿ ಆನಿಸಿ ಹಿಡಿದುಕೊಂಡಿತು. ವೀರರುದ್ರನು ಮೆಲ್ಲನೆ ಕುಳಿತನು. ಅವನನ್ನು ಹಿಡಿದುಕೊಂಡು, ಆ ವ್ಯಕ್ತಿಯೂ ಕುಳಿತುಕೊಂಡಿತು.

ವೀರರುದ್ರನು ಆ ವ್ಯಕ್ತಿಯ ಮುಖವನ್ನು ನೋಡುತ್ತಾ, "ಈ ಪಾಪಿಯ ಸಹಾಯಕ್ಕಾಗಿಬಂದ ತಾಯಿ ನೀನು ಯಾರು?" ಎಂದು ಕೇಳಿದನು. ಅವನ ಸ್ವರವು ದುರ್ಬಲವಾಗಿತ್ತು.

"ಆತ್ಮಪರಿಚಯವನ್ನು ತಮಗೆ ಹೇಗೆಂದು ಕೊಡಲಿ? ತುಸು ಮುಂಚೆ, ಕಟುಕ ಕಾರ್ಯಕ್ಕೆಳಸಿದ ತಮ್ಮ ಹಸ್ತವನ್ನು ಯಾವಳು ಈ ಖಡ್ಗದಿಂದ ಭೇದಿಸಿದಳೋ ಆ ನಾರಿಯೇ ನಾನು!"

ವೀರರುದ್ರನು ಅತ್ಯಾನಂದದಿಂದ, "ಆಃ! ಧನ್ಯನಾದೆ! ಕಾಶಿಗೆ ಹೊರಟಾಗ ಭಾಗೀರಥಿಯೇ ಇದಿರು ಬಂದಂತಾಯಿತು ಆಃ! ಜ್ಞಾನಪ್ರದಾಯಿನೀ! ........" ಎಂದನು.

"ಅದಿರಲಿ, ಈಗ ತಮ್ಮ ಕೈನೋವು ಹೇಗಿದೆ?"

"ನನ್ನ ಕೈನೋವನ್ನು ವಿಚಾರಿಸಲಿಕ್ಕಾಗಿ ಬಂದೆಯಾ ತಾಯಿ!........"

"ಹೌದು! ತಮ್ಮ ಸ್ಥಿತಿಯಿಂದ ತಮಗೆ ಯಾರೂ ದಿಕ್ಕಿಲ್ಲವೆಂದು ತಿಳಿದುಕೊಂಡು ನನ್ನ ಕೈಲಾದ ಸಹಾಯ ಮಾಡಲೆಂದು ತಮ್ಮ ಬಳಿಗೆ ಬಂದೆನು"

"ತಾಯಿ! ನಿನ್ನ ಮಹದ್ಗುಣವನ್ನು, ನಿನ್ನ ದೈವಿಕವಾದ ಗುಣವನ್ನು ನಾನು ಹೇಗೆ ಹೊಗಳಲಿ? ಹೃದಯದಲ್ಲಿ ಪ್ರೇಮರಸವನ್ನು ತುಂಬಿಕೊಂಡು ತಪ್ಪುಮಾಡಿದ ಮಕ್ಕಳನ್ನು ತಕ್ಕಂತೆ ಶಿಕ್ಷಿಸಿ, ಬಳಿಕ ಪ್ರೀತಿರಸದಿಂದ ಆದರಿಸುವ ತಾಯಿಯಂತೆ, ನನ್ನ ಬಳಿಗೆಬಂದೆಯಾ ತಾಯಿ! ಪಾಮರನಾದ ನಾನು ನಿನ್ನಿಂದೊಂದು ಹೊಸಪಾಠವನ್ನು ಕಲಿತೆನು."

"ವಯೋವೃದ್ಧರಾದ ತಮಗೆ ಪಾಠವನ್ನು ಕಲಿಸಲು ನಾನೆಷ್ಟರವಳು? ಅದು ಹೋಗಲಿ, ತಾವು ಹೀಗೆ ನಡಿಯುವುದನ್ನು ಕೇಳಿ ನನಗೆ ಆಶ್ಚರ್ಯವಾಗುತ್ತದೆ. ಈ ಕೈನೋವು ತಮಗಿಲ್ಲವೇನು?"

"ಇಲ್ಲ ತಾಯಿ! ಈ ನೋವೇನೂ ದೊಡ್ಡದಲ್ಲ ನನಗೆ. ಕ್ಷತ್ರಿಯ ವೀರನು ಇಂತಹ ನೋವನ್ನೆಲ್ಲಾ ಗಣ್ಯಮಾಡುವನೇ? ಮಾತೆಯೇ, ನನ್ನ ತಪ್ಪಿಗೆ ತಕ್ಕ ಶಿಕ್ಷೆಯೇ ವಿಧಿಸಲ್ಪಟ್ಟಿತೆಂದು ತಿಳಿದಾಗಿನಿಂದ ನನ್ನ ನೋವು ಶಾಂತವಾಗುತ್ತಿದೆ."

"ತಾವೇಕೆ ಕೃಷ್ಣದೇವರಾಯನಲ್ಲಿ ಅಂತಹ ವೈರಸಾಧನೆಯನ್ನು ಇಟ್ಟುಕೊಂಡಿದ್ದೀರಿ?"

"ಅದನ್ನೇನು ಹೇಳಲಿ ತಾಯಿ? ಹಿಂದೆ ಅವನಂತೆಯೇ ನಾನೂ ಒಬ್ಬ ರಾಜನಾಗಿದ್ದೆ. ಈ ಕೃಷ್ಣದೇವನು ದುರಾಶೆಯಿಂದ ನನ್ನ ರಾಜ್ಯದಮೇಲೆ

ಬಿದ್ದು ಹಾಯ್! ನನ್ನ ಏಕಮಾತ್ರ ಕುಮಾರನನ್ನು ಸೆರೆಹಿಡಿದು, ನನ್ನನ್ನು ದೇಶಭ್ರಷ್ಟನನ್ನಾಗಿಸಿ ಬಿಟ್ಟನು!..........''

''ಏನು? ಆ ಆಧುನಿಕ ಧರ್ಮರಾಯನು ನಿಮ್ಮನ್ನು ದೇಶದಿಂದ ಓಡಿಸಿದನೇ?''

''ಅವನಾಗಿ ನನ್ನನ್ನು ದೇಶದಿಂದ ಓಡುವಂತೆ ಮಾಡದಿದ್ದರೇನು ತಾಯಿ? ಸೋತಮೇಲೆ ಶತ್ರುಹಸ್ತದಲ್ಲಿ ಸಿಕ್ಕಿ ಒದ್ದಾಡುವುದಕ್ಕಿಂತಲೂ, ನಾನು ದೇಶಭ್ರಷ್ಟನಾಗಲೇಬೇಕಾಯಿತು. ನನ್ನೊಂದಿಗೆ ಈ ಕಾಡಾಡವಿ ತಿರುಗಿ, ನನ್ನ ಹೆಂಡತಿಯೂ ತೀರಿಹೋದಳು. ನನ್ನ ಪುತ್ರನನ್ನು ಬಿಡಿಸಬೇಕೆಂದು ನಾನು ಎಷ್ಟುತಂತ್ರ ನಡೆಸಿದರೂ, ಸುಭದ್ರನಾದ ಆನೆಗೊಂದಿಯ ಸೆರೆಮನೆಯಿಂದ ಅವನನ್ನು ಬಿಡಿಸಲು ಸಾಧ್ಯವಾಗಲೇ ಇಲ್ಲ. ಈಗಲಾದರೋ ಈತನು ನನ್ನ ತಮ್ಮ ಪ್ರತಾಪರುದ್ರನ ಮೇಲೆಯೂ ದಂಡೆತ್ತಿ ಹೋಗುತ್ತಿದ್ದಾನೆ. ಈ ಕಾರಣಗಳಿಂದ ನಾನು ಕೃಷ್ಣದೇವನಮೇಲೆ ಕ್ರೂರವಾದ ಹಗೆಯನ್ನಿಟ್ಟುಕೊಂಡಿದ್ದೆ. ಆ ವೈರಸಾಧನೆಗಾಗಿ ಈ ವೇಷದಿಂದ ಈತನ ಬೆಂಬತ್ತತೊಡಗಿ, ಸುಮಾರು ಮೂರು ವರ್ಷಗಳಾದುವು. ಈದಿನ ಈತನು ಹರಿಣದ ಬೆನ್ನಟ್ಟಿ ಓಡುತ್ತಿದ್ದಾಗ, ನಾನು ಅಲ್ಲಲ್ಲಿ ಮರಗಳಮೇಲೇರಿಯೂ, ಗುಡ್ಡಗಳ ಶಿಖರವನ್ನು ಹತ್ತಿಯೂ ಬಹುಸಾಹಸದಿಂದ ಅವನನ್ನು ಸಂಧಿಸಿದೆ. ವಿಚಿತ್ರರೀತಿಯ ಆ ವೈರವು ಈಗ ತೀರಿಹೋಯಿತು''

''ಆದರೆ ತಾವು ಇಷ್ಟುದೊಡ್ಡ ವೈರವನ್ನು ಇಟ್ಟುಕೊಳ್ಳಲಿಕ್ಕೆ ಕೃಷ್ಣದೇವರಾಯನ ತಪ್ಪು ಏನೂ ಇರುವಂತೆ ಕಾಣುವುದಿಲ್ಲವಲ್ಲ?''

''ಹೌದು ತಾಯಿ! ಈ ತತ್ತ್ವವು ನನಗೆ ಈಗ ಹೊಳೆಯುತ್ತದೆ. ಅವನು ರಾಜಧರ್ಮದಂತೆ ಜೈತ್ರಯಾತ್ರೆ ಹೊರಟರೆ, ನಾನು ಕ್ರೂರಕರ್ಮಿಯಂತೆ ಆಚರಿಸಿದೆನು. ನನ್ನ ಮಹಾಪರಾಧಕ್ಕೆ ತಕ್ಕಂತಹ ಶಿಕ್ಷೆಯನ್ನೇ ನೀನು ವಿಧಿಸಿದೆ. ಇದರಿಂದಾಗಿ ಮನಸ್ಸನ್ನಾವರಿಸಿದ್ದ ಆ ಕಾರ್ಮೋಡವು ದ್ರವಿಸಿಹೋಯಿತು.''

''ಅದು ಹೋಗಲಿ; ತಮ್ಮ ಮನಸ್ಸು ಈಗ ನಿರ್ಮಲವಾದುದನ್ನು ಕಂಡು, ನನಗೆ ಪರಮಾನಂದವಾಗಿದೆ. ತಾವೀಗ ಹೋಗಬೇಕೆಂದಿರುವ ಸ್ಥಾನವಾವುದು?''

''ಸ್ಥಾನವಿಲ್ಲ ತಾಯಿ ನನಗೆ; ಕಾಲು ಎಲ್ಲಿಯವರೆಗೆ ಒಯ್ಯುವುದೋ, ಅಲ್ಲಿಯವರೆಗೆ ಹೋಗಬೇಕೆಂದಿದ್ದೇನೆ. ಇರಲಿ, ತಾಯಿ ನೀನೆಲ್ಲಿಗೆ ಹೋಗುವಿ?''

"ನಾನೇ...........! ತಮ್ಮ ಮನೋಗತಿ ಹೇಗಿರುವುದೋ ಹಾಗೆಯೇ ಇದೆ, ನನ್ನ ಮನೋಗತಿ.''

ವೀರರುದ್ರನು ಚಿನ್ನಾದೇವಿಯ ಮುಖವನ್ನು ದಿಟ್ಟಿಸಿ ಪರೀಕ್ಷಿಸಿದನು. ಅವಳ ಮುಖಚಂದ್ರವಲಯದಮೇಲೆ ಚಂದ್ರಕಿರಣವು ಜಗಜಗಿಸುತ್ತಿತ್ತು. ಅವನು ಪ್ರೀತಿವ್ಯಂಜಕ ಸ್ವರದಿಂದ, ''ಯಾಕೆ ತಾಯಿ? ನಿನಗೆ ಯಾರೂ ದಿಕ್ಕಿಲ್ಲವೇ?'' ಎಂದು ವಿಚಾರಿಸಿದನು.

ಚಿನ್ನಾದೇವಿ, ಆಕಾಶವನ್ನು ದೃಷ್ಟಿಸುತ್ತ, "ದೇವನೇ ದಿಕ್ಕು, ನನಗೆ!" ಎಂದು ದುಃಖದಿಂದ ಹೇಳಿದಳು.

''ನಿನ್ನ ತಂದೆ ತಾಯಿಗಳೆಲ್ಲಿಗೆ ಹೋದರು, ಮಗು?''

''ಅವರೇ........ತಿಳಿ....... ಯದು" ಎಂದು ಚಿನ್ನಾದೇವಿ ಕುಗ್ಗಿದ ಕೊರಳಿನಿಂದ ಹೇಳಿದಳು. ಅವಳ ನೇತ್ರಾಗ್ರಗಳಲ್ಲಿ ಜಲಬಿಂದುಗಳು ಥಳಥಳಿಸಿದುವು. ವೀರರುದ್ರನು ಅವುಗಳನ್ನು ಕಂಡು, ''ಬೇಡ........ತಾಯಿ. ಆ ಸಂಗತಿಯನ್ನು ಕೇಳಿದರೆ, ನಿನಗೆ ದುಃಖವಾಗುವುದೆಂದು ನನಗೆ ಗೊತ್ತಿದ್ದಿಲ್ಲ. ಬೇಡ ಬಿಡು, ಹಾಗಾದರೆ ಕ್ಷಮಿಸು ಮಗು! ನೀನು ನನ್ನನ್ನು ನಿನ್ನ ತಂದೆಯೆಂದು ತಿಳಿದು ಕ್ಷಮಿಸುವೆಯಾ? ನನ್ನನ್ನು ಜನಕ ಸಮಾನನೆಂದು ತಿಳಿಯುವೆಯಾ ಮಗು?'' ಎಂದು ಕೇಳಿದನು.

ಚಿನ್ನಾದೇವಿ ವೀರರುದ್ರಗಜಪತಿಯ ಮುಖವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದಳು. ಅವನ ಮುಖದಲ್ಲಿಯೂ ಅವನ ನೋಟದಲ್ಲಿಯೂ, ಪ್ರೀತಿರಸವು ಚಂದ್ರಕಿರಣದೊಂದಿಗೆ ಬೆರೆತು ಮಿನುಗುತ್ತಿತ್ತು. ಅದನ್ನು ನೋಡುತ್ತಲೇ, ಚಿನ್ನಾದೇವಿಗೆ ಅವನಮೇಲೆ ಅತ್ಯಾದರವು ಜನಿಸಿತು; ಭಕ್ತಿವಿಶ್ವಾಸಗಳು ಉಕ್ಕಿದುವು. ಕೂಡಲೇ, ''ಅಗತ್ಯವಾಗಿ, ಅಪ್ಪಾ!" ಎಂದಳು. ವೀರರುದ್ರನು ಅವಳ ಬೆನ್ನಿನಮೇಲೆ ತನ್ನ ಎಡಗಯ್ಯನ್ನು ಆಡಿಸುತ್ತಾ, ''ಮಗಳೇ! ನಿನ್ನ ಹೆಸರೇನಮ್ಮಾ?'' ಎಂದನು.

“ಚಿನ್ನಾದೇವಿ, ಅಪ್ಪಾ!”

“ಎಂತಹ ಮುದ್ದಾದ ಹೆಸರು. ಚಿನ್ನಾ! ನಿನ್ನ ದರ್ಶನದಿಂದ, ನನಗೆ ಇಂದು ಅತ್ಯಾನಂದವಾಗುತ್ತಿದೆ. ಕೈನೋವು ಮಾಯವಾಗಿ ಹೋಯಿತು ಮಗೂ! ನಾನೊಂದು ಪ್ರಶ್ನೆಯನ್ನು ಕೇಳುತ್ತೇನೆ; ಉತ್ತರಕೊಡುವೆಯಾ ?”

“ಅದೇನು, ಅಪ್ಪಾ?”

“ಮಗೂ, ನೀನು ನನ್ನನ್ನು ತಂದೆಯೆಂದು ಭಾವಿಸಿದಮೇಲೆ, ನನ್ನ ಮುಂದೆ ಮನಸ್ಸನ್ನು ಮುಚ್ಚಿಡಬಾರದಲ್ಲವೆ ?”

“ಊಹುಂ”

“ನೀನು ಕೃಷ್ಣದೇವರಾಯನನ್ನು ಪ್ರೀತಿಸುವೆಯಾ ?”

ಚಿನ್ನಾದೇವಿ ಬೆಚ್ಚಿಬಿದ್ದು, “ಅದು ನಿಮಗೆ ಗೊತ್ತಾದ ಬಗೆ ಹೇಗೆ?” ಎಂದು ವಿಚಾರಿಸಿದಳು.

“ಗೊತ್ತಾಯಿತು ಮಗೂ. ಆಗ ನೀನೂ ಅವನೂ ಆ ಗುಹೆಯಲ್ಲಿ ಸಂಧಿಸಿದ ಚಿತ್ರವನ್ನು ನಾನು ಸಮೀಪದಲ್ಲೇ ಒಂದು ವೃಕ್ಷದಮೇಲೆ ನಿಂತುಕೊಂಡು ನೋಡುತ್ತಲೇ ಇದ್ದೆ!”

“ಓಹೋ!........”

## ೨೩
# ಯಾರವರು?

ವೀರರುದ್ರ ಗಜಪತಿಸಂನ್ಯಾಸಿ ಚಿನ್ನಾದೇವಿಯ ತಲೆಯನ್ನು ನೇವರಿಸುತ್ತಾ, “ಏಕೆ ಮಗೂ? ಕೃಷ್ಣದೇವರಾಯನು ನಿನ್ನನ್ನು ವಿವಾಹಮಾಡಿಕೊಳ್ಳಲಾಗನೆ?” ಎಂದು ಕೇಳಿದನು.

ಚಿನ್ನಾದೇವಿ ಕುಗ್ಗಿದ ಧ್ವನಿಯಿಂದ, “ಆಗದು—ಅಪ್ಪಾ” ಎಂದು ಉತ್ತರವಿತ್ತಳು.

“ಏಕೆ ತಾಯಿ? ಅವನು ಒಪ್ಪುವುದಿಲ್ಲವೋ, ಅಥವಾ ನೀನೇ ಸಮ್ಮತಿಸಲಾರೆಯೋ?”

ಚಿನ್ನಾದೇವಿ ಸುಮ್ಮನಿದ್ದಳು.

ನಿನ್ನ ಗುಣರೂಪಗಳಲ್ಲಿ ಯಾವುದು ಕಡಿಮೆಯಾಗಿದೆ ಚಿನ್ನಾ?"

"ಅದೇನೋ........"

"ಏನು, ತಾಯಿ?"

"ಅಪ್ಪಾ! ನನಗೆ ಜನ್ಮವಿತ್ತ ತಂದೆಯನ್ನೇ ಅರಿಯದ ಪರಮ ಪಾಪಿ, ನಾನು!"

ಚಿನ್ನಾದೇವಿಯ ಕಣ್ಣಿನಿಂದ ಈಗ ನೀರು ಧಾರೆಯಾಗಿ ಸುರಿಯಿತು.

"ಪಾಪ! ಅಳಬೇಡ, ತಾಯಿ!" ಎಂದು, ವೀರರುದ್ರನು ಅವಳ ಕಣ್ಣೀರನ್ನು ತನ್ನ ಅಂಗಿಯ ತುದಿಯಿಂದ ಒರೆಸುತ್ತಾ, "ಈ ಪ್ರೇಮದ ಪರಿತಾಪವನ್ನು ನಾನೂ ಅನುಭವಿಸಿದ್ದೇನೆ, ಈಗಲೂ ಅನುಭವಿಸುತ್ತಿದ್ದೇನೆ!" ಎಂದು, ಪುನಃ ಚಿನ್ನಾದೇವಿಯ ವದನಾರವಿಂದವನ್ನು ಚೆನ್ನಾಗಿ ಪರೀಕ್ಷಿಸುತ್ತಾ, "ಮಗಳೇ! ನಿನ್ನನ್ನು ಹಿಂದೆ ನೋಡಿದಂತೆ, ನನಗೊಂದು ಹಳೆಯ ಜ್ಞಾಪಕವು ಬರುತ್ತಿದೆ" ಎಂದನು.

"ಅದೇನು, ಅಪ್ಪಾ?"

"ಆಹಾ! ಅಚ್ಚೊತ್ತಿ ತೆಗೆದ ಹಾಗಿದೆ! ಅದೇ ಮುಖಕಮಲ"

"ಯಾವುದಪ್ಪಾ?"

"ಹಿಂದೆ ನಾನು ನೋಡಿದ್ದ ಮುಖಕಮಲ, ತಾಯಿ!"

"ನನ್ನ ಮುಖವನ್ನು ನೋಡಿ ನಿಮಗೆ ಯಾರ ಜ್ಞಾಪಕವು ಬಂತು?"

"ಮಗೂ ಚಿನ್ನಾ! ನನಗೆ ಮೊದಲೊಬ್ಬಳು ಹೆಂಡತಿ ಇದ್ದಳು. ಅವಳೇ ನನ್ನ ಪ್ರಥಮ ಪ್ರೇಮದಪಟ್ಟದರಾಣಿ"

"ಹುಂ"

ವೀರರುದ್ರನು ತದೇಕ ದೃಷ್ಟಿಯಿಂದ, ಚಿನ್ನಾದೇವಿಯ ಮುಖವನ್ನು ನೋಡುತ್ತಾ, "ಮಗು ನನಗೂ ಅವಳಿಗೂ ವಿವಾಹವಾಗಿ ಎರಡೇ -- ಬರಿಯ ಎರಡೇ ವರ್ಷಗಳೊಳಗಾಗಿ ಒಬ್ಬ ಮೋಸಗಾರನ ದೆಸೆಯಿಂದ, ಅವಳಮೇಲೊಂದು ಅಪವಾದವು ಪ್ರಾಪ್ತವಾಯಿತು. ನಾನು ವಿಚಾರಮಾಡದೆ ಅವಳನ್ನು ದೇಶಭ್ರಷ್ಟಳನ್ನಾಗಿ ಮಾಡಿಬಿಟ್ಟೆ. ಅಯ್ಯೋ! ಆಕೆ [illegible] ಗರ್ಭಿಣಿಯಾಗಿದ್ದಳು" ಎಂದನು.

"ಅಯ್ಯೋ! ಪಾಪ! ಅವಳಮೇಲೆ ಎಂತಹ ಅಪವಾದವು ಬಂತು, ಅಪ್ಪಾ?"

"ಹೇಗೆ ಹೇಳಲಿ ಮಗಳೆ? ವ್ಯಭಿಚಾರಿಣಿ ಎಂಬ ದುರಪವಾದ ತಾಯಿ! ಆದರೆ........"

"ಅದು ಹೇಗೆ ಅಪ್ಪಾ?"

"ಕೇಳು ಮಗು........" ಎಂದು ವೀರರುದ್ರನು ದುಃಖವನ್ನು ನುಂಗಿಕೊಂಡು ಹೇಳತೊಡಗಿದನು. "ಅವಳನ್ನು ನಾನು ಮದುವೆಮಾಡಿಕೊಂಡಾಗ ಇನ್ನೊಬ್ಬ ದುಷ್ಟಸರದಾರನಿಗೂ ಅವಳನ್ನು ವರಿಸಬೇಕೆಂದು ಕಣ್ಣಿತ್ತು. ಆದರೆ ನಾನೂ ಅವಳೂ ಪರಸ್ಪರಪ್ರೇಮಬಂಧನದಲ್ಲಿ ಬಂಧಿತರಾಗಿದ್ದುದರಿಂದ, ನಮಗಿಬ್ಬರಿಗೂ ವಿವಾಹವಾಯಿತು. ಆಗ ಆ ದುಷ್ಟಸರದಾರನು, ಮತ್ಸರದಿಂದ ಅವಳು ಅವನಿಗೆ ಬರೆದಂತೆ ಒಂದು ಪ್ರೇಮಪತ್ರವನ್ನು ಸೃಷ್ಟಿಸಿ, ಅದು ನನ್ನ ಕೈಗೆ ಸಿಕ್ಕುವಂತೆ ಏರ್ಪಡಿಸಿದ್ದನು. ಅಷ್ಟೇಅಲ್ಲದೆ ನಾನಿಲ್ಲದಾಗ ಆತನು ಅವಳಿದ್ದಲ್ಲಿ ಆಗಾಗ ಬಂದುಹೋಗುತ್ತಿದ್ದನೆಂಬುದಕ್ಕೆ ತಕ್ಕಂತೆ, ನಾಲ್ಕೈದು ಜನರನ್ನು ಸಾಕ್ಷಿಗಳನ್ನಾಗಿಯೂ ಏರ್ಪಡಿಸಿದ್ದನು. ಮಗಳೇ, ಹೇಳಲೇನು? ನನ್ನಂತಹ ಗಂಡಸರು ಹೆಂಡಿಂದಿರಮೇಲೆ ಸಂದೇಹಗೊಳ್ಳುವುದು ಬಲುಬೇಗ. ಅದರಂತೆಯೇ ಕಠಿಣಾತ್ಮನಾದ ನಾನೂ ವರ್ತಿಸಿದೆ; ಹಿಂದುಮುಂದು ವಿಚಾರಮಾಡದೆ ಅವಳನ್ನು—ಆ ಸಾಧ್ವೀಮಣಿಯನ್ನು, ದೇಶಭ್ರಷ್ಟಳನ್ನಾಗಿ ಮಾಡಿಯೇಬಿಟ್ಟೆ. ಅಯ್ಯೋ! ಆಗ ಆಕೆ ಕಲ್ಮರಗಳು ಕರಗುವಂತೆ ರೋದಿಸಿದುದನ್ನು ನೆನೆದರೆ........ಹಾ!........................" ಎಂದು ಹೇಳುವಂತೆಯೇ ವೀರರುದ್ರನ ಗಂಟಲು ದುಃಖದಿಂದ ಒತ್ತಿಕೊಂಡಿತು. ಕಣ್ಣೀರು ಧಾರೆಧಾರೆಯಾಗಿ ಸುರಿಯಲಾರಂಭವಾಯಿತು. ಚಿನ್ನಾದೇವಿಯೂ ಪರಿತಾಪದಿಂದ, "ಅಯ್ಯೋ ಪಾಪ! ಆಮೇಲೆ ನಿಜಸಂಗತಿ ನಿಮಗೆ ಹೇಗೆ ಗೊತ್ತಾಯಿತು ಅಪ್ಪಾ?" ಎಂದಳು.

"ಮಗೂ! ಆ ಅನರ್ಥಕ್ಕೆ ಮೂಲಭೂತನಾದ ಆ ದುಷ್ಟಸರದಾರನು, ನನ್ನ ಸಾಧ್ವೀಮಣಿಯ ಶಾಪದಿಂದಲೋ ಎಂಬಂತೆ, ಮುಂದೆ ಮೂರೇವರ್ಷಗಳೊಳಗೆ, ಕ್ರೂರವಾದ ವ್ಯಾಧಿಗ್ರಸ್ತನಾಗಿ, ನರಳಿ ನರಳಿ, ತಾನು ಮಾಡಿದ ದುಸ್ತಂತ್ರವೆಲ್ಲವನ್ನೂ ಹೇಳಿ, ಕಡೆಗೆ ಪ್ರಾಣಬಿಟ್ಟನು........"

"ರಾಮ ರಾಮ! ಸಾಧ್ವೀಮಣಿಯರನ್ನು ಬಾಧೆಪಡಿಸಿದ ಪಾಪವು ಸಾಮಾನ್ಯವಲ್ಲ!"

"ಮಗಳೇ! ಆಗ, ನನಗಾದ ದುಃಖವನ್ನು ಏನೆಂದು ಹೇಳಲಿ? ಮರ್ಮಘಾತಕವಾದ ಆ ಸಂಗತಿಯನ್ನು ನೆನೆದರೆ, ಈಗಲೂ ನನಗೆ ಮೈ ಜುಮ್ಮೆನ್ನುತ್ತಿದೆ. ಅನಂತರ, ನಾನು ಎಷ್ಟು ಹುಡುಕಿಸಿದರೂ, ನನ್ನ ಆ ಸಾಧ್ವೀಪತ್ನಿ ನನಗೆ ಮತ್ತೆ ದೊರೆಯಲಿಲ್ಲ. ಮಗಳೇ! ಚಿನ್ನಾದೇವಿ! ನಿನ್ನ ಮುಖವು ಪ್ರತ್ಯಕ್ಷ ಅವಳ ಮುಖವಂತೆಯೇ ಇದೆ!"

"ಬಹಳ ವಿಷಾದಕರವಾದ ವೃತ್ತಾಂತವಿದು! ಅಪ್ಪಾ! ನಿಮ್ಮ ಆ ನಿರ್ಭಾಗ್ಯಪತ್ನಿಯ ಪುಣ್ಯನಾಮವಾವುದು, ಅಪ್ಪಾ?"

"ಸುಭದ್ರಾದೇವಿ, ಮಗು, ಸುಭದ್ರಾದೇವಿ! ನನ್ನ ಪ್ರೇಮದ ಪಟ್ಟದ ರಾಣಿ ಸುಭದ್ರಾದೇವಿ! ಹಾ! ಸುಭದ್ರಾದೇವಿ! ನಿನ್ನನ್ನು ದುರ್ಗತಿಗೀಡುಮಾಡಿದುದರ ಫಲವನ್ನೇ ಈಗ ನಾನು ಅನುಭವಿಸುತ್ತಿದ್ದೇನೆ! ಅಯ್ಯೋ! ಸಾಧ್ವೀಮಣಿ ಸುಭದ್ರಾದೇವೀ! ನೀನೀಗ ಎಲ್ಲಿರುವೆ?" ಎಂದು ವೀರರುದ್ರನು ಗಟ್ಟಿಯಾಗಿ ಪ್ರಲಾಪಿಸಿದನು. ಅಷ್ಟರಲ್ಲಿ ಎಡಗಡೆಯಿಂದ "ಯಾರವರು?" ಎಂಬ ಶುಷ್ಕಧ್ವನಿಯೊಂದು ಕೇಳಬಂತು!

೨೪

## ತಾಯಿಯನ್ನು ಸೇರಿದ ಕರು

'ಯಾರವರು?' ಎಂಬ ಶಬ್ದವನ್ನು ಕೇಳಿ, ಇಬ್ಬರೂ ಚಕಿತರಾದರು. ಅವರು ಕುಳಿತಿದ್ದುದು ಒಂದಾನೊಂದು ಗೋಡೆಯ ಬುಡದಲ್ಲಿ. ಆ ಗೋಡೆಯ ಎಡಗಡೆಯಿಂದಲೇ ಕೇಳಿಬಂತು. 'ಯಾರವರು?'ಎಂಬ ಶಬ್ದ. ನೋಡುತ್ತಿದ್ದ ಹಾಗೆಯೇ, ಅವರಿದಿರಿನಲ್ಲಿ ಒಂದು ಸ್ತ್ರೀಮೂರ್ತಿ ಬಂದು ನಿಂತುಕೊಂಡಿತು. ಆ ಹೆಂಗಸು ಮೇಘಾವೃತ ಚಂದ್ರಪ್ರಕಾಶದಂತೆ, ಸ್ವಲ್ಪಮಲಿನವಾದ ಒಂದು ಬಿಳಿ ಸೀರೆಯನ್ನು ಧರಿಸಿದವಳಾಗಿದ್ದಳು. ಬಿಚ್ಚಿಹೋದ ಕೇಶರಾಶಿ ದಟ್ಟವಾಗಿ ಮುಖದಸುತ್ತಲೂ ಇಳಿಬಿದ್ದುಕೊಂಡಿತ್ತು. ಕೈಗಳಲ್ಲಿ ಒಂದೊಂದು ಗಾಜಿನ ಬಳೆಗಳಿದ್ದುವು. ಬೇರೆ ಯಾವ ಆಭರಣಗಳೂ ತೋರುತ್ತಿದ್ದಿಲ್ಲ. ಸೆರಗಿನಿಂದ

ಸರ್ವಾಂಗವನ್ನೂ ಮುಚ್ಚಿಕೊಂಡಿದ್ದಳು. ಬಹಳ ಕೃಶಾಂಗಿನಿ. ವೀರರುದ್ರನು ಆ ಸ್ತ್ರೀಮೂರ್ತಿಯನ್ನುದ್ದೇಶಿಸಿ, "ನೀನು ಯಾರು ದೇವಿ – ಈ ಅರಣ್ಯಾದೇವತೆಯೇ ?" ಎಂದು ಕೇಳಿದನು,

"ನಾನೊಬ್ಬಳು ನಿರ್ಭಾಗ್ಯೆ,—ಅನಾಥೆ ಕರುವನ್ನು ಕಳೆದುಕೊಂಡು ಅಂಡಲೆಯುತ್ತಿದ್ದೇನೆ..........."

ಆ ಮಾತನ್ನು ಕೇಳುತ್ತಲೇ, ಚಿನ್ನಾದೇವಿ ಥಟ್ಟನೆ ಎದ್ದುನಿಂತಳು. ಅಪರಿಚಿತ ನಾರಿ ಮತ್ತೂ ಹೇಳಿದಳು :—

"........ನನ್ನ ಕರುವಿನ ಕೊರಳಿನಂತಹ ಮಧುರವಾದ ಸ್ವರವು ಇಂದು ಅಕಸ್ಮಾತ್ತಾಗಿ ನನ್ನ ಕಿವಿಗೆ ಬಿತ್ತು. ಮತ್ತೂ, ಇಲ್ಲಿ ಯಾರೋ 'ಸುಭದ್ರಾ ದೇವೀ! ಎಂದೂ ಕೂಗಿಕೊಂಡರು............" ಎನ್ನುವಷ್ಟರಲ್ಲಿ ಚಿನ್ನಾದೇವಿ, ಇನ್ನು ತಾಳಲಾರದೆ ಅತ್ತಸರಕ್ಕನೆ ಸರಿದು "ಅಮ್ಮಾ! ಅಮ್ಮಾ! ನೀನು ಇಲ್ಲಿಗೆ ಹೇಗೆ ಬಂದೆ ಅಮ್ಮಾ?..............." ಎಂದು ಆತುರದಿಂದ ಆ ಹೆಂಗಸನ್ನು ಆಲಂಗಿಸಿದಳು.

"ಹಾ! ನನ್ನ ಚಿನ್ನಾ! ಚಿನ್ನಾ!........" ಎನ್ನುತ್ತಾ ಅತ್ಯಾತುರದಿಂದ ತಾಯಿ ಚಿನ್ನಾದೇವಿಯನ್ನು ಕಟ್ಟಿಕೊಂಡು ಮನಸಾರೆಮುತ್ತಿಕ್ಕಿದಳು. ತಾಯಿ ಮಗಳ ಪರಸ್ಪರಾನಂದ ಸಂಯೋಗಸಂಭ್ರಮವನ್ನು ಕಂಡು ವೀರರುದ್ರ ಗಜಪತಿಯೂ ಪರಮಾನಂದ ಪರವಶನಾದನು.

ಆನಂದಾತಿರೇಕವು ತುಸು ತಗ್ಗಿದಮೇಲೆ "ಅಮ್ಮಾ! ನನ್ನ ಭಾಗ್ಯವೇ! ನೀನು ಇಲ್ಲಿ ಹೇಗೆ ಬಂದೆ? ಅಮ್ಮಾ!" ಎಂದು ಕೇಳಿದಳು ಚಿನ್ನಾದೇವೀ!

ತಾಯಿ, "ಮಗೂ! ಈಗ ನಾಲ್ಕುವರ್ಷಗಳಿಂದಲೂ ನಿನ್ನನ್ನು ಹುಡುಕುತ್ತಾ ನಾಲ್ಕು ದಿಕ್ಕುಗಳಲ್ಲಿಯೂ, ಅಲೆದಲೆದು ಸಾಕಾಯಿತು. ಈಗ ಈ ಹಾಳುಗುಡಿಯ ಪರಮೇಶ್ವರನ ಪಾದಾರವಿಂದವನ್ನು ಶರಣುಹೊಕ್ಕಿದ್ದೇನೆ. ಅಂದು, ನೀನು ಒಮ್ಮೆಗೇ ಕಾಣದೇಹೋದಾಗ, ಇನ್ನುಮೇಲೆ ಎಂದಿಗೂ ನಿನ್ನನ್ನು ಕಾಣಲಾರೆನೆಂದೇ ಬಗೆದಿದ್ದೆನು. ದಯಾಸಾಗರನಾದ ಈ ಪರಮೇಶ್ವರನು ಇಂದು ನಿನ್ನನ್ನು ನನ್ನ ಮಡಲಲ್ಲಿ ಹಾಕಿದನು. ನನ್ನ ಮುದ್ದೂ! ಇಂದು ನೀನು ನನ್ನ ಉದರದಲ್ಲಿ ಪುನರ್ಜನ್ಮವನ್ನು ಪಡೆದಂತೆಯೇ ಭಾಸ

ವಾಗುತ್ತಿದೆ. ಹಾ! ಪರಮೇಶ್ವರಾ! ನಿನ್ನ ಲೀಲೆ ಎಷ್ಟೊಂದು ವಿಚಿತ್ರ!.... ........" ಎಂದು ಮತ್ತೊಂದು ಬಾರಿ ಮಗಳನ್ನು ಮುದ್ದಿಟ್ಟು, "........ ಮಗಳೇ! ಚಿನ್ನಾ! ಈ ಗೊಂಡಾರಣ್ಯದಲ್ಲಿ ನೀನು ಹೇಗೆ ಬಂದಿರುವಿಯಮ್ಮಾ? ಇಷ್ಟುದಿನ ಎಲ್ಲಿ ಅಡಗಿಕೊಂಡಿದ್ದೆ? ನಿನ್ನೊಂದಿಗಿರುವ ಈ ಪೂಜ್ಯರು ಯಾರು ಮಗೂ?" ಎಂದು ಪ್ರಶ್ನೆಯಮೇಲೆ ಪ್ರಶ್ನೆಯನ್ನು ಕೇಳಿದಳು.

ಚಿನ್ನಾ, "ಅಮ್ಮಾ! ಸ್ವಲ್ಪ ತಾಳು! ಹೇಗೂ ಇಷ್ಟುಕಾಲ ಅಗಲಿ ಹಂಬಲಿಸಿದ ನಮ್ಮನ್ನು ದೇವನು ವಿಚಿತ್ರರೀತಿಯಿಂದ ಒಂದುಗೂಡಿಸಿದನು. ಇನ್ನು ನಿಧಾನವಾಗಿ ಮಾತಾಡಿ, ನಮ್ಮ ಹೃದಯಕ್ಕೆ ಸಮಾಧಾನವನ್ನುಂಟುಮಾಡೋಣವಂತೆ. ಅಮ್ಮಾ! ನೀನು ಹೀಗೂ ಬತ್ತಿಹೋಗಿದ್ದೀಯಲ್ಲಾ? ಊಟವಿಲ್ಲದೇ ಕಾಲವೆಷ್ಟಾಯಿತಮ್ಮಾ?'' ಎಂದಳು.

ತಾಯಿ, "ಮಗೂ! ನಿನ್ನನ್ನಗಲಿದ ನನಗೆ ಊಟವು ಹೇಗೆ ಸೇರಬೇಕು. ಎಂದು ನೀನು ಕಣ್ಮರೆಯಾದೆಯೋ, ಅಂದಿನಿಂದ ನಾನು ಅನ್ನದ ಕಾಳನ್ನೇ ಕಂಡವಳಲ್ಲ!" ಎಂದಳು.

ಚಿನ್ನಾ, "ಆ! ಬಹಳ ಸಾಹಸ! ಬಹಳ ಸಾಹಸ! ಅಮ್ಮಾ ನೀನು ಜೀವಂತಳಾಗಿ ಕ್ಷೇಮರೂಪಳಾಗಿ ನನ್ನ ಕಣ್ಣಿಗೆಬಿದ್ದುದು ನನ್ನ ಪೂರ್ವಜನ್ಮದ ಸುಕೃತವೇ ಸರಿ'' ಎಂದಳು.

ತಾಯಿ, "ಹಾಗೆಯೇ, ಮುದ್ದು, ನನ್ನ ಕಣ್ಣಿಗೆ ನೀನು ಬಿದ್ದುದೂ ನನ್ನ ಪುಣ್ಯವೇ! ಮಗೂ. ಆ ಪರಂಧಾಮನಿತ್ತ ಕಾಲಗತಿಯನ್ನು ಮೀರಲು ಅಣುಜೀವಿಗೂ ಸಾಧ್ಯವಿಲ್ಲ. ನಿನ್ನನ್ನು ಅಗಲಿ ನಿರಾಧಾರಳಾದ ನಾನು ಆತ್ಮಹತ್ಯಮಾಡಿಕೊಂಡಾದರೂ ದುಃಖವನ್ನು ಅಡಗಿಸಬೇಕೆಂದು ಅನೇಕಬಾರಿ ನಿಶ್ಚಯಿಸಿದ್ದೆನು. ಆದರೆ, ಅದು ಪರಮಾತ್ಮನಿತ್ತವಿಧಿಯನ್ನು ಮೀರಿದ ಮಹಾ ಪಾಪಕ್ಕೆ ಗುರಿಮಾಡುವುದೆಂದು ಮನಸ್ಸು ಬೆದರಿತು. ಅಲ್ಲದೇ, ಅದರಿಂದ ಯಾವ ಪ್ರಯೋಜನವೂ ಇರುವಂತೆಯೂ ಕಾಣಲಿಲ್ಲ. ಅದಕ್ಕಿಂತ ಆಯುಷ್ಯವು ತಾನಾಗಿ ತೀರುವತನಕವೂ ಬದುಕಿದ್ದರೆ, ಎಂದಾದರೂ ಸುದಿನವನ್ನು ಕಾಣಬಹುದೆಂದು ಅಂತರಾತ್ಮವು ಹೇಳಿತು; ಧೈರ್ಯವನ್ನು ಕೊಟ್ಟಿತು. ಆ ಧೈರ್ಯದಿಂದಲೇ ಈವರೆಗೆ ಬದುಕಿದೆ. ಸಮೀಪದ ಗ್ರಾಮನಿವಾಸಿಗಳು

ದಿನಂಪ್ರತಿಯೂ ಈ ಗುಡಿಗೆ ಬಂದು, ನನಗೇನಾದರೂ ಹಣ್ಣೋ ಹಾಲೋ, ತಂದುಕೊಡುವರು. ಕಾಲಗತಿಯಿಂದ ಈ ಗುಡಿ ಈಗ ಹಾಳು ಬಿದ್ದಿದ್ದರೂ, ಸರ್ವಾಂತರ್ಯಾಮಿಯಾದ ಪರಮಾತ್ಮನು ಈ ಗಡಿಯೊಳಗೂ ಇರುವನೆಂದು, ನಾನು ನಂಬಿದ್ದೇನೆ. ಆ ಪರಮಾತ್ಮನು ಗ್ರಾಮನಿವಾಸಿಗಳಿಗೆ ನನ್ನಮೇಲೊಂದು ವಿಶ್ವಾಸವನ್ನುಂಟುಮಾಡಿದ್ದಾನೆ. ನಿನ್ನನ್ನು ಈದಿನ ನನ್ನ ಮಡಿಲಲ್ಲಿ ಹಾಕಿದವನೂ ಆ ಪರಮೇಶ್ವರನೇ ಸರಿ. ನಿನ್ನನ್ನು ಕಂಡ ನಾನು ಜೀವ ಸಹಿತವಾಗಿದ್ದುದಕ್ಕೆ ಸಾರ್ಥಕವಾಯಿತು" ಎಂದಳು.

ಚಿನ್ನಾ, "ಅಮ್ಮಾ! ದೇವನು ನಿನ್ನ ಗುಣವನ್ನು ಚೆನ್ನಾಗಿ ಪರೀಕ್ಷೆ ಮಾಡಿದನು. ಆ ಪರೀಕ್ಷೆಯಲ್ಲಿ ನೀನು ತೇರ್ಗಡೆಹೊಂದಿದುದರಿಂದಲೇ ಈಗ ಸುಯೋಗವು ಪ್ರಾಪ್ತವಾಯಿತು" ಎಂದಳು.

ತಾಯಿ, "ನಿಜ ಮಗು! ನಿನ್ನೊಡನಿರುವ ಈ ಸಂನ್ಯಾಸಿಯವರು ಯಾರಮ್ಮಾ? ನಿನ್ನನ್ನು ಯಾವುದೋ ಒಂದು ವಿಪತ್ತಿನಿಂದ ಪಾರುಮಾಡಿ ನಿನ್ನನ್ನು ನನ್ನ ಮಡಿಲಲ್ಲಿ ಹಾಕಿದ ಮಹಾತ್ಮರು ಇವರೇ ಏನು?" ಎಂದಳು.

ತಾಯಿಯ ಮಾತನ್ನು ಕೇಳುತ್ತಾ, ಅವಳಮೇಲೆ ಭಕ್ತಿಪೂರಿತ ಹೃದಯನಾಗುತ್ತಾ, ಸ್ತಬ್ಧಭಾವದಿಂದ ಅವಳನ್ನೇ ನೋಡುತ್ತಿದ್ದ ವೀರರುದ್ರನು, ಆ ಪ್ರಶ್ನೆಯನ್ನು ಕೇಳುತ್ತಲೇ, "ಅಲ್ಲಲ್ಲ! ಈ ಮಹಾ ಪಾಪಿ ಯಾರನ್ನೂ ಯಾವ ವಿಪತ್ತಿನಿಂದಲೂ ಪಾರುಮಾಡಿದವನಲ್ಲ! ಬದಲಿಗೆ ಮಹಾಘಾತವನ್ನೇ ಉಂಟುಮಾಡಿದ ಮಹಾ ಪಿಶಾಚಿ!" ಎಂದು ದುಃಖೋದ್ವೇಗದಿಂದ ನುಡಿದನು.

ತಾಯಿ, "ಹಾ! ಇವರನ್ನು ನೋಡಿದರೆ, ನನಗೇನೋ ಒಂದು ವಿಧವಾದ ಸಂಕಟವಾಗುತ್ತಿದೆ. ಚಿನ್ನಾ! ಇಲ್ಲಿ ಸುಭದ್ರಾದೇವೀ ಎಂದು ಕೂಗಿದವರು ಯಾರಮ್ಮಾ?" ಎಂದಳು.

ವೀರರುದ್ರ, "ನಾನೇ ಕೂಗಿದೆನು. ನನ್ನ ಪತ್ನಿಯಾದ—ನನ್ನ ಪಟ್ಟದ ರಾಣಿಯಾದ—ನನ್ನ ಪ್ರೇಮಮಯಿಯಾದ—ನಿರಪರಾಧಿನಿಯಾದ—ಮಹಾ ಪರಿಶುದ್ಧಳಾದ—ಸಾಧ್ವೀಶಿರೋಮಣಿಯಾದ—ಸುಭದ್ರಾದೇವಿಯನ್ನು ನೆನೆನೆನೆದು ನಾನೇ ಹಾಗೆ ಕೂಗಿದೆನು" ಎಂದನು.

ತಾಯಿ ಬೆಚ್ಚಿಬಿದ್ದು, "ಇವರು ಯಾರು ಚಿನ್ನಾ!" ಎಂದಳು. ಚಿನ್ನಾ ದೇವಿ, ಪರಿಹಾಸದಿಂದ "ಅಮ್ಮಾ! ಇವರು ಯಾರುಗೊತ್ತೇ? ನನ್ನ ಅಪ್ಪನು ಯಾರೆಂದು ಕೇಳಿದರೆ, ನೀನು ಉತ್ತರವನ್ನೇ ಹೇಳುವುದಿಲ್ಲವಲ್ಲವೇ? ಇವ ರಿಂದು ಹೊಸದಾಗಿ ದೊರೆತ ನನ್ನ ಅಪ್ಪ! ತಂದೆ!" ಎಂದು ಹೇಳಿದಳು.

ತಾಯಿ ಅಚ್ಚರಿಯಿಂದ, "ಹಾಗೂ ಏನು ಹೇಳುವೆ!" ಎಂದಳು.

ಚಿನ್ನಾ, "ಅಮ್ಮಾ! ಇವರೀಗ ಸಂನ್ಯಾಸೀ ಭಿಕ್ಷುಕರಂತೆ ಕಂಡರೂ, ಸಾಮಾನ್ಯರೆಂದು ತಿಳಯಬೇಡ ಯಾರು ಗೊತ್ತೆ? ಮಹಾರಾಜಾ ಉದಯ ಗಿರಿ ರಾಜ್ಯಾಧೀಶರಾದ ವೀರರುದ್ರ ಗಜಪತಿಯವರು! ಏನೋ ವಿಧಿವಿಲಾಸ ದಿಂದ.........." ಎಂಬಷ್ಟರಲ್ಲಿ ತಾಯಿ, "ಹಾ! ವೀರರುದ್ರ ಗಜಪತೀ! ನನ್ನ ಸ್ವಾಮೀ! ಅಯ್ಯೋ.........." ಎಂದು ಚೀರುತ್ತಾ, ಚಿತ್ರ ಪ್ರತಿಮೆಯಂತೆ ಆನಂದ ಪರವಶಳಾಗಿಹೋದಳು.

"ಹಾ! ಸುಭದ್ರಾದೇವಿಯೇ!........ನಿನ್ನನ್ನು ಪತ್ನಿಯೆಂದು ಈ ಕೆಟ್ಟ ನಾಲಿಗೆಯಿಂದ ಹೇಗೆ ಹೇಳಲಿ? ಅಲ್ಲ, ದೇವೀ! ತಪ್ಪಿತು! ಈ ಪಾಪಿಯನ್ನು ಕ್ಷಮಿಸು!........" ಎಂದು ಪ್ರಲಾಪಿಸುತ್ತಾ ವೀರರುದ್ರನು ತೆವಳಿಕೊಂಡು ಸಮೀಪಿಸಿ ಸುಭದ್ರಾದೇವಿಯ ಪಾದತಲದಲ್ಲಿ ಬಿದ್ದನು!

ಚಿನ್ನಾದೇವಿಯೋ...............? ಅವಾಕ್!

## ೨೫

# ಮುದಗಲ್ ಮುತ್ತಿಗೆ

ಚಿನ್ನಾದೇವಿಯೇ ಚಿನ್ನಾದೇವಿ! ಕೃಷ್ಣದೇವರಾಯನ ಮನಸ್ಸೆಲ್ಲವೂ ಚಿನ್ನಾಮಯವಾಗಿ ಹೋಗಿದೆ. ಅವನು ಹೂವಿನ ಹಾಸಿಗೆಯಮೇಲೆ ಹೊರ ಳಾಡಿ, ಜಾಗರಣೆಯಿಂದಲೇ ರಾತ್ರಿಯನ್ನು ಬೆಳಗುಮಾಡಿದನು. ಪ್ರಾತಃ ಕೃತ್ಯಗಳೊಂದೂ ಇಂದು ಸರಿಯಾಗಿ ಸಾಗಲಿಲ್ಲ. ಸರ್ವಾಂಗಕ್ಕೂ ನುಣ್ಣಗೆ ತೈಲಲೇಪನಮಾಡಿಸಿಕೊಂಡು ಕುಸ್ತಿಯಾಡಿ ಮುದ್ಗರವನ್ನು ಬೀಸಿ, ಸುಸ್ನಾ ತನಾಗಿ ಪೂಜಾನಂತರ ಅಲ್ಪಾಹಾರ ಸ್ವೀಕರಿಸುವುದು ಅವನ ದಿನಂಪ್ರತಿಯ ಕ್ರಮ. ಇಂದು ತೈಲಲೇಪನವಿಲ್ಲ. ಕುಸ್ತಿ ಇಲ್ಲ; ಸ್ನಾನವೂ ಇಲ್ಲ; ಪೂಜೆಯೂ

ಇಲ್ಲ. ಅಲ್ಪಾಹಾರ ಸ್ವೀಕಾರಕ್ಕೂ ಮನವೇಇಲ್ಲ. ಬೇಗಬೇಗನೆ ತಿಮ್ಮರಸು ಮಂತ್ರಿಯನ್ನು ಕರೆಕಳುಹಿಸಿದನು. ಅಯುಕ್ತವೇಳೆಯಲ್ಲಿ ರಾಯನ ಕರೆ ಬಂದುದನ್ನು ಕಂಡು, ತಿಮ್ಮರಸನು ಅತ್ಯಾತುರನಾಗಿ ರಾಯನ ಸನ್ನಿಧಿಗೆ ಬಂದನು. ಕೈಗಳನ್ನು ಹಿಂದಕ್ಕೆ ಸೇರಿಸಿಕೊಂಡು, ಅತ್ತಿತ್ತ ತಿರುಗಾಡುವ ರಾಯನ ಉದ್ವೇಗಮೂರ್ತಿಯನ್ನು ಕಂಡು, ತಿಮ್ಮರಸನು ಅತ್ಯಾಶ್ಚರ್ಯ ದಿಂದ ಸ್ತಬ್ಧನಾಗಿ ನಿಂತನು. ಅವನನ್ನು ಕಾಣುತ್ತಲೇ, ರಾಯನು ತಟ್ಟನೆ ನಿಂತು, ಪಟಾಕಿಹೊಡೆವಂತೆ ದಡದಡನೆ ಹೇಳಲಾರಂಭಿಸಿದನು.

"ಅಪ್ಪಾಜೀ! ರಾಜಗೌರವವನ್ನು ಉಳಿಸಲಿಕ್ಕಾಗಿ ನೀವು ಚಿನ್ನಾದೇವಿ ಯನ್ನು ನನ್ನ ಕಣ್ಣೆದಿರಿನಿಂದ ಮರೆಸಿದಿ?. ನನ್ನ ಹೃದಯದಲ್ಲಿ ಕೆತ್ತಲ್ಪಟ್ಟಿ ರುವ ಅವಳ ಮೂರ್ತಿಯನ್ನು ಕೆಡಿಸಬೇಕೆಂದು—ಅಳಿಸಬೇಕೆಂದು ನೀವು ಪ್ರಯತ್ನ ಮಾಡಿದಿರಿ........"

ತಿಮ್ಮರಸನು ಅತ್ಯಾಶ್ಚರ್ಯಪಟ್ಟನು. ಒಮ್ಮಿಂದೊಮ್ಮೆ ರಾಯನು ಹೀಗೇಕೆ ಹೇಳುವನೆಂದು ತಿಳಿಯದೆ, ಏನೇನೋ ಶಂಕಿಸಲಾರಂಭಿಸಿದನು. ರಾಯನು ಹೇಳುತ್ತಲೇ ಇದ್ದನು. "........ಹೃದಯದಲ್ಲಿ ಮಹಾವಿಯೋಗ ದುಃಖಾಗ್ನಿಯನ್ನು ಉರಿಸಿದಿರಿ. ಇದೆಲ್ಲಾ ತಪ್ಪೆಂದು ನಾನು ಹೇಳಲಾರೆ. ರಾಜ್ಯಹಿತಾರ್ಥವಾಗಿ ನೀವು ಮಾಡಿದ ಆ ಕಾರ್ಯದ ಪರಿಣಾಮವು ಈಗ ನಿಮಗೇ ದುಃಖಕಾರಕವಾಗಿ ಹೊಡೆದುದನ್ನು ನೋಡಿ ಬಹಳ ಖೇದವಾಗು ತ್ತಿದೆ........"

"ಏನಾಯಿತು ರಾಜೇಂದ್ರಾ?"

"ನಿಮ್ಮ ಸಹೋದರನಾದ ವೀರ ಗೋವಿಂದರಾಜನನ್ನೇ ನುಂಗಿತು!'

ತಿಮ್ಮರಸು ಬೆರಗಾಗಿ, "ರಾಜಾ! ಏನನ್ನುವೆ?'' ಎಂದನು.

"ಮಂತ್ರೀಶ್ವರಾ! ನಮಗೆ ಮೋಸಮಾಡಿದ ಆ ಕಳ್ಳ – ನರಾಧಮ ಸೈಯದ್ ಮರ್ಕಾರನು ಗೋವಿಂದರಾಜನನ್ನು —ಕೊಂದನು! ಹತಮಾಡಿ ದನು!'' ತಿಮ್ಮರಸು ದುಃಖದಿಂದ, "ಹಾ! ಸಹೋದರಾ!" ಎಂದು ಕೂಗಿ ದನು. ರಾಯನು ಮತ್ತೂ ಹೇಳುತ್ತಿದ್ದನು, "ಚಿನ್ನಾದೇವಿಯ ಕಾರಣದಿಂದ ಕೊಂದನು! ಕಟುಕತನದಿಂದ ಕೊಂದನು! ಘೋರವಾದ ಅತ್ಯಾಚಾರಮಾಡಿ ಕೊಂದನು!"

"ಚಿನ್ನಾದೇವಿ ಏನಾದಳು ರಾಜಾ?''

"ಅವಳು ಕಾಡುಪಾಲಾಗಿ ಹೋದಳು! ಹೋಗಲಿ! ಮಂತ್ರೀಶ್ವರಾ! ಏಳಿ! ಆದರೆ, ಈ ಅತ್ಯಾಚಾರಕ್ಕೆ ಈಗಲೇ ಪ್ರತೀಕಾರಮಾಡಬೇಕು. ಆಮೇಲೆ ಮುಂದಿನಕಾರ್ಯ. ನಮ್ಮ ಇಡೀ ಸೇನೆಯ ಅರ್ಧಭಾಗವನ್ನು ಸಾಗಿಸಿಕೊಂಡು, ಈಗಲೇ ಮುದಗಲ್ಲಿನ ಕಡೆಗೆ ಹೊರಡಬೇಕು. ಉಳಿದರ್ಧವು ಉತ್ಕಲದಮೇಲೆ ಮುಂದಕ್ಕೆ ಸಾಗಲಿ! ಅಪ್ಪಾಜೀ! ನನ್ನ ಕೈಯಿಂದ ತಪ್ಪಿಸಿಕೊಂಡು, ಓಡಿಹೋಗಿ, ಆ ದುರ್ಗದೊಳಗೆ ಅಡಗಿಕೊಂಡಿರುವ ಆ ಪಾಪಿ—ನರಪಶುವನ್ನು ಹಿಡಿದು, ಆ ದುರ್ಗದೇವತೆಗೆ ಬಲಿಕೊಡಬೇಕು. ನಿಮ್ಮ ಸಹೋದರ ಹಂತಕನಾದ ಆ ಚೋರನ ಸೇಡನ್ನು ತೀರಿಸಿದಮೇಲೆಯೇ ಮುಂದಿನ ಕಾರ್ಯ!'' ಎಂದು ಹೇಳಿ, ರಾಯನು, ಪ್ರಧಾನ ಸೇನಾನಾಯಕನನ್ನು ಕರೆಸಿ, ಸೇನೆಯನ್ನು ವ್ಯವಸ್ಥೆಗೊಳಿಸಿ, ಮುದಗಲ್ಲಿನ ಕಡೆಗೆ ಧಾಳಿಯನ್ನೆಬ್ಬಿಸಲು ಆಜ್ಞಾಪಿಸಿಬಿಟ್ಟನು.

ಇನ್ನೇನು? ರಾಯನ ಆಜ್ಞೆಗೆ ಇದಿರೇ ಇಲ್ಲ. ಅಂದು, ಹೊತ್ತು ತಿರುಗುವುದರೊಳಗಾಗಿ, ರಾಯನ ಮಹಾಸೇನಾಸಾಗರದ ಸರೀ ಅರ್ಧ ಭಾಗವೂ ಪಶ್ಚಿಮದಿಕ್ಕಿಗೆ ತಿರುಗಿ, ಮುದಗಲ್ಲಿಗಭಿಮುಖವಾಗಿ ಪ್ರವಹಿಸಲಾರಂಭವಾಯಿತು. ರಾಯನೂ ತಿಮ್ಮರಸನೂ ಆ ಸೇನೆಯೊಂದಿಗೆ ಹೊರಟರು. ಉಳಿದ ಸೇನಾರ್ಧವು. ಪ್ರಮುಖನಾಯಕಗಣದೊಂದಿಗೆ ಉತ್ಕಲದಮೇಲೆ ಮುಂದಕ್ಕೆ ಸಾಗಿತು.

ರಾಯನ ಸೇನೆ ತನ್ನಮೇಲೇರಿ ಬರುವುದನ್ನು ಕಂಡು, ಸ್ವೈರಾದನು ಬೆದರಿ, ಸಹಾಯಾರ್ಥಿಯಾಗಿ, ಒಡೆಯನಾದ ಆದಿಲ್‌ಷಹನಿಗೆ ದೂತನನ್ನಟ್ಟಿದನು. ವಿದ್ಯಾನಗರದ ರಾಯನೊಂದಿಗೆ, ಕದನವನ್ನು ಕೆದರಲು, ಸಮಯ ಕಾಯುತ್ತಲೇ ಇದ್ದ ಆದಿಲ್‌ಷಹನಿಗೆ, ಇದೀಗ ಒಳ್ಳೆಯ ಸಮಯವೆಂದು ತೋರಿತು. ತನ್ನೊಡನೆ ಸ್ನೇಹಮಾಡಿಕೊಂಡಿದ್ದ ರಾಯನು, ತನಗೆ ಯಾವ ಸಂಗತಿಯನ್ನೂ ತಿಳಿಸದೆ, ಮುದಗಲ್ಲಿನಮೇಲೆ ಸಾಗಿಬರುವುದನ್ನು ನೋಡಿ, ಸ್ನೇಹಭಂಗಕ್ಕೆ ತನಗೆ ಒಳ್ಳೇ ಕಾರಣವು ಸಿಕ್ಕಿತೆಂದು ಹಿಗ್ಗಿದನು. ಅವನಾ

ಗಿಯೋ ಹಿಂದೆ ರಾಯನ ಸ್ನೇಹಭಂಗ ಮಾಡಿಕೊಂಡ ರಹಸ್ಯಕಾರ್ಯವು ರಾಯನಿಗೆ ತಿಳಿದಿಲ್ಲವೆಂದು ಯೋಚಿಸಿದನೋ ಏನೋ! ಅದೂ ಅಲ್ಲದೆ, ಈ ಸಂದರ್ಭದಲ್ಲಿ, ರಾಯನು ತನ್ನ ಸೆರೆಗೆ ಸಿಕ್ಕಿಬೀಳದೆ ಹೋಗಲಾರನೆಂದು ನಂಬಿದನು. ಏಕೆಂದರೆ, ರಾಯನು, ಅತ್ತ ಪ್ರತಾಪರುದ್ರನೊಡನೆಯೂ ಮಲೆತು ನಿಂತಿರುವುದರಿಂದ, ಮುದಗಲ್ಲಿನಮೇಲೆ ಸಾಗಿಬಂದ ಸೈನ್ಯವು, ಎಷ್ಟೆಂದರಷ್ಟೇ ಅಲ್ಲವೆ? ಹಾಗಿರಲು, ತಾನು ಮಹಾ ಸೇನೆಯೊಂದಿಗೆ ಅವನ ಹಿಂದಿನಿಂದಲೂ, ದುರ್ಗಸೈನಿಕರು ಮುಂದಿನಿಂದಲೂ, ಮೇಲುಭಾಗ ದಿಂದಲೂ, ಆಕ್ರಮಿಸಿಬಿಟ್ಟರೆ, ರಾಯನು ನಿಶ್ಚಯವಾಗಿ ತನ್ನ ಕೈಯಲ್ಲಿ ಸಿಕ್ಕಿ ಬಿದ್ದೇತೀರುವನೆಂದು ತಿಳಿದುಕೊಂಡು, ಅವನು ದೊಡ್ಡ ಸೇನೆಯೊಂದಿಗೆ ಮುದಗಲ್ಲಿನ ಕಡೆಗೆ ಸಾಗಿ ಬರಲಾರಂಭಿಸಿದನು.

ರಾಯನ ಸೇನೆ ಮುದಗಲ್ಲನ್ನು ಮುತ್ತುವುದರೊಳಗಾಗಿ, ಗ್ರಾಮ ನಿವಾಸಿಗಳೆಲ್ಲರೂ, ಹೆದರಿ ಊರುಬಿಟ್ಟು ಓಡಿಹೋದರು. ಮುದಗಲ್ ದುರ್ಗವು ಬಹಳ ಭದ್ರರೀತಿಯಿಂದ ಕಟ್ಟಲ್ಪಟ್ಟಿತ್ತು. ಎತ್ತರವಾದ ಕೋಟೆಯ ಗೋಡೆ ಯಿಂದಾವೃತವಾಗಿದೆ– ಆ ಗ್ರಾಮ. ಗ್ರಾಮದ ಕೇಂದ್ರದಲ್ಲಿ, ಕಡಿದಾದ ಗಂಡಶಿಲೆಯ ಉನ್ನತವಾದ ಬೆಟ್ಟ. ಆ ಬೆಟ್ಟದಮೇಲಿನ ಜೋಡುಕೋಟೆಗಳ ನಡುವೆ ದುರ್ಗವೊಂದು ನಿರ್ಮಿತವಾಗಿದ್ದಿತು. ಅಲ್ಲಿಯೇ ಸೈಯದ್ ಮಕಾರ ರನು, ಎರಡು ಸಾವಿರ ಮಂದಿ ಸೈನಿಕರೊಂದಿಗೆ ಹುದುಗಿಕೊಂಡಿದ್ದನು. ರಾಯನು ದುರ್ಗದ ಮುತ್ತಿಗೆಗೆ ಬರುವುದನ್ನು ಕೇಳಿದೊಡನೆಯೇ ಅವನು ದುರ್ಗದೊಳಗೆ ಹೇರಳ ಧನಧಾನ್ಯಗಳನ್ನು ಸಂಗ್ರಹಿಸಿಟ್ಟುಕೊಂಡುದರಿಂದ ಸುಮಾರು ಹತ್ತುಹದಿನೈದು ದಿನಗಳ ತನಕ, ಅವನಿಗೇನೂ ಭಯವಿರಲಾರ ದು. ದುರ್ಗವಾದರೋ, ಫಿರಂಗಿ ಮೊದಲಾದ ಸಲಕರಣೆಗಳಿಂದ ಕೂಡಿರು ವುದರಿಂದ, ಅಮಾನುಷಶಕ್ತಿಗೂ ಹಣಿಯದಷ್ಟು ದುರ್ಗಮವಾಗಿದೆ- ಆ ದುರ್ಗವೆಂದು, ಅವನಿಗೊಂದು ಧೈರ್ಯ. ಕಡೆಗೂ ಅಂತಹ ಕೆಟ್ಟಪ್ರಸಂ ಗವೇ ಪ್ರಾಪ್ತವಾದರೆ, ತಪ್ಪಿಸಿಕೊಂಡು ಪಲಾಯನಮಾಡಲು ರಹಸ್ಯವಾದ ಸುರಂಗಮಾರ್ಗವೂ ನಿರ್ಮಿತವಾಗಿತ್ತು. ಆದರೆ, ಅಂತಹ ಪ್ರಸಂಗವೇನೂ ಬರಲಾರದು. ಅತ್ತ ಅದಿಲ್ ಷಹನೂ, ಪ್ರಚಂಡದಂಡಿನೊಂದಿಗೆ ಬರುತ್ತಾನೆ. ಮತ್ತೊಂದು ಕಡೆಯಲ್ಲಿ ರಾಯನಿಗೆ ಪ್ರತಾಪರುದ್ರನ ಕಾಟ ಇದ್ದೇ ಇದೆ.

ಇತ್ತ ಮೇಲಿನಿಂದ ತಾವೂ ಆಯುಧವರ್ಷವನ್ನು ಕರೆಯುತ್ತಲೇ ಇದ್ದರೆ, ರಾಯನು ನಿಶ್ಚಯವಾಗಿಯೂ ಜಜ್ಜಿಹೋಗುವುದೇ ಸರಿ ಎಂದು ತಿಳಿದು ಮರ್ಕಾರನು ನಿರ್ಭೀತನಾಗಿದ್ದನು.

ಕೃಷ್ಣದೇವರಾಯನ ಹಿರಿಯರು, ಮುದಗಲ್ಲು, ರಾಯಚೂರು ಮೊದಲಾದ ದುರ್ಗಮದುರ್ಗಗಳನ್ನು ಸಾಧಿಸುವ ಪ್ರಯತ್ನ ಮಾಡಿಮಾಡಿ ಭಗ್ನ ಮನೋರಥರಾಗಿದ್ದರು. ಆ ಕಾರ್ಯವನ್ನು ತಾನು ಸಾಧಿಸಬೇಕೆಂದು, ರಾಯನು ಮೊದಲೇ ಆ ದುರ್ಗಗಳಮೇಲೆ ಕಣ್ಣಿಟ್ಟಿದ್ದನು. ಈಗ ಆಕಸ್ಮಿಕವಾಗಿ ಮುದಗಲ್ಲಿನ ಸರದಿ ಬಂದೇಬಂತು ಅದು ಸಂತೋಷ.

ಆದರೆ ಮುದಗಲ್‌ದುರ್ಗಾಕ್ರಮಣವು ನೆನೆಸಿದಷ್ಟು ಸುಲಭವಲ್ಲವೆಂದು ತೋರಿತು. ಸೈನಿಕರು ಹುರಿದುಂಬಿ ಲಗ್ಗೆ ಹತ್ತಿದಾಗಲೆಲ್ಲಾ, ಮೇಲಿನಿಂದ ಶೂಲ, ಶರ, ಫಿರಂಗಿ ಪಾಷಾಣಗಳ ಅಜಸ್ರವರ್ಷದಿಂದ ರಾಯನ ಸೈನಿಕರು ಪಟಪಟನೆ ಸಾಯಲಾರಂಭಿಸಿದರು. ಸುಭದ್ರವಾದ ಹೆಬ್ಬಾಗಿಲನ್ನು ಆನೆಗಳಿಂದ ಅಪ್ಪಳಿಸಿನೋಡಿದುದೂ ಆಯಿತು. ಒಮ್ಮೆ ಅಪ್ಪಳಿಸಿದ ಆನೆ, ಮತ್ತೊಮ್ಮೆ ಆ ಕೆಲಸಕ್ಕೆ ಮುಂದುವರಿಯಲೊಲ್ಲದೇಹೋಯಿತು. 'ಧಡಾಲ್ 'ಧಾಡಾಲ್' ಎಂದು ಸಿಡಿಲಿನಂತಹ ಸಪ್ಪಳವಾಯಿತೇ ಹೊರತು, ಬಾಗಿಲು ಬೇರೇ ಭೇದಿಸಿಹೋಗುವ ಲಕ್ಷಣವೇ ಕಾಣಲಿಲ್ಲ. ಹೀಗೆಯೇ ಪ್ರತಿದಿನವೂ ನಡೆಯಿತು. ಹದಿನೈದು ದಿನಗಳಾಗುವುವರೊಳಗಾಗಿ ರಾಯನ ಸೇನೆ ಅರ್ಧಕ್ಕರ್ಧವೇ ಉಳಿಯಿತು. ಹೀಗಾಗಿ ರಾಯನೂ, ಮಂತ್ರಿಯೂ ಚಿಂತಾಕ್ರಾಂತರಾಗಿ ಹೋದರು. ಅಷ್ಟರಲ್ಲಿ ಮೊದಲು ಗೆದ್ದಿದ್ದ ಬೆಲ್ಲಮುಕೊಂಡವು ಮರಳಿ ಪ್ರತಾಪರುದ್ರನ ಕಡೆಗೆ ಹೋಯಿತೆಂಬ ವಾರ್ತೆಯೂ ಬಂತು. ಹಾಗೂ ಇನ್ನೊಂದು ಕಡೆಯಿಂದ ದೊಡ್ಡಸೇನೆಯೊಂದಿಗೆ ಅದಿಲ್‌ಷಹನು ಕೃಷ್ಣಾನದಿಯ ಉತ್ತರತೀರಕ್ಕೆ ಬಂದು, ಬೀಡುಬಿಟ್ಟನೆಂಬ ಸಮಾಚಾರವೂ ತಿಳಿಯಿತು. ಅಷ್ಟು ಸೈನ್ಯದೊಂದಿಗೆ ಹೋರಾಡಲು, ರಾಯನ ಬಳಿಯಲ್ಲಿರುವ ಸೈನ್ಯವು ಸಾಲದು. ಹೊಸ ಸೈನ್ಯವನ್ನು ತರಿಸೋಣವೆಂದರೆ ಸಮಯವೂ ಇಲ್ಲ. ರಾಯನು ಚಿಂತೆಗೊಳಗಾಗಿಹೋದನು.

## ೨೬

# ಬೈರಾಗಿ

ಕೃಷ್ಣಾನದಿಯ ಉತ್ತರತೀರದಲ್ಲಿ ಇಸ್ಮಾಯಿಲ್ ಅದಿಲ್‌ಷಹನ ಪ್ರಚಂಡದಳವು ಇರುವೆಗಳಗುಂಪಿನಂತೆ ವಿಸ್ತಾರವಾದ ಭೂಭಾಗವನ್ನು ಆಕ್ರಮಿಸಿಕೊಂಡಿತ್ತು. ಮಧ್ಯೆ ಮಧ್ಯೆ ಮಂತ್ರೀಸೇನಾನಾಯಕರ ಡೇರೆಗಳು ಬೆಳ್ಳಗೆ ಕಾಣುತ್ತಿದ್ದವು. ಅಲ್ಲಲ್ಲಿ ಶೈಲಪಙ್ಕ್ತಿಯಂತೆ ತೋರುತ್ತಿರುವುದು— ಆನೆ ಕುದುರೆಗಳ ಸಾಲು. ಎಲ್ಲಕ್ಕೂ ಮಧ್ಯೆದಲ್ಲಿ ಮುತ್ತುರತ್ನಗಳ ಗೊಂಡೆಗಳಿಂದಲೂ, ಬೆಳ್ಳಿಬಂಗಾರದ ಜರಿಗಳಿಂದಲೂ ವಿಶೇಷವಾದ ವಸ್ತ್ರಾಲಂಕಾರದಿಂದಲೂ ಭವ್ಯಾಕಾರದಿಂದ ಬೆಳಗುತ್ತಿರುವುದೇ ಅದಿಲ್‌ಷಹನ ಡೇರೆ.

ಒಂದು ದಿನ ಇಳಿಹೊತ್ತಿನ ಸಮಯ. ಅದಿಲ್‌ಷಹನೂ ಮಂತ್ರಿಯಾದ ಸುಹ್ರಾಬ್ ನಬೀಖಾನನೂ ಒಂದೇ ರತ್ನಗಾದಿಯಮೇಲೆ ಒರಗಿಕೊಂಡು, ಏನೋ ಮಾತಾಡಿಕೊಳ್ಳುತ್ತಿದ್ದರು. ಇಬ್ಬರ ಬಾಯಿಯಲ್ಲಿಯೂ ಗುಡಿಗುಡಿಯ ನಳಿಗೆಗಳಿದ್ದುವು.

ಆಗ, ಕಾವಲುಗಾರನೊಬ್ಬನು ಅಲ್ಲಿಗೆ ಪ್ರವೇಶಿಸಿ, ಸುಲ್ತಾನನಿಗೆ ಕುರ್ನೀಸ್ ಮಾಡಿ, "ಹುಜೂರ್! ಒಬ್ಬ ಬೈರಾಗಿ ನಮ್ಮ ಸೇನೆಯ ಹೊರಭಾಗದಲ್ಲಿ ನಿಂತುಕೊಂಡು ಹುಜೂರರ ದರ್ಶನವನ್ನು ಬೇಡುತ್ತಾನೆ" ಎಂದನು.

ಅದಿಲ್‌ಷಹನು ಗುಡುಗುಡಿಯ ನಾಳವನ್ನು ಬಾಯಿಂದ ಕಿತ್ತು, ಪ್ರಶ್ನಾರ್ಥಕ ದೃಷ್ಟಿಯಿಂದ, ನಬೀಖಾನನ ಮುಖವನ್ನು ನೋಡಿದನು. ಖಾನನು ಕಾವಲುಗಾರನನ್ನು ನೋಡಿ, "ಏತಕ್ಕಂತೆ ಕೇಳಿದೆಯಾ?" ಎಂದನು.

ಕಾವಲುಗಾರ, "ತಿಳಿಯದು ಜನಾಬ್! ಬಹಳ ಅವಸರಪಡಿಸುತಿದ್ದಾನೆ, ಏನೋ ಮುಖ್ಯವಾದ ರಾಜಕಾರಣವಂತೆ" ಎಂದನು.

ಅದಿಲ್‌ಷಹನು ಮೀಸೆಯಮೇಲೆ ಬೆರಳಾಡಿಸುತ್ತಾ, "ಏನಾಗಿರಬಹುದು?" ಎಂದು ಮಂತ್ರಿಯನ್ನು ಪ್ರಶ್ನಿಸಿದನು.

ನಬೀ, ''ಅವನು ಹೇಗಿದ್ದಾನೆ?" ಎಂದು ಕಾವಲುಗಾರನನ್ನು ಕೇಳಿದನು.

ಕಾವಲುಗಾರ, ''ಹಿಂದೂ ಬೈರಾಗಿ, ಜನಾಬ್! ಮೈತುಂಬಾ ಬೂದಿ ಸಾದು ಬಳಿದುಕೊಂಡು, ಕಾವಿಯ ನಿಲುವಂಗಿಯನ್ನು ಧರಿಸಿಕೊಂಡಿದ್ದಾನೆ'' ಎಂದನು.

ನಬೀ, ''ಗಡ್ಡ, ಮೀಸೆ, ಜಡೆ, ಗಿಡೆ, ಎಲ್ಲಾ ತುಂಬಾ ಇದೆಯೇನು?" ಎಂದು ಪುನಃ ಕೇಳಿದನು.

ಕಾವಲು, "ಜೀ, ಜನಾಬ್!" ಎಂದು ಉತ್ತರವಿತ್ತನು.

ಆದಿಲ್‌ಷಹನು ತಲೆಯಾಡಿಸುತ್ತಾ, ''ಬಡಾ ಚೋರ್! ವೇಷಧಾರಿಯೇ ಸರಿ!" ಎಂದನು.

ನಬೀ, ''ಅರೆ! ಅವನ ಕೈಯಲ್ಲಿ ಏನಿದೆ?" ಎಂದನು.

ಕಾವಲು, ''ಬರಿಯ ಒಂದು ರುದ್ರಾಕ್ಷಿಮಾಲೆ ಇದೆ. ಬಗಲಲ್ಲಿ ಜೋಳಿಗೆ. ಇನ್ನೇನೂ ಇಲ್ಲ." ಎಂದು ಉತ್ತರವಿತ್ತನು.

ಆದಿಲ್‌ಷಹನೂ, ನಬೀಖಾನನೂ ಒಬ್ಬರನ್ನೊಬ್ಬರು ನೋಡಿಕೊಂಡು ತಲೆಯಲುಗಿಸಿಕೊಂಡರು. ಬಳಿಕ ನಬೀಖಾನನು, ''ಅವನನ್ನು ಇಲ್ಲಿಗೆ ಕರೆದುಕೊಂಡು ಬಾ" ಎಂದು ಕಾವಲುಗಾರನಿಗೆ ಆಜ್ಞಾಪಿಸಿದನು.

''ಜೀ! ಸರ್‌ಕಾರ್!" ಎಂದು ಸಲಾಂಮಾಡಿ, ಕಾವಲುಗಾರನು ಹೊರಟು ಹೋದನು.

ಇಬ್ಬರೂ ಇದಿರು ನೋಡುತ್ತಿರಲು, ಬೈರಾಗಿಯೊಬ್ಬನು ಆ ಮಂದಿರದೊಳಗೆ ಹೊಕ್ಕು, ನೆಲಕ್ಕೆ ಕೈಹಚ್ಚಿ, ಷಹನಿಗೆ ಕುರ್ನೀಸ್‌ಮಾಡಿ, ಅವನ ಅನುಮತಿಯನ್ನೆದುರು ನೋಡದೆಯೇ ಹೇಳಲಾರಂಭಿಸಿದನು:—

''ಷಹಾನ್‌ಷಹಾ! ಕೃಷ್ಣದೇವನಮೇಲಿನ ನನ್ನ ಹಗೆಯನ್ನು ತೀರಿಸಿಕೊಳ್ಳುವುದರ ಸಲುವಾಗಿ, ನಾನೀಗ ತಮ್ಮ ಸನ್ನಿಧಾನಕ್ಕೆ ಬರೋಣಾಯಿತು. ನಾನು........"

ನಬೀಖಾನ್, ''ನಿಲ್ಲಿಸು, ನಮಗೆಲ್ಲವೂ ಸರಿಯಾಗಿ ತಿಳಿಯಬೇಕು. ನೀನು ನಿಜವಾದ ಬೈರಾಗಿಯೋ, ವೇಷಧಾರಿಯೋ?"

ಬೈರಾಗಿ, "ವೇಷಧಾರಿ"

ನಬೀ, "ಹಾಗಾದರೆ, ನೀನು ಯಾರು?"

ಬೈರಾಗಿ, "ಖುದಾವಂದ್! ಅದನ್ನು ಮಾತ್ರ ಹೇಳಲಾರೆ. ಕ್ಷಮಿಸಬೇಕು"

ನಬೀಖಾನ್, "ಅದೇಕೆ?"

ಬೈರಾಗಿ, "ಅದನ್ನು ಈಗ ಹೇಳಿದರೆ, ಎಳ್ಳಿನಷ್ಟಾದರೂ ನಿಮಗೆ ಪ್ರಯೋಜನವಿಲ್ಲ. ಆದರೆ, ಕಾವೇರೀತೀರದ ಒಂದಾನೊಂದು ರಾಜಕುಟುಂಬಕ್ಕೆ ಸೇರಿದವನೆಂದು ಮಾತ್ರ ಈಗ ತಿಳಿಯೋಣಾಗಲಿ. ನನ್ನ ಮನಸ್ಸಿನಂತೆ ಕಾರ್ಯವಾದಮೇಲೆ, ನನ್ನ ವೃತ್ತಾಂತವನ್ನು ತಮಗೆ ತಿಳಿಸುವೆನು."

ಆದಿಲ್‌ಷಹನು ನಬೀಖಾನನನ್ನು ನೋಡಿ, ಕೊರಳಲುಗಿಸುತ್ತಾ, "ಓಹೋ! ಕೃಷ್ಣದೇವನು ಇವನ ರಾಜ್ಯವನ್ನು ಧಾಳೀತೆಗೆದಿರಬಹುದು. ಆದುದರಿಂದಲೇ, ಇವನು ಅವನಿಗೆ ಹಗೆಯಾಗಿರಬಹುದು" ಎಂದು ಬೈರಾಗಿಯನ್ನು ನೋಡಿ, "ಅಲ್ಲವೇ ಬೈರಾಗಿ?" ಎಂದು ಪ್ರಶ್ನಿಸಿದನು.

ಬೈರಾಗಿ, "ನಿಜ, ಖುದಾವಂದ್! ಆದರೆ, ಅವನು ನನ್ನ ರಾಜ್ಯವನ್ನು ಧಾಳೀತೆಗೆದುದು ಮಾತ್ರವಲ್ಲ, ನನ್ನ ವಂಶವನ್ನೇ ನಿರ್ಮೂಲಮಾಡಿದ್ದಾನೆ"

ಅದಿಲ್, "ಬೇಷಕ್! ನೀನು ದ್ವಾರಸಮುದ್ರದ ಗಂಗಾರಾಜನ ಕಡೆಯವನೇನು?" ಎಂದು ಕೇಳಿದನು.

ಬೈರಾಗಿ ಅಚ್ಚರಿಯಿಂದ, "ಆಃ! ಷಹಾನ್‌ಷಹಾ! ತಮ್ಮ ಊಹನಾಶಕ್ತಿಯನ್ನು ನೋಡಿ, ಆತ್ಯಾಶ್ಚರ್ಯವಾಯಿತು. ತಾವು ನನ್ನನ್ನು ಹಿಂದೆ ಎಂದಾದರೂ, ಕಂಡಿದ್ದೀರೇನು?" ಎಂದು ಕೇಳಿದನು.

ತನ್ನ ಊಹೆಯು ನಿಜವಾದುದನ್ನು ನೋಡಿ, ಷಹನು ಮುಗುಳ್‌ನಗೆ ನಗುತ್ತಾ, "ಅದು ಹಾಗಿರಲಿ, ಪಾಪ! ವೀರಧೀರ ಗಂಗರಾಜನು, ಕೃಷ್ಣದೇವನ ಕಾಟವನ್ನು ತಾಳಲಾರದೆ, ಕಾವೇರಿನದಿಯೊಳಗೆ ಬಿದ್ದು ಪ್ರಾಣತ್ಯಾಗಮಾಡಿದನಲ್ಲಾ!" ಎನ್ನಲು, ಬೈರಾಗಿ ಸಂತಾಪದಿಂದ, "ಆಃ! ಅದನ್ನು ನೆನೆದಂತೆ, ಈಗಲೂ ನನ್ನ ರಕ್ತವು ಕುದಿಯುತ್ತಿದೆ........", ಎಂದನು.

ಷಹ, "ಗಂಗರಾಜನಿಗೆ ನೀನೇನಾಗಬೇಕು?"

ಬೈರಾಗಿ, "ಅವನ ಹೆಂಡತಿಯ ಅಣ್ಣ–ಅವನ ಭಾವ" ಎಂದನು.

ಷಹ, "ಓಹೋ! ನಿನ್ನ ಹೆಸರು?" ಎಂದನು.

ಬೈರಾಗಿ, "ಖಾವಂದರು ಚಾತುರ್ಯದಿಂದ, ನನ್ನ ಸರ್ವವೃತ್ತಾಂತವನ್ನೂ ತಿಳಿಯೋಣಾಯಿತು. ಇನ್ನು ಬರಿಯ ನನ್ನ ಹೆಸರನ್ನು ತೆಗೆದುಕೊಂಡು ಮಾಡುವಿರೇನು? ಬೈರಾಗಿ ಎಂದೇ ತಿಳಿಯೋಣಾಗಲಿ!"

ಷಹ, "ಸರಿಯೆ, ಬೈರಾಗಿ ಈಗ ಹೇಳು. ನೀನು ಬಂದ ಕಾರ್ಯವೇನು?"

ಬೈರಾಗಿ, "ಆ ಬದ್ಮಾಷ್ ಕೃಷ್ಣದೇವನ ನಿರ್ಮೂಲನಕ್ಕಾಗಿ ತಮಗೆ ಬೇಕಾದ ಸಹಾಯಮಾಡುವುದೇ ನಾನು ಬಂದ ಕಾರ್ಯ."

ಷಹ, "ಏನು ಸಹಾಯಮಾಡುತ್ತೀ?"

ಬೈರಾಗಿ, "ಖಾವಂದ್! ನಾನೀಗ ಹೇಳುವ ಸಂಗತಿ, ತಮಗೆ ಬಹಳ ಸಂತೋಷವನ್ನುಂಟುಮಾಡುವುದಲ್ಲದೆ, ಇಂದು ರಾತ್ರಿ ಬೆಳಗಾಗುವುದರೊಳಗೆ, ತಮ್ಮ ಹಾಗೂ ನನ್ನ ಮನೋಭೀಷ್ಟಗಳು ಸಫಲವಾಗಿ ಬಿಡುವುವು"

ಷಹ, "ವಹವ್ವಾ! ಅಂತಹ ಸಂಗತಿ ಏನದು?"

ಬೈರಾಗಿ, "ಕೇಳೋಣಾಗಲಿ, ಖುದಾವಂದ್! ತಾವು ಸೈನ್ಯದೊಂದಿಗೆ ಕೃಷ್ಣಾನದಿಯನ್ನು ದಾಟುವುದಕ್ಕಿಂತ ಮುಂಚಿತವಾಗಿಯೇ ತಮ್ಮನ್ನು ಸದೆಬಡಿಯಲು, ಆ ಧೂರ್ತರಾಯನು, ಐದುಸಾವಿರ ಸೇನೆಯನ್ನು ಇಲ್ಲಿಗೆ ಕಳುಹಿಸಿದ್ದಾನೆ........"

ಷಹನು ಅಚ್ಚರಿಯಿಂದ, "ಇಲ್ಲಿಗೇ........!"

ಬೈರಾಗಿ, "ಹೌದು. ತಮಗೆ ಗೊತ್ತಿಲ್ಲವೇ?"

ಷಹ, "ಇಲ್ಲವಲ್ಲ!"

ನಬಿ, "ಈಗ ಆ ಸೈನ್ಯವು ಎಲ್ಲಿದೆ?"

ಬೈರಾಗಿ, "ಕೃಷ್ಣಾನದಿಯ ದಕ್ಷಿಣತೀರದ ದಟ್ಟಡವಿಯೊಳಗೆ ಅಡಗಿಕೊಂಡಿದೆ.

ಷಹ, "ಅರೇ ಬದ್ಮಾಷ್ !"

ಬೈರಾಗಿ, "ಖಾವಂದ್! ನಾನು ಈಗ ಈ ವಾರ್ತೆಯನ್ನು ತಮಗೆ ತಿಳಿಸದೇ ಇದ್ದರೆ, ಈ ದಿನ ರಾತ್ರಿ ತಮ್ಮ ಮೇಲೆ ಮಹಾವಿಪತ್ತು ಸಂಭವಿಸಿಬಿಡುತ್ತಿತ್ತು.

ಷಹ, "ಹೇಗದು? ಸರಿಯಾಗಿ ಹೇಳು."

ಬೈರಾಗಿ, "ಕೇಳೋಣಾಗಲಿ. ತಾವು ನಾಳೆಯ ದಿನ ಸೈನ್ಯದೊಂದಿಗೆ ನದೀದಾಟುವಿರೆಂಬ ವಾರ್ತೆ, ಆಗಲೇ ರಾಯನಿಗೆ ಮುಟ್ಟಿಬಿಟ್ಟಿತ್ತು. ಆ ತಂತ್ರಿ ತಿಮ್ಮರಸನೂ ಅವನ ಗೂಢಚಾರರೂ ಸಾಮಾನ್ಯರಲ್ಲವೆಂದು ತಿಳಿಯೋಣಾಗಲಿ. ನಡುದಾರಿಯಲ್ಲಿಯೇ ತಮ್ಮನ್ನು ಸದೆದು, ಓಡಿಸಲಿಕ್ಕಾಗಿ ಮೊದಲೇ ದೊಡ್ಡ ಸೈನ್ಯವು ಈ ಕಡೆಗೆ ಹೊರಟಿತ್ತು........"

ನಬಿ, "ಇದು ಯಾವುದೂ ನಮಗೆ ಗೊತ್ತೇ ಇಲ್ಲವಲ್ಲಾ?"

ಬೈರಾಗಿ, "ಹೇಗೆ ಗೊತ್ತಾದೀತು? ಆ ಸೇನೆ, ಯುದ್ಧಸಾಮಗ್ರಿಗಳನ್ನು ಅಡಗಿಸಿಕೊಂಡು ರಾತ್ರಿಯಲ್ಲಿ ಮಾತ್ರ ಪ್ರಯಾಣಮಾಡುತ್ತ, ಬೇರೆಬೇರೆ ಪಂಗಡವಾಗಿ ಹೊರಟಿರುವುದರಿಂದ ತಮಗೆ ಗೊತ್ತಾಗುವ ಕಾರಣವೇ ಇಲ್ಲ!"

ಷಹನು ಮೂಗಿನಮೇಲೆ ಬೆರಳಿಟ್ಟು ಹೇಳಿದನು, "ಹಾ! ಎಂತಹ ಮಾಯೆ!"

ನಬಿ, "ಆಮೇಲೆ?

ಬೈರಾಗಿ, "ಆಮೇಲೇನು? ತಮ್ಮ ಕಾರ್ಯರಚನೆ ಸರ್ವವೂ ಶತ್ರುವಿಗೆ ಗೊತ್ತಾಗಿ ಹೋಗಿದೆ. ಇಂದು ಈ ಅಮಾವಸ್ಯೆಯ ಮಧ್ಯರಾತ್ರಿಯಲ್ಲಿ ಆ ಸೈನಿಕರು ರಹಸ್ಯವಾಗಿ ನದೀ ದಾಟಿ, ತಮ್ಮಮೇಲೆ ಫಕ್ಕನೆ ಬೀಳುವರು. ಮುಂದಿನ ಗತಿ ಗೊತ್ತೇಇದೆ. ಆ ಕತ್ತಲೆಯಲ್ಲಿ ತಮ್ಮ ಸೈನಿಕರು ತಬ್ಬಿಬ್ಬಾಗಿ ಆಯುಧವನ್ನು ಹುಡುಕಿಕೊಂಡು ಸಿದ್ಧವಾಗುವುದರೊಳಗಾಗಿಯೇ ಹತರಾಗುವರು. ಇದಕ್ಕೆ ಸಂದೇಹವುಂಟೆ?

ಷಹನು ಕಣ್ಣರಳಿಸಿ ನುಡಿದನು, "ಎಂತಹ ಮೋಸವಿದು!"

ನಬಿ, "ಹಾಗಾದರೆ ಈಗಲೇ ಯುದ್ಧಕ್ಕೆ ಸಜ್ಜಾಗಿರುವಂತೆ ಸೈನಿಕರಿಗೆ ಆಜ್ಞಾಪಿಸಬೇಕಾಯಿತು."

ಬೈರಾಗಿ, "ತಡೆಯೋಣಾಗಲಿ. ಅದು ಸಂದೇಹದ ಕಾರ್ಯ. ನಿಶ್ಚಯ ಫಲಕಾರಿಯಾಗುವ ಕಾರ್ಯಕ್ಕೊಂದು ಉಪಾಯವನ್ನು ನಾನು ಆಗಲೇ ಹೂಡಿ ಬಂದಿದ್ದೇನೆ."

ಷಹ, "ಏನದು?"

ಬೈರಾಗಿ, "ಮೋಸಕ್ಕೆ ಮೋಸ! ಅವನ ಮೋಸವನ್ನು ಅವನಿಗೇ ತಿರುಗಿಸುವುದು."

ಷಹ, "ಹೇಗದು?"

ಬೈರಾಗಿ, "ಕೇಳೋಣಾಗಲಿ, ಖುದಾವಂದ್! ಈಗ ನಾಲ್ಕಾರುವರ್ಷಗಳಿಂದಲೂ, ನಾನು ನಾನಾ ದೇಶಗಳನ್ನು ಸಂಚರಿಸಿ, ಅನೇಕ ಮೂಲಿಕೆಗಳನ್ನು ಸಂಗ್ರಹಿಸಿದ್ದೇನೆ. ಷಹಾಷಹಾ! ರಾಯನನಿರ್ಮೂಲಕ್ಕೆ ಕೃತನಿಶ್ಚಿತನಾದ ನನ್ನ ಒಡನಾಡಿಯೊಬ್ಬನು ಆ ರಾಯನ ಸೈನ್ಯದಲ್ಲಿ ಸೇರಿಕೊಂಡಿದ್ದಾನೆ. ಅವನ ಮೂಲಕವಾಗಿ, ಪ್ರಗಾಢವಾದ ನಿದ್ರೆಯನ್ನುಂಟುಮಾಡುವಂತಹ ಮೂಲಿಕೆಯೊಂದು, ಈ ದಿನ ಪ್ರತಿಯೊಬ್ಬ ಸೈನಿಕನ ಹೊಟ್ಟೆಯೊಳಗೂ ಬೀಳುವಂತೆ ನಾನು ಏರ್ಪಡಿಸಿದ್ದೇನೆ."

ಷಹ, "ಅದು ಹೇಗೆ?"

ಬೈರಾಗಿ, "ಹೇಗೆಂದರೆ, ಈ ದಿನ ಸಂಜೆಯಲ್ಲಿ ಊಟಮಾಡಿ ಸುಮಾರು ನಟ್ಟಿರುಳಿನ ಸಮಯಕ್ಕೆ ನದೀ ದಾಟಬೇಕೆಂದು ಅವರ ಏರ್ಪಾಡು. ನನ್ನ ಯುಕ್ತಿಯಂತೆ ಇಂದು, ಸೀನೀರು ತುಂಬಿಸುವ ದೊಡ್ಡದೊಡ್ಡ ಗುಡಾಣಗಳೊಳಗೆಲ್ಲಾ ಆ ಚೂರ್ಣವು ಬೆರೆಸಲ್ಪಡುವುದು. ಮತ್ತೆ ಕೇಳುವುದೇನು? ಊಟ ಮುಗಿದ ಎರಡು ಗಳಿಗೆಗಳೊಳಗಾಗಿ, ಉಂಡ ಪ್ರತಿಯೊಬ್ಬನೂ, ತೂಕಡಿಕೆಯಿಂದ ಅಲ್ಲಲ್ಲೇ ಬಿದ್ದುಬಿಡುವನು. ಆಮೇಲೆ ಅರುವತ್ತು ಘಳಿಗೆಗಳ ತನಕವೂ ಮಲಗಿದ್ದವನು ಏಳುವುದಿಲ್ಲ. ತಾವು ಕತ್ತಲೆ ಕವಿದಮೇಲೆ, ಸೈನ್ಯವನ್ನು ನದೀದಾಟಿಸಿ, ಒಮ್ಮೆಗೇ ಅವರಮೇಲೆ ಬಿದ್ದುಬಿಟ್ಟರೆ, ತಮಗೆ ವಿಜಯವೆಂಬುದು ಕಟ್ಟಿಟ್ಟ ಗಂಟೇ ಸರಿ. ಆಮೇಲೆ ಒಂದೇ ಓಟಕ್ಕೆ ಮುದಗಲ್ಲಿನ ಕಡೆಗೆ ಸಾಗಿಹೋದರೆ, ಅಲ್ಲಿ ಅಲ್ಪ ಸೈನ್ಯದೊಂದಿಗೆ ದುರ್ಗವನ್ನು ಮುತ್ತಿ ವಿಶ್ರಮಿಸುತ್ತಿರುವ ಕೃಷ್ಣದೇವನು ಖಂಡಿತವಾಗಿ ತಮ್ಮ ಕಂಕುಳೊಳಗೆ ಸಿಕ್ಕು

ವನು. ಇದಕ್ಕಾಗಿ ಈ ದಿನ ರಾತ್ರಿಯನ್ನು ನೀವು ಕಳೆದುಬಿಟ್ಟರೆ, ಇಂತಹ ಸುದಿನವು ಮುಂದೆ ಬಾರದು!" ಎಂದನು. ಅದಿಲ್‌ಷಹನೂ ನಬೀಖಾನನೂ ಯೋಚನೆ ಮಾಡಲಾರಂಭಿಸಿದರು.

ಸ್ವಲ್ಪ ಹೊತ್ತಿನಲ್ಲಿ ನಬೀಖಾನನು, ಬೈರಾಗಿಯನ್ನು ಕುರಿತು, "ಬೈರಾಗಿ ಜೀ! ನೀವು ಹೇಳಿದುದೇನೋ ನಿಜವಾಗಿರಬಹುದು. ಆದರೆ, ನಮಗೆ ಈ ಸಹಾಯಮಾಡಿದುದರಿಂದ ನಿಮಗೆ ಆಗಬೇಕಾದ ಪ್ರತಿಫಲವೇನು ?"

ಬೈರಾಗಿ, "ಅದಕ್ಕೇನು? ಅದು ಹಾಗಿರಲಿ. ಮೊದಲು ಆ ಕಳ್ಳ ಕೃಷ್ಣ ದೇವನು ಸಿಕ್ಕಿಬೀಳಲಿ. ಅದು ನನ್ನ ಪ್ರಥಮೋದ್ದೇಶ. ಆಮೇಲೆ ಬೇಕಿದ್ದರೆ, ನನಗೆ ಆಗಬೇಕಾದ ಪ್ರತಿಫಲವನ್ನು ಪ್ರಕಟಮಾಡುವೆನು."

ಷಹನು ತಲೆಯಾಡಿಸಿ, ನಬೀಖಾನನ ಮುಖನೋಡಿ, "ವಜೀರ್‌ಜೀ! ಇದಕ್ಕೆ ನಿಮ್ಮ ಅಭಿಪ್ರಾಯವೇನು ಈಗ?" ಎಂದನು.

ನಬೀಖಾನನು ಸ್ವಲ್ಪ ಯೋಚಿಸಿ ಹೇಳಿದನು, "ಖುದಾವಂದ್ ! ಈ ಬೈರಾಗಿ ಹೇಳಿದುದೆಲ್ಲವೂ ನಿಜ. ಅವನ ಮಾತಿನಂತೆ ವರ್ತಿಸುವುದೇನೋ ಚೆನ್ನಾಗಿದೆ. ಆದರೆ, ಈ ಬೈರಾಗಿಯ ಮಾತನ್ನು ಸತ್ಯವೆಂದು ದುಡುಮ್ಮನೆ ನಂಬಿ ದುಡುಕುವುದು ಹೇಗೆಂದೇ ಸ್ವಲ್ಪ ಅನುಮಾನ."

ಬೈರಾಗಿ ಅದನ್ನು ಕೇಳಿ, ನಬೀಖಾನನನ್ನು ಕುರಿತು, "ಖುದಾವಂದ್! ತಮ್ಮ ಅನುಮಾನವು ಯಥಾರ್ಥವಾದುದೇ ಸರಿ. ಹೊಸಬನಾದ ನನ್ನನ್ನು ವಿಚಾರವಿಲ್ಲದೆ ನಂಬಿಬಿಡುವುದು ರಾಜನೀತಿಗೆ ವಿರುದ್ಧವೇನೋ ಹೌದು" ಎಂದು ಷಹನನ್ನು ಕುರಿತು, "ಷಹಾನ್‌ಷಹಾ! ತಮ್ಮ ಅನುಮಾನವನ್ನು ಮೊದಲು ಹೋಗಲಾಡಿಸುವುದು ನನ್ನ ಮೇಲಿನ ಭಾರ. ತಮ್ಮ ಪರಮ ವಿಶ್ವಾಸಿಯಾದ ಒಬ್ಬನನ್ನು ನನ್ನೊಂದಿಗೆ ಕಳುಹಿಸಿಕೊಡೋಣವಾಗಲಿ. ರಾಯನ ಸೈನ್ಯವು ಗಾಢನಿದ್ರಾಪರವಶವಾಗಿ ಬಿದ್ದ ಸಮಯವನ್ನು ಪರೀಕ್ಷಿಸಿ, ಅವನೇ ತಮಗೆ ಯಾವುದಾದರೊಂದು ಸಂಕೇತದಿಂದ ತಿಳಿಸಲಿ. ಆಗ ಯಾವ ಅನುಮಾನವೂ ಇರಲಾರದಲ್ಲವೆ?" ಎಂದನು.

ಷಹನು, ಮತ್ತೂ ಸಂದೇಹದಿಂದ, "ಇ........ಲ್ಲ. ಆದರೂ........" ಎಂದು ನಬೀಖಾನನ ಮುಖವನ್ನು ನೋಡಿದನು. ಅವನ ಸಂದೇಹವನ್ನರಿತು,

ಬೈರಾಗಿ, "ಷಹಾನ್‌ಷಹ! ಇನ್ನು ಸಂದೇಹಕ್ಕೇನಿದೆ? ಹೀಗೆ ಮಾತು ಮಾತಿಗೂ ಹೆಜ್ಜೆ ಹೆಜ್ಜೆಗೂ ಸಂದೇಹಪಡುವುದಾದರೆ ಮಹಾನುಭಾವರ ಕಾರ್ಯವು ಹೇಗೆ ಸಾಗೀತು? ನಮ್ಮ 'ಭಗವದ್ಗೀತೆ' ಎಂಬ ಗ್ರಂಥದಲ್ಲಿ 'ಸಂಶಯಾತ್ಮಾ ವಿನಶ್ಯತಿ' ಅಂದರೆ, ಯಾವಾಗಲೂ ಸಂಶಯಪಡುವವನು ನಾಶವಾಗಿ ಹೋಗುವನು ಎಂದು ಹೇಳಿದೆ. ಆದುದರಿಂದ, ವೃಥಾ ಸಲ್ಲದ ಸಂದೇಹವನ್ನುಂಟು ಮಾಡಿಕೊಳ್ಳದೆ ನನ್ನ ಮಾತನ್ನೊಮ್ಮೆ ನಿಮ್ಮವನಿಂದ ಪರೀಕ್ಷಿಸಿ, ವಿಜಯವನ್ನು ಸಂಪಾದಿಸಿರಿ," ಎಂದು ಉಪದೇಶಮಾಡಿದನು.

"ಖುದಾವಂದ್! ನಂಬಬಹುದು. ಇದರಲ್ಲೇನೂ ಅಂತಹ ಮೋಸವಿರುವಂತೆ ಕಾಣುವುದಿಲ್ಲ" ಎಂದನು ನಬೀಖಾನ್.

ಷಹ, "ಸರಿ, ಹಾಗಾದರೆ. ಈ ಬೈರಾಗಿಯೊಂದಿಗೆ ಯಾರನ್ನು ಕಳುಹಿಸೋಣ?"

ನಬೀ, "ಖುದಾವಂದ್! ಅಪ್ಪಣೆಯಾದರೆ, ನಾನೇ ಹೋಗಿ ಪರೀಕ್ಷಿಸಿ ಸಂಕೇತದಿಂದ ತಿಳಿಸುವೆನು"

ಷಹ, "ಬಹಳ ಸಂತೋಷ! ಈ ಮುಖ್ಯ ಕಾರ್ಯಕ್ಕೆ ನೀವೇ ತಕ್ಕವರು!"

## ೨೭

## ತುತ್ತೂರಿ

ಶ್ರಾವಣಮಾಸ, ಅಮಾವಾಸ್ಯೆ; ಹೊತ್ತು ಮುಳುಗಿ ಕತ್ತಲಾಗಿದೆ. ಆಕಾಶವು ಮೇಘದಿಂದ ಮುಚ್ಚಲ್ಪಡುತ್ತಾ ಇದೆ. ಕಗ್ಗತ್ತಲೆ ವೃದ್ಧಿಯಾಗುತ್ತಾ ಇದೆ. ಕೃಷ್ಣಾನದಿಯ ದಕ್ಷಿಣತೀರದಲ್ಲೊಂದು ಅಡವಿ ಪ್ರದೇಶ. ಅಲ್ಲೊಂದು ಉನ್ನತ ವೃಕ್ಷ ಛಾಯಾಂತರಾಳದಲ್ಲಿ ನಾಲ್ಕಾರು ಜನರು ಮೆಲ್ಲನೆ ಬಂದು ನಿಂತರು. ಅವರಲ್ಲಿ ಒಬ್ಬನು ಹಿಂದಣ ಪರಿಚ್ಛೇದದಲ್ಲಿ ನಮಗೆ ಪರಿಚಿತನಾಗಿರುವ ಆ ಬೈರಾಗಿ. ಇನ್ನೊಬ್ಬನು ಸೋಹ್ರಾಬ್ ನಬೀಖಾನ್, ಉಳಿದವರು ನಬೀಖಾನನ ಅನುಚರರು. ಬೈರಾಗಿ ಮೆಲ್ಲನೆ ನಬೀಖಾನನನ್ನು ಕುರಿತು, "ಖಾನ್ ಸಾಹೇಬ್! ಈ ಮರದ ತುದಿಯನ್ನು ಏರಿನೋಡಿದರೆ ಕೃಷ್ಣದೇವನ ಸೈನ್ಯದ ಸ್ಥಿತಿಗತಿ ಸ್ಪಷ್ಟವಾಗಿ ಕಾಣುವುದು" ಎಂದನು.

"ಸೈ ಸೈ ಏರೋಣ" ಎಂದು ನಬೀಖಾನನು ಮರದಮೇಲೆ ಏರಿದನು. ಬೈರಾಗಿಯೂ ಮೆಲ್ಲಮೆಲ್ಲನೆ ಏರಿದನು. ಉಳಿದವರು ಕೆಳಗೇ ಕಾವಲಾಗಿದ್ದರು.

ಬೈರಾಗಿಯೂ, ನಬೀಖಾನನೂ ಮರದ ತುದಿಯನ್ನೇರಿ, ಒಂದು ಕೊಂಬೆಯನ್ನು ಆಶ್ರಯಿಸಿಕೊಂಡು ನಿಂತರು. ಅಲ್ಲಿ ನಿಂತುನೋಡಿದರೆ, ಸುತ್ತಮುತ್ತಣ ಪ್ರದೇಶವು ಬಹು ದೂರದವರೆಗೆ ಗೋಚರವಾಗುತ್ತಿತ್ತು.

ಬೈರಾಗಿ, ಪೂರ್ವ ದಿಶಾಭಾಗದ ಭೂಪ್ರದೇಶವನ್ನು ಕೈನೀಡಿ ತೋರಿಸುತ್ತ, "ಅಲ್ಲಿ ನೋಡಿರಿ, ಖಾ಼ ಸಾಹೇಬ್!" ಎಂದನು.

ಸ್ವಲ್ಪ ದೂರದ ಅಡವೀಪ್ರದೇಶದಲ್ಲಿ, ನೂರಾರು ದೀವಟಿಗೆಗಳ ಬೆಳಕಿನಲ್ಲಿ ಅದೊಂದು ಸೈನ್ಯವು ಬೀಡುಬಿಟ್ಟಿರುವುದು ಗೋಚರವಾಯಿತು. ಬೈರಾಗಿ ಮತ್ತೊಮ್ಮೆ ತೋರಿಸುತ್ತಾ ಹೇಳಿದನು, "ಹಾ! ಹಾ! ಈಗ ನೋಡಿರಿ ಖಾ಼ಸಾಹೇಬ್! ನಾವು ಮರವನ್ನೇರಿದ ಸಮಯವು ಸರಿಯಾದ ಕಾಲ; ನೋಡಿದಿರಾ! ನನ್ನ ಮೂಲಿಕಾಪ್ರಭಾವದಿಂದ, ಒಬ್ಬೊಬ್ಬರೇ ಮುಗ್ಗರಿಸಿ ಬೀಳುತ್ತಿರುವುದನ್ನು?"

ನಬೀಖಾನನು ಪರೀಕ್ಷಿಸಿದನು. ನಿಜ. ಆ ಸೇನಾಸಮೂಹದಲ್ಲಿ ಒಬ್ಬೊಬ್ಬರೇ ವಾಲುತ್ತಾ ಮುಗ್ಗರಿಸಿ, ಹೆಂಡಕುಡುಕರಂತೆ ಎಡವುತ್ತಾ ತಡವುತ್ತಾ, ಒಬ್ಬರ ಮೇಲೊಬ್ಬರು ಬೀಳುತ್ತಿರುವಂತೆ ತೋರಿತು. ಬಿದ್ದವರು ಮತ್ತೆ ಏಳಲಿಲ್ಲ. ಅವರು ಬೀಳುವಾಗ ಅವರ ಕೈಯಲ್ಲಿರುವ ಖಡ್ಗಾದಿ ಆಯುಧಗಳು ಝುಣಕ್ ಝುಣಕ್ಕೆಂದು ಬೀಳುತ್ತಿದ್ದುವು. ದೀವಟಿಗೆಯವರೂ ಬೀಳಲಾರಂಭಿಸಿದರು; ದೀವಟಿಗೆಗಳೂ ಬಿದ್ದುವು; ಚಲ್ಲಾಪಿಲ್ಲಿಯಾಗಿ ಬಿದ್ದುವು. ಕೆಲವರ ಬಟ್ಟೆಬರೆಗಳಿಗೂ, ಬೆಂಕಿಹತ್ತಿಕೊಂಡು. ದೊಡ್ಡ ಉರಿ ಎದ್ದು ಬಿಟ್ಟಿತು. ಕೆಲವರು ಸಿಕ್ಕಾಪಟ್ಟೆ ಓಡಲಾರಂಭಿಸಿದರು. ಆನೆಕುದುರೆಗಳೂ ಗೀಳಿಡುತ್ತಾ, ಹೇಂಕರಿಸುತ್ತಾ ಸಿಕ್ಕಲ್ಲಿ ಓಡಿದುವು. ದೊಡ್ಡದೊಂದು ಹುಯ್ಯಲು ಎದ್ದಿತು. ಸ್ವಲ್ಪ ಹೊತ್ತಿನಲ್ಲಿ, ಅದೂ ಶಾಂತವಾಗತೊಡಗಿತು. ಎಲ್ಲರೂ ಬಿದ್ದಂತಾಯಿತು. ದೀವಟಿಗಳೆಲ್ಲವೂ ನಂದಿಹೋದವು. ಉರಿಯೂ ತಗ್ಗಿತು. ಹುಯ್ಯಲೂ ಪೂರಾನಿಂತಿತು. ಸುಮಾರು ಒಂದು ಗಳಿಗೆಯೊಳಗೆ ಇಷ್ಟೆಲ್ಲಾ

ನಡೆಯಿತು. ಕತ್ತಲೆಯಲ್ಲಿ ಮತ್ತೇನೂ ಕಾಣಿಸಲಿಲ್ಲ. ಮತ್ತೇನೂ ಕೇಳಿಸಲಿಲ್ಲ, ನಡುನಡುವೆ ಗಜತುರಗಗಳು, ಗೀಳಿಡುವ, ಹೇಂಕರಿಸುವ ಬೊಬ್ಬೆ ಮಾತ್ರ ಹೊರಟು ಬರುತಿತ್ತು. ಇನ್ನು ಅದೂ ನಿಂತಿತು. ನಿಶ್ಶಬ್ದವಾಯಿತು. ವಾತಾವರಣವು ಶಾಂತವಾಯಿತು. ಸಮೀಪದಲ್ಲಿಯೇ ತುಂಬಿ ಹರಿಯುವ ಕೃಷ್ಣಾ ನದಿಯೊಂದು ಝೋರ್ರೆಂದು ಮೊರೆಯುತಿದ್ದಿತು.

ಬೈರಾಗಿ ಎಂದನು, "ನೋಡಿದಿರಾ, ಖಾನ್‌ಸಾಹೇಬ್! ಇನ್ನು ಅರುವತ್ತು ಗಳಿಗೆಯ ತನಕವೂ, ಈಗ ಬಿದ್ದಿರುವ ಆ ಸೈನ್ಯವು ಏಳುವುದೇ ಇಲ್ಲ. ಈಗಲಾದರೂ ನನ್ನ ವಚನದಲ್ಲಿ, ನಂಬುಗೆ ಹುಟ್ಟಿತಲ್ಲವೇ?"

"ಭಲೇ! ಅಚ್ಛಾ ಬೈರಾಗಿಜೀ!"

"ಹಾಗಾದರೆ, ಇನ್ನು ಕೆಳಗಿಳಿದು, ಮುಂದಿನ ಕಾರ್ಯಭಾಗವನ್ನು ಪೂರ್ತಿಮಾಡೋಣ."

"ಅಚ್ಛಾ!"

ಇಬ್ಬರೂ ವೃಕ್ಷಾಗ್ರದಿಂದ ಕೆಳಗಿಳಿದರು. ಹಾಗೂ ಅನುಚರಸಮೇತರಾಗಿ, ಆ ನದೀತಟದಲ್ಲಿಯೇ ಸುಮಾರು ಅರ್ಧಮೈಲು ಮುಂದಕ್ಕೆ ನಡೆದು, ಅಲ್ಲಿ ಇನ್ನೊಂದು ಅಂಧಕಾರ ಬಂಧುರವಾದ ವಿಶಾಲ ವೃಕ್ಷದಡಿಯಲ್ಲಿ ನಿಂತರು. ಆ ಸ್ಥಳವೇ ಕೃಷ್ಣಾನದಿಯನ್ನು ದಾಟುವ ಸುಗಮವಾದ ಕಡವು.

ಅಲ್ಲಿ ನಿಂತು ನಬೀಖಾನನು ಅನುಚರನೊಬ್ಬನ ಕೈಯಲ್ಲಿದ್ದ ತುತ್ತೂರಿಯನ್ನು ತೆಗೆದುಕೊಂಡು ಗಟ್ಟಿಯಾಗಿ ಊದಿದನು. ತೀಕ್ಷ್ಣವಾದ ತುತ್ತೂರಿ ನಿನಾದವು ವಿಶಾಲ ನಿಶ್ಶಬ್ದ ವಾತಾವರಣವನ್ನು ಭೇದಿಸಿಕೊಂಡು ಬಹು ದೂರದತನಕ ಕೇಳಿಸಿತು. ನಬೀಖಾನನು, ಐದುನಿಮಿಷ ಊದಿದಮೇಲೆ ನಿಲ್ಲಿಸಿದನು.

ಕೂಡಲೇ ತುತ್ತೂರಿಯ ಸಂಕೇತಧ್ವನಿಗೆ, ಪ್ರತ್ಯುತ್ತರ ರೂಪದಲ್ಲಿ ನದಿಯ ಉತ್ತರ ತೀರದಿಂದಲೂ ತುತ್ತೂರಿಯ ನಿನಾದವು ಹೊರಟು ಬಂದಿತು. ಆ ದ್ವಿತೀಯ ತುತ್ತೂರಿಯ ಶಬ್ದವು ನದಿಯ ಉತ್ತರತೀರದಲ್ಲಿ ಸೇನಾಸಹಿತನಾಗಿ ನದೀ ತರಣಮಾಡಲು ಸಿದ್ಧನಾಗಿದ್ದ ಅದಿಲ್‌ಷಹನ ಪ್ರತಿ ಸಂಕೇತಧ್ವನಿಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

## ೨೮

# ಪಲಾಯನ

ಬೈರಾಗಿಯೇ ಮುಂತಾದವರು ಯಾವ ಮರದಬುಡದಲ್ಲಿ ನಿಂತಿದ್ದರೋ ಆ ಮರದ ಕೊಂಬೆಯೊಂದು ಅಲುಗಿದ ಸದ್ದಾಯಿತು. ಉತ್ತರಕ್ಷಣದಲ್ಲಿ, ಹನ್ನೆರಡು ಮಂದಿ ಖಡ್ಗಪಾಣಿಗಳು ಧುಡುಂಮನೆ ಕೆಳಗೆ ಹಾರಿ, ನಬೀಖಾನನನ್ನು ಆಕ್ರಮಣಮಾಡಿ ನಿಂತರು.

ಚಕಿತನಾಗಿ ನಬೀಖಾನನು "ಅರೆ!........" ಎಂದು ತನ್ನ ಒರೆಯಿಂದ ಕತ್ತಿಯನ್ನು ಹಿರಿದನು. ಅವನ ಅನುಚರರೂ ಹಿರಿದರು. ಬೈರಾಗಿ ಫಕ್ಕನೆ ನಬೀಖಾನನ ಕೈಯಲ್ಲಿದ್ದ, ತುತ್ತೂರಿಯನ್ನು ಕಸಿದುಕೊಂಡನು.

ಮರದಿಂದ ಕೆಳಗೆ ಧುಮುಕಿದವರು, ಹಿಂದೂ ದಳವಾಯಿಗಳು. ಅವರ ಮುಖ್ಯಸ್ಥನು ಬೈರಾಗಿಯನ್ನು ಕುರಿತು, "ರೂಪಸಿಂಗ್‌ಜೀ! ಮುಂದಿನ ಕಾರ್ಯಕ್ಕೆ ಅಪ್ಪಣೆಯಾಗಲಿ!" ಎಂದನು.

ಕತ್ತಿಗಳು ಆ ಕತ್ತಲೆಂೂಲ್ಲಿ ಮಿಂಚುತ್ತಾ ಒಂದನ್ನೊಂದು ಖಣಖಣನೆ ತಾಡಿಸುತ್ತಿದ್ದವು.

ಬೈರಾಗಿ ವೇಷಧಾರಿಯಾದ ರೂಪಸಿಂಗನು, ದರ್ಪಸ್ವರದಿಂದ, "ಈ ದುರುಳನನ್ನು ಕೂಡಲೇ ಸೆರೆಹಿಡಿಯಿರಿ" ಎನ್ನಲು, ನಬೀಖಾನನು ಕರ್ಕಶ ಸ್ವರದಿಂದ, "ದಗಲ್ಬಾಜೀ! ಬೈರಾಗೀ!" ಎಂದು ಗರ್ಜಿಸುತ್ತಾ ರೂಪಸಿಂಗನ ಮೇಲೆ ಕತ್ತಿಯನ್ನು ಬೀಸಿದನು.

"ಖಬರ್ದಾರ್ !" ಎಂದು ಕೂಗಿ ರೂಪಸಿಂಗನು, ಹಿಂದಕ್ಕೆ ನೆಗೆದು, ತನ್ನ ನೀಳವಂಗಿಯ ಮರೆಯಿಂದ, ದೀರ್ಘಕರವಾಲವನ್ನು ಸೆಳೆದು, ಅವನ ಕತ್ತಿಯ ಪೆಟ್ಟನ್ನು ತಡೆದು, ಗರ್ಜನಾ ಧ್ವನಿಯಿಂದ, "ನಬೀಖಾನ್ ! ಸುಮ್ಮನಿರು, ಕಾದಾಡಿ ಪ್ರಯೋಜನವಿಲ್ಲ" ಎಂದು ಎಚ್ಚರಿಸಿ, ಒಮ್ಮೆ ಸಿಳ್ಳು ಹಾಕಿದನು. ಆ ಹನ್ನೆರಡುಮಂದಿ ದಳವಾಯಿಗಳೂ ನಬೀಖಾನ್ ಮುಂತಾದವರಮೇಲೆ ಹಾಯುತ್ತಿರಲು, ಹಿಂದೆ ಕಗ್ಗತ್ತಲೆಯ ರಾಶಿಯಂತೆ, ಕಾಣುವ ಮರಗಿಡಗಳ ಗುಂಪಿನ ಕಟ್ಟಡವಿಯೊಳಗಿನಿಂದ, ಪ್ರಬಲ ಪ್ರವಾಹದಂತೆ, ಆಗ

ಶಿತರಾದ ರಾಯನ ಸೈನಿಕರು, ಬಿಚ್ಚುಗತ್ತಿಗಳನ್ನು ಝಳಪಿಸುತ್ತಾ ಧಡಧಡನೆ ಬಂದು ನಬೀಖಾನನನ್ನೂ ಅವನ ಅನುಚರರನ್ನೂ ಸೆರೆಹಿಡಿದುಬಿಟ್ಟರು. ಬಳಿಕ ಸುಮ್ಮನೆ ನಿಂತಿದ್ದ ರೂಪಸಿಂಗನು ಸೇನಾಧೀಶನನ್ನು ಕುರಿತು, "ಜಯ ರಾಮ್‌ಜೀ! ಈಗ ಸಂಸಿದ್ಧರಾಗಿರೋಣವಾಗಲಿ! ಅಗೋ! ನದೀಜಲದಮೇಲೆ ಶತಸಂಖ್ಯೆಯ ದೋಣಿಗಳು ತೇಲುತ್ತಾ ಈ ದಡಕ್ಕೆ ಬರುವಂತಿವೆ. ಇನ್ನು ತೊಡಗಬಹುದು!" ಎಂದನು.

"ಅಪ್ಪಣೆ, ರೂಪಸಿಂಗ್‌ಜೀ!" ಎಂದು ಜಯರಾಮನು, "ಜೈ ಭುವ ನೇಶ್ವರಿ! ಜೈ ವಿರೂಪಾಕ್ಷ!" ಎಂದು ಕೂಗಲು ಸುತ್ತಮುತ್ತಲಿನ ಅಡವಿ ಯೊಳಗಿನಿಂದ ಗಗನ ಭೇದಕವಾದ ಮಹಾ ಜಯಸ್ವಾನವು ಹೊರಟಿತು.

ಅದಿಲ್‌ಷಹನ ಸೇನೆಯಲ್ಲಿ ಅರ್ಧಕ್ಕೂ ಮಿಗಿಲಾದ ಭಾಗವು ಶತಸಂ ಖ್ಯೆಯ ದೋಣಿಗಳಲ್ಲಿ ನದೀಜಲದಮೇಲೆ ತೇಲಾಡುತ್ತಿತ್ತು. ಎಷ್ಟೋ ವೀರರು ಕುದುರೆಗಳೊಂದಿಗೆ ನೀರಿನಲ್ಲಿ ಧುಮುಕಿ ನೀರಿನ ಸೆಳೆತವನ್ನೂ ಲೆಕ್ಕಿ ಸದೆ ಈಜಾಡುತ್ತಾ ಬರುತ್ತಿದ್ದರು. ಮತ್ತೆ ಕೆಲವರು ಆನೆಗಳಮೇಲೆ ಕುಳಿತು ನದೀತರಣ ಮಾಡುತ್ತಿದ್ದರು. ಈ ರೀತಿಯಾಗಿ ಸೇನೆಗೆ ಸೇನೆಯೇ ನದೀ ದಾಟುವ ಸಂಭ್ರಮದಲ್ಲಿ ತೊಡಗಿತ್ತು. ಆಗಲೇ ಕಾಲನ ಘೋರನಿನಾದ ದಂತೆ ರಾಯನ ಸೇನೆಯ ಮಹಾಜಯಸ್ವಾನವು ಅವರ ಕರ್ಣದೊಳಗೆ ಕಾಸಿದ ಎಣ್ಣೆಯನ್ನು ಸುರಿಸಿತು; ನೀರಿನ ಮಧ್ಯದಲ್ಲಿದ್ದರೂ ಬಾಯಿ ಒಣಗಿಹೋ ಯಿತು. ತೀರದಲ್ಲಿಯೂ, ತೀರದ ಗುಡ್ಡದಿನ್ನೆಗಳಲ್ಲಿಯೂ ನೂರಾರು ಕತ್ತಿ ಗಳು ಝಳತ್ಕರಿಸಿದುವು; ರಾಯನ ಸೇನಾಪಂಜು ಮುಸಕುಹಾಸಕಾಗಿ ಗೋಚ ರವಾಯಿತು. ಸರಿ, ಇನ್ನು ಸರ್ವನಾಶವಲ್ಲದೆ ಬೇರೇನು? ಸ್ಥಳಸಮಾಧಿ, ಜಲಸಮಾಧಿ ಎರಡೂ ಒಮ್ಮೆಗೆ ಸೇರಿ ಬಂದಂತಾಯಿತೆಂದು ಅದಿಲ್‌ಷಹನ ಸೈನಿಕರು ತಮ್ಮನ್ನೇ ಹಳಿದುಕೊಂಡರು. ಆದರೂ ಸೈನಿಕರಲ್ಲವೇ? ಹೋರಾ ಡದೇ, ಸಾಯುವುದೇಕೆಂದು ಅವರು ಆಯುಧವನ್ನು ಸರಿಪಡಿಸಿ ಸನ್ನದ್ಧ ರಾಗುವಷ್ಟರಲ್ಲಿ, ದಕ್ಷಿಣತೀರದ ವೃಕ್ಷ, ಬಂಡೆ, ಗುಡ್ಡದಿನ್ನೆಗಳ ಮೇಲಿನಿಂದ ಒಂದೇ ಸವನೆ ಮಳೆಯಂತೆ ಕಲ್ಲುಗಳೂ, ಬಾಣಗಳೂ ನದೀಜಲ ಮಧ್ಯದಲ್ಲಿ ಸಿಕ್ಕಿಬಿದ್ದಿರುವ ಸೈನಿಕರಮೇಲೆ ಬೀಳಲಾರಂಭಿಸಿದುವು. ಒಮ್ಮೆಗೇ ದೊಡ್ಡ ಗದ್ದಲವೆದ್ದಿತು. ಒಂದು ಕಡೆ ರಾಯನ ಸೇನೆಯ ಜಯಘೋಷ, ಇನ್ನೊಂದು

ಕಡೆ ರಾಯನ ಶತ್ರು ಸೈನಿಕರ ಆರ್ತನಾದ. ಬಾಣಗಳ ಸುಯ್—ದನಿ! ಕಲ್ಲುಗಳ ಗಡಕ್ - ಗಡಕ್ ಧ್ವನಿ; ನೀರಿನಲ್ಲಿ ಮುಳುಗುವವರ ಗುಳುಂ, ಬೊಳೊಂ ಎಂಬ ಸಪ್ಪಳ. ಅನೇಕರ ಅವಯುವಗಳಲ್ಲೆಲ್ಲಾ ಚೂಪಾದ ಅಂಬಿನ ಮೊನೆಗಳು ನಾಟಿದವು. ಕಲ್ಲುಗಳು ಬಿದ್ದುವು. ದೋಣಿಗಳು ತಬ್ಬಿಬ್ಬಾಗಿ ಗಿರ್ರಗಿರ್ರನೆ ತಿರುಗಿ ಹೊಯ್ಲಲ್ಲಿ ಸಿಕ್ಕಿ, ಮುಗುಚಿ ಮಡುವಿನಲ್ಲಿ ಮುಳುಗಿ—ಪ್ರವಾಹಕ್ಕೆ ಸಿಕ್ಕಿ—ಸಿಕ್ಕಸಿಕ್ಕಲ್ಲಿ ಓಡಿದುವು. ಇನ್ನೆಷ್ಟೋ ಬಂಡೆಗಳಿಗೆ ತಗಲಿ ಚಾರುಚೂರಾದುವು. ಆನೆಕುದುರೆಗಳ ಗತಿಯನ್ನಂತೂ ಹೇಳಲಸಾಧ್ಯ. ಅವುಗಳು ಬೆದರಿ, ಕೂಗಿ ದಿಕ್ಕಾಪಾಲಾಗಿ ಓಡಿದುವು. ಎಷ್ಟೋ ಪ್ರಾಣಿಗಳು ಕೃಷ್ಣಾರ್ಪಣವಾದುವು. ಎಲ್ಲಿಯೋ ತಪ್ಪಿ ಕೆಲವರು ದಕ್ಷಿಣತೀರವನ್ನು ಸೇರಿದರೂ, ಅಲ್ಲಿ ಸಿದ್ಧರಾಗಿದ್ದ ರಾಯನ ಸೈನಿಕರು ಕತ್ತಿ ಎತ್ತಿದವರನ್ನು ತುಂಡು ಮಾಡಿದರು. ಕತ್ತಿಬಿಟ್ಟು ಆರ್ತನಾದಮಾಡಿದವರನ್ನು ಸೆರೆಹಿಡಿದರು. ಒಟ್ಟಾರೆ ನದಿಯಮೇಲೂ, ದಡದಮೇಲೂ ಅಲ್ಲೋಲ ಕಲ್ಲೋಲ.

ಅಷ್ಟರಲ್ಲಿ, ಕಾರ್ಮೋಡದಿಂದ ಮುಚ್ಚಿಹೋದ ಆಕಾಶವು ದೊಡ್ಡ ಮಳೆಯನ್ನು ಸುರಿಸಲಾರಂಭಿಸಿಬಿಟ್ಟಿತು: ಇನ್ನು ಕೇಳುವುದೇನು?

ಹೃದಯಭೇದಕವಾದ ಆ ಅಲ್ಲೋಲಕಲ್ಲೋಲವನ್ನು ಕೇಳಿ, ನದೀತರಣಕ್ಕೆ ಸಿದ್ಧನಾಗಿ ನಿಂತಿದ್ದ ಅದಿಲ್‌ಷಹನು, "ಅರೆ—ದಗಲ್ಬಾಜ್!" ಎಂದು ಪಾವಡರ್ದ ಪಂದೆಯಂತೆ, ಕಕ್ಕಾಬಿಕ್ಕಿಯಾಗಿ ನಿಂತನು. ಆಗ ಕೆಲವು ದೋಣಿಗಳು, ತಪ್ಪಿಸಿಕೊಂಡು ಹಿಂದಕ್ಕೆ ಬಂದುವು. ಅದರಲ್ಲಿದ್ದವರು ಅತ್ತ ಸಂಭವಿಸಿದ ಮಹಾ ನಾಶವನ್ನು ತಿಳಿಸಿದರು. ಆಗಲೇ, ಅದಿಲ್‌ಷಹನಿಗೆ, ತಾನು ಆ ತುಂಟ ಬ್ರೈರಾಗಿಯಿಂದ ಸಂಪೂರ್ಣ ಮೋಸಹೋದೆನೆಂದು ತಿಳಿಯಿತು. ಮಾಡುತ್ತಾನೇನು? ಏನುಮಾಡುವುದೆಂದು ಯೋಚಿಸುವುದರೊಳಗೆ, ಆ ಪ್ರದೇಶದಲ್ಲಿರುವ ತನ್ನ ಸೇನೆಯು ಹಿಂಭಾಗದಲ್ಲಿಯೂ, ಮಳೆಯ ಅಬ್ಬರದೊಂದಿಗೆ ಸೇರಿಕೊಂಡು, "ಜೈ ಭುವನೇಶ್ವರೀ!" ಎಂಬ ರಾಯನ ಸೇನೆಯ ಘನಗರ್ಜನೆ ಕೇಳಬಂತು. ಮತ್ತೂ ಹೊರಡುತ್ತಲಿತ್ತು, "ದಗಲ್ಬಾಜ್........ದಗಾ ದಗಾ!........" ಎಂಬ ಆರ್ತನಾದ! ಕತ್ತಿಗಳ ಖಣಾಖಣಾಟ! ಹೆಚ್ಚೇನು? ಹಲವೇನು? ಅಲ್ಲಿಯೂ ಮಹಾ ಹನನಕ್ಕೆ ಆರಂಭವಾಯಿತು. ಅಯ್ಯೋ! ಷಹನು ಸಿಕ್ಕಿಬಿದ್ದನು! ಆ ಮಾ ವಾ ಸೈ ಯ ಕತ್ತಲೆಯಲ್ಲಿ

ಏನೊಂದನ್ನೂ ಗುರುತಿಸದಂತಾಗಿದೆ. ಮಳೆಯ ಅಬ್ಬರ ಬೇರೆ! ಸುತ್ತಲೂ "ಜೈ ಭುವನೇಶ್ವರೀ!" ಎಂಬ ಜಯಘೋಷವೇ ಘೋಷ! ಆಗೊಬ್ಬ ತುರುಕ ಸರದಾರನು ಕುದುರೆಯನ್ನು ದೌಡಾಯಿಸುತ್ತಾ, "ಷಾನ್‌ಷಾ! ಷಾನ್‌ಷಾ!" ಎಂದು ಗಂಟಲು ಹರಿದು ಹೋಗುವಂತೆ ಕೂಗುತ್ತಾ ಬರಲು, ಆದಿಲ್‌ಷಹನು ಕೂಗಿ, ತನ್ನ ಧ್ವನಿಯ ಗುರುತನ್ನು ಪ್ರಕಟಿಸಿದನು. ಕೂಡಲೇ ಆ ದಳವಾಯಿ ಷಹನ ಬಳಿಗೆ ಬಂದು, ಮುಷ್ಟಿಯೊಳಗೆ ಭದ್ರವಾಗಿ ಹಿಡಿದುಕೊಂಡಿದ್ದ ಒಂದು ಸಣ್ಣ ಕಾಗದದ ಉಂಡೆಯನ್ನು ಅವಸರವಸರದಿಂದ ಷಹನಕೈಗೆ ಕೊಟ್ಟು, "ಈ ಕಾಗದವನ್ನೊಬ್ಬ ಕಾಫರ್ ದಳವಾಯಿ ತಮಗೆ ಕೊಡುವಂತೆ ಕೊಟ್ಟಿದ್ದಾನೆ. ಕೃಷ್ಣದೇವನ ಪತ್ರವಂತೆ! ಷಾಸಾ! ಜಲ್ದೀ! ಲೆಕ್ಕವಿಲ್ಲದಷ್ಟು ಶತ್ರುಗಳು ದೂರದಿಂದ ನದೀದಾಟಿ ಈ ಕಡೆಗೂ ಬಂದಿದ್ದಾರೆ. ಮೂರು ಕಡೆಯಲ್ಲೂ ಆ ಬದ್ಮಾಷರು ಮುತ್ತಿಬಿಟ್ಟಿದ್ದಾರೆ! ಈಗ ಪಶ್ಚಿಮದಿಕ್ಕೊಂದೇ ತೆರವಾಗಿದೆ! ಅಲ್ಲಿ ಬೇಗನೆ ಶತ್ರುಗಳು ಮುತ್ತದಂತೆ ನಾನು ನೋಡಿಕೊಳ್ಳುತ್ತೇನೆ. ಅಷ್ಟರೊಳಗಾಗಿ ತಾವು ತಮ್ಮ ಅಂಗರಕ್ಷಕರೊಂದಿಗೆ ಪಲಾಯನಮಾಡಿರಿ. ಜಲ್ದೀ! ಜಲ್ದೀ!"ಎಂದುಹೇಳಿ, ಮತ್ತೊಂದು ಕ್ಷಣವೂ ಅಲ್ಲಿನಿಲ್ಲದೆ, "ಖಬರ್ದಾರ್! ಖಬರ್ದಾರ್! ಇತ್ತಬನ್ನಿ! ಇತ್ತಬನ್ನಿ! ........"ಎಂದು ಅರಚಿ, ಸೈನಿಕರನ್ನು ಕರೆಯುತ್ತಾ ಪಶ್ಚಿಮದಿಕ್ಕಿನ ಕಡೆಗೆ ಓಡಿದನು. ಷಹನಿಗೂ ಅಷ್ಟೇ ಬೇಕಾಗಿತ್ತು. ಅವನು ಹಿಂದೆಮುಂದೆ ನೋಡದೆ, ಥಟ್ಟನೆ ಕುದುರೆಯನ್ನೇರಿ, ನದೀತೀರದಲ್ಲಿಯೇ ಪಶ್ಚಿಮದಿಶಾಭಿಮುಖನಾಗಿ ಕತ್ತಲೆಯಲ್ಲಿ ನುಸುಳಿ ಓಡಿದನು. ಅವನು ಪಾರಾದನೆಂದು ತಿಳಿದ ಕೂಡಲೇ ಅವನ ಸೈನಿಕರೂ ಸಿಕ್ಕಸಿಕ್ಕಲ್ಲಿ, ಚೆಲ್ಲಾಪಿಲ್ಲಿಯಾಗಿ, ಓಡಿಹೋದರು. ಕೆಲವರು ನದಿಯೊಳಗೂ ಬಿದ್ದರು; ರಾಯನ ಸೇನೆಯ ಸೆರೆಯಲ್ಲಿ ಸಿಕ್ಕಿದವರು ಎಷ್ಟೋಮಂದಿ. ಅತ್ತ ಆದಿಲ್‌ಷಹನು ಬೆಳಕುಹರಿಯುವ ತನಕವೂ ಕುದುರೆಯ ಬೆನ್ನಿನಮೇಲೆ ಕುಳಿತುಕೊಂಡು ಓಡಿದಮೇಲೆ, ಹಾಯೆಂದು ನಿಟ್ಟುಸಿರುಬಿಡುತ್ತಾ, ಕೈಯಲ್ಲಿ ಮುದ್ದೆಯಾಗಿ ಹಿಡಿದಿದ್ದ ರಾಯನ ಕಡೆಯ ಪತ್ರವನ್ನು ಬಿಡಿಸಿ ಓದಿದನು. ಅದರಲ್ಲಿ ಹೀಗೆ ಬರೆದಿತ್ತು:–

"ಷಹಾನ್‌ಷಹಾ, ಇಸ್ಮಾಯಿಲ್ ಆದಿಲ್‌ಷಹಾ! ತಾವು ಈ ರೀತಿಯಾಗಿ ಓಡಿಹೋಗುವ ಪ್ರಸಂಗದಲ್ಲಿ ನಾವು ಮಾಡಿದುದು ಅಧರ್ಮಯುದ್ಧವೆಂದೂ,

ಮಿತ್ರದ್ರೋಹವೆಂದೂ, ದೊಡ್ಡ ಮೋಸವೆಂದೂ ನಿಮಗೆ ತೋರಬಹುದು. ಹಾಗೆಂದು ಬಾಯಿಬಿಟ್ಟು ಹೇಳಿಯೂ ತೀರುವಿರಿ. ಹಾಗೆ ಹೇಳುವಾಗ ಆ ಪಾಪಿ ಚೋರ ಸಯದ್ ಮರ್ಕಾರನ ಮೂಲಕವಾಗಿ ನೀವು ನಮಗೆ ಮಾಡಿದ ಮಿತ್ರದ್ರೋಹವೂ, ಗುತ್ತೀದುರ್ಗದ ಮೋಸದ ಅತ್ಯಾಚಾರವೂ, ಗೋವಿಂದ ರಾಜನ ಕ್ರೂರವಾದ ಕೊಲೆಯೂ ನಿಮ್ಮ ಜ್ಞಾಪ್ತಿಯಿಂದ ಮಾಯವಾಗಬಹುದು. ಅವುಗಳನ್ನೊಮ್ಮೆ ಜ್ಞಾಪಿಸಿಕೊಳ್ಳೋಣಾಗಲೀ! ಆಗ ಜೀವದಿಂದುಳಿದು, ಈ ಪತ್ರವನ್ನೋದುತ್ತಿರುವ ನಿಮಗೆ, ನಿಮ್ಮ ಮೋಸವು ಹೆಚ್ಚೋ, ನಮ್ಮ ಮೋಸವು ಹೆಚ್ಚೋ, ಎಂದು ಗೊತ್ತಾದೀತು. ಪಹಾ! ನಮಗೆ ಮಹಾಪರಾಧವನ್ನು ಮಾಡಿ, ನಿಮ್ಮ ದುರ್ಗದಲ್ಲಿ ಅಡಗಿಕೊಂಡಿರುವ, ಹೇಡಿ ಮರ್ಕಾರನನ್ನು ತಕ್ಕಂತೆ ಶಿಕ್ಷಿಸಬೇಕಾದುದೇ ನಮ್ಮ ಮುಖ್ಯ ಉದ್ದೇಶವಾದುದರಿಂದ, ಮಿತ್ರದ್ರೋಹಮಾಡಿದ ನಿಮ್ಮ ಅಪರಾಧವನ್ನು ಈ ಬಾರಿ ಕ್ಷಮಿಸಿಬಿಟ್ಟಿದ್ದೇನೆಂದು ತಿಳಿಯಿರಿ. ಇತಿ

ಕೃಷ್ಣದೇವರಾಯ.

## ೨೯

## ಸವಿಯಾದ ಸುದ್ದಿ

ಇದೊಂದು ಪತ್ರ ಯಾರಿಗೆ? ಓದೋಣ:—

"ಖಾವಂದ್ ಖಾನ್ ಸಾಹೇಬರೇ! ತಮ್ಮ ಕೈಗೆ ದೊರೆತು, ತಮ್ಮ ಉಪಯೋಗಕ್ಕೆ ಸಿಕ್ಕದೆ ತಪ್ಪಿಹೋದ, ಅತ್ಯಮೂಲ್ಯವಾದ ರತ್ನವೊಂದು, ನನ್ನ ಕೈಗೆ ದೊರೆತಿದೆ. ಅದನ್ನು ತಮಗೆ ಸಮರ್ಪಿಸಲು ಸಿದ್ಧನಾಗಿದ್ದೇನೆ. ಹೆಚ್ಚಿನ ವಿವರವನ್ನು ಈ ಪತ್ರದಲ್ಲಿ ಬರೆಯುವುದಕ್ಕೆ ಅಂಜುವೆನು. ಮುಖತಃ ಮಾತನಾಡಿದರೆ ಎಲ್ಲವೂ ವೇದ್ಯವಾಗುವುದು.

ಇತಿ— ದರ್ಶನಾಕಾಂಕ್ಷಿ ... ........

ಸಾಧೂರಾವ್"

ಮುದಗಲ್ ದುರ್ಗದೊಳಗೆ ಸೈಯದ್ ಮರ್ಕಾರನು ಈ ಮೇಲಿನ ಪತ್ರವನ್ನು ಓದಿನೋಡಿ, ಇದಿರಿಗೆ ನಿಂದಿದ್ದ ಭಟನನ್ನು ಕುರಿತು, "ಈ ಪತ್ರ

ವನ್ನು ಕೊಟ್ಟವನು ಕೋಟೆಯ ಒಳಗಿರುವನೋ ಹೊರಗಿರುವನೋ ?" ಎಂದು ಪ್ರಶ್ನಿಸಿದನು.

"ಹೊರಗಿದ್ದಾನೆ, ಹುಜೂರ್!"

"ಹೇಗಿದ್ದಾನೆ, ನೋಡಿದೆಯಾ ?"

"ಸರಿಯಾಗಿ ನೋಡಲಿಲ್ಲ. ಕೋಟೆಯ ರಂಧ್ರದೊಳಗಿನಿಂದ ಒಬ್ಬ ಫಕೀರನಂತೆ ಕಂಡನು."

"ಫಕೀರನು ಈ ಪತ್ರವನ್ನು ನಿನಗೆ ಕೊಟ್ಟಬಗೆ ಹೇಗೆ ?"

"ಹುಜೂರ್! ಹೊರಗಿನಿಂದಲೇ ಈ ಪತ್ರವನ್ನು ತಮಗೆ ಕೊಡುವಂತೆ ಕೂಗಿ ಹೇಳಿ, ಇದನ್ನೊಂದು ಕಲ್ಲಿಗೆ ಸುತ್ತಿ, ನಮ್ಮ ಕಡೆಗೆ ಎಸೆದನು."

"ಅವನೊಬ್ಬನೇ ಇರುವನೋ, ಅವನೊಂದಿಗೆ ಬೇರೆ ಯಾರಾದರೂ ಇರುವರೋ?"

"ಒಬ್ಬನೇ ಇರುವನು, ಹುಜೂರ್!"

"ಹಾಗಾದರೆ, ಬಹಳ ಜಾಗ್ರತೆಯಿಂದ ಕೋಟೆಯ ಸಣ್ಣ ಬಾಗಿಲನ್ನು ತೆರೆದು, ಅವನನ್ನು ಎಚ್ಚರಿಕೆಯಿಂದ ಇಲ್ಲಿಗೆ ಕರೆದುಕೊಂಡು ಬಾ. ಹುಷಾರ್"

"ಜೀ! ಹುಜೂರ್!" ಎಂದು ಮುಜುರೆಮಾಡಿ, ಭಟನು ಹೊರಟು ಹೋದನು. ಮರ್ಕಾರನ ಮನಸ್ಸು ಬಹಳ ಗಲಿಬಿಲಿಗೊಂಡಿತು. ಸಂದೇಹದ ತಕ್ಕಡಿಯಲ್ಲಿ ತೂಗಾಡಲಾರಂಭಿಸಿತು. ಯಾರಿರಬಹುದು, ಈ ಸಾಧೂರಾವ? ಏನೋ ಫಕೀರನಂತೆ ಸುತ್ತಮುತ್ತಲೂ ಆ ಕೃಷ್ಣರಾಜನು ಮುತ್ತಿಗೆ ಹಾಕಿರಲು, ಅವನೊಬ್ಬನು ಮಾತ್ರ ಹೇಗೆ ಕೋಟೆಯ ಹೆಬ್ಬಾಗಿಲಿನ ತನಕ ಬಂದನು? ಒಂದುವೇಳೆ, ಶತ್ರುಪಕ್ಷದವನೇನಾದರೂ ಆಗಿರಬಹುದೇ?.... ಏನೋ ಅಮೂಲ್ಯ ರತ್ನ!....ಯಾವುದು? ಆಹಾ! ಅದೇ ಆಗಿರಬಹುದೇ?.... ಇತ್ಯಾದಿ ಅನೇಕಾಲೋಚನೆಗಳಿಂದ ಆಂದೋಳಿತಮಾನಸನಾಗಿದ್ದನು.

ಸ್ವಲ್ಪಹೊತ್ತಿನಲ್ಲಿ, ಆಯುಧಪಾಣಿಗಳಾದ ಭಟರಿಬ್ಬರು ಫಕೀರನೊಬ್ಬನನ್ನು, ಸೈಯದ್ ಮರ್ಕಾರನ ಕೊಠಡಿಯೊಳಗೆ ಬಿಟ್ಟು, ದ್ವಾರಪ್ರದೇಶದಲ್ಲಿ ಕಾವಲಾಗಿ ನಿಂತರು. ಫಕೀರನು ಮರ್ಕಾರನಿಗೆ ಸಲಾಂ ಮಾಡಿದಮೇಲೆ,

ಮುರ್ಕಾರನು ತಲೆಯುಲುಗಿಸಿ, "ಸಾಧೂರಾಯನೆಂದರೆ ನೀನೇ ಏನೋ?" ಎಂದು ಕೇಳಿದನು.

"ಹೌದು, ಹುಜೂರ್!"

"ಹಾಗಾದರೆ ಈ ಫಕೀರವೇಷವೇಕೆ?"

"ಎಲ್ಲವನ್ನೂ ಹೇಳುವೆನು ಹುಜೂರ್! ಕೇಳೋಣಾಗಲಿ!" ಎಂದು ಮುರ್ಕಾರನ ಸಮೀಪಕ್ಕೆ ಹೋಗಿ, ಅವನ ಗಾದಿಯ ಬಳಿಯಲ್ಲಿ ಜಮುಖಾನೆಯಮೇಲೆ ಪದ್ಮಾಸನಹಾಕಿ ಕುಳಿತು, "ಖಾವಂದ್! ಈಗ್ಗೆ ಮೂರು ನಾಲ್ಕು ತಿಂಗಳುಗಳ ಹಿಂದೆ, ತಾವು ಗುತ್ತೀದುರ್ಗದಿಂದ ಒಂದು ಸ್ತ್ರೀರತ್ನವನ್ನು ಕರೆದುಕೊಂಡು ಬರುತ್ತಾ, ಜೆಲ್ಲಮುಕೊಂಡದ ಬಳಿಯ ಗೊಂಡಾರಣ್ಯದ ಬಂಡೆಯಗುಹೆಯೊಳಗೆ, ಕೃಷ್ಣದೇವನಿಂದಾಗಿ, ಆ ರತ್ನವನ್ನು ಕಳೆದುಕೊಂಡಿರಲ್ಲವೇ?........"

"ಹೂಂ, ನಿನ್ನ ವಾಸಸ್ಥಳವು ಯಾವುದಯ್ಯಾ?"

"ಅದರ ಪಕ್ಕದಲ್ಲೇ ಇರುವ ಗ್ರಾಮ; ಆ ಗ್ರಾಮಕ್ಕೆ ನಾನು ಒಡೆಯ ಹುಜೂರ್!"

ಮುರ್ಕಾರನು ತಲೆಯಾಡಿಸುತ್ತಾ, "ಓಹೋ! ಅಚ್ಛಾ! ಮುಂದೆಹೇಳು" ಎಂದು ತವಕದಿಂದ ನುಡಿದನು.

"ಹುಜೂರ್! ಅಲ್ಲಿ ಕೃಷ್ಣದೇವರಾಯನೊಂದಿಗೆ ನೀವು ಹೋರಾಡಿ, ಪರಾಜಿತರಾಗಿ ಹೋದಮೇಲೆ ಆ ಹೆಣ್ಣು ರಾಯನೊಂದಿಗೆ ಏನೋ ವಾಗ್ವಾದ ಮಾಡಿ, ಅರಣ್ಯದೊಳಗೆ ಓಡಿದಳು........"

"ವಾಗ್ವಾದವೇನು? ಆ ದುರುಳ ರಾಯನೇನಾದರೂ, ಅವಳಮೇಲೆ........" ಎಂದು ಮುರ್ಕಾರನು ಕಣ್ಣು ಚಿಮುಟಿದನು.

"ಹಾ! ಹುಜೂರ್! ಅದೇ ಅದೇ!"

"ಅದಕ್ಕೇಕೆ ವಾಗ್ವಾದಮಾಡಬೇಕು? ಅವಳು ಅವನನ್ನು ಮೊದಲೇ ಪ್ರೇಮಿಸಿದ್ದಾಳಂತಲ್ಲಾ?

"ಅದೇನೋ ಯಾರಿಗೆಗೊತ್ತು, ಹೆಂಗಸಿನ ಗುಟ್ಟು? ಹುಜೂರ್! ಅವರೇನೇನು ವಾಗ್ವಾದವಮಾಡಿಕೊಂಡರೋ, ನನಗೆ ಅದೆಲ್ಲಾ ಸ್ಪಷ್ಟವಾಗಿ ಕೇಳಿಸಲಿಲ್ಲ."

"ಓಹೋ! ಅಚ್ಛಾ! ಅಚ್ಛಾ! ಆಮೇಲಾಮೇಲೆ?"

"ಆಮೇಲೆ ಅಂದರೆ, ಆ ಹೆಣ್ಣುಮಗಳು ಹಾಗೆ ಓಡಿಹೋದಮೇಲೆ ಅವಳನ್ನು ನಾನು ಹಿಡಿದುಬಿಟ್ಟೆ, ಮೋಸದ ಬಲೆಯಲ್ಲಿ!"

"ಅಚ್ಛಾ! ಅಚ್ಛಾ! ಆಮೇಲೆ?"

"ಹುಜೂರ್! ಆ ಹುಡುಗಿಯ ಹೆಸರು ಚಿನ್ನಾದೇವಿ!........"

"ಹೌದು, ಹೌದು! ಚಿನ್ನಾ........!"

"ಆ ಚಿನ್ನವನ್ನು, ಹುಜೂರ್! ತಮ್ಮ ಪಾದಕ್ಕೆ ಸಮರ್ಪಿಸಿದರೆ ಏನಾದರೂ ಇನಾಂ ಸಿಕ್ಕೀತೆಂದು,........"

"ಅಚ್ಛಾ! ಅಚ್ಛಾ! ಬಡಾ ಇನಾಂ ಕೊಡುತ್ತೇನೆ. ಎಲ್ಲಿದೆ, ಈಗ ಆ ರತ್ನ?"

"ಇಲ್ಲೇ ಇದೆ, ಉಪಾಯದಿಂದ ಈ ದುರ್ಗದ ಬಳಿಗೆ ಕರೆತಂದಿದ್ದೇನೆ."

"ಆಹಾ! ಬಹೂತ್ ಅಚ್ಛಾ! ಎಂಥಾ ಉಪಾಯ, ಸಾಧೂರಾವ್?"

"ಕೇಳೋಣಾಗಲಿ, ಹುಜೂರ್! ನಾನು ಆಪತ್ಕಾಲದಲ್ಲಿ ಒದಗುವ ಒಳ್ಳೇ ಸಂರಕ್ಷಕನಂತೆ ನಟಿಸಿ, ಸುಖದುಃಖಗಳನ್ನು ವಿಚಾರಿಸಿ, ಆ ಅರಣ್ಯದಿಂದ ಅವಳನ್ನು ನನ್ನ ಮನೆಗೆ ಕರೆದೊಯ್ದು, ಕೆಲವು ದಿನಗಳಲ್ಲಿಯೇ, ಅವಳ ನಂಬುಗೆಯನ್ನು ಸಂಪಾದಿಸಿಕೊಂಡೆ. ಆಮೇಲೆ, ನನ್ನ ಒಬ್ಬ ಆಪ್ತಬಂಧು ಇಲ್ಲಿಯೇ ಸಮೀಪದಲ್ಲಿ ಒಂದು ದುರ್ಗಕ್ಕೆ ಅಧಿಪತಿಯಾಗಿರುವನೆಂದೂ, ಅಲ್ಲಿ ನಿರ್ಭಯದಿಂದ ಅವಳು ವಾಸವಾಗಿರಬಹುದೆಂದೂ, ಅವಳು ನಂಬುವ ಹಾಗೆ ಹೇಳಿ, ಅವಳನ್ನು ಪಾಲಕಿಯಲ್ಲಿ ಕರೆದುಕೊಂಡು ಬಂದು, ಈ ದುರ್ಗದ ಬಳಿಯಲ್ಲಿ, ಒಂದು ರಹಸ್ಯ ಮಧ್ಯಸ್ಥಳದಲ್ಲಿರಿಸಿದ್ದೇನೆ."

"ವಹವ್ವಾ!"

"ಆದರೆ, ಹುಜೂರ್! ಈ ದುರ್ಗದ ಸುತ್ತಲೂ, ರಾಣಾನ ಸೈನ್ಯವು ಮುತ್ತಿಕೊಂಡಿರುವುದರಿಂದ, ಆ ಚಿನ್ನವನ್ನು ನಿಮ್ಮ ಅಂತಃಪುರಕ್ಕೆ [illegible]

ಅಸಾಧ್ಯವಾಯಿತು. ಮುಖ್ಯವಾಗಿ ತಮಗೆ ಸುದ್ದಿ ತಿಳಿಸುವುದೇ ಕಷ್ಟವಾಯಿತು. ಕಡೆಗೆ ನಾನು ಯುಕ್ತಿ ತೆಗೆದು, ರಾಯನ ಬಳಿಗೆಹೋಗಿ, ನಾನು ನಿಮ್ಮ ಮುದಗಲ್ ದುರ್ಗಸಾಧನೆಗೆ ಸಹಾಯವಮಾಡುವೆನೆಂದೂ, ಆದಕ್ಕಾಗಿ ಮೊದಲು ಫಕೀರ್ ವೇಷದಿಂದ ದುರ್ಗದೊಳಗೆ ಹೊಕ್ಕು, ಅಲ್ಲಿಯ ಸ್ಥಿತಿಗತಿಯನ್ನು ತಿಳಿದುಕೊಂಡು ಬರುವೆನೆಂದೂ ಹೇಳಿ, ಶಪಥವನ್ನು ಮಾಡಿ, ಅವರ ಇದಿರೇ ಈ ಫಕೀರನ ವೇಷಹಾಕಿಕೊಂಡು ಇಲ್ಲಿಗೆ ಬಂದೆ."

"ಅಚ್ಛಾ! ಚಲೋ ಉಪಾಯ! ಹಾಗಾದರೆ ನಿನಗೆ ರಾಯನ ಸೈನ್ಯದ ಒಳಗುಟ್ಟು ಚೆನ್ನಾಗಿ ಗೊತ್ತಿರುವುದೆಂದಾಯಿತು"

"ಆಹಾ! ಗೊತ್ತಿದೆ. ರಾಯನ ಸೈನ್ಯವು ಈಗ ಹೊಸ ಉಲ್ಲಾಸದಿಂದ ತುಂಬಿಕೊಂಡಿದೆ."

ಮರ್ಕಾರನು ಅಚ್ಚರಿಯಿಂದ, "ಹೊಸ ಉಲ್ಲಾಸವೇ? ಕಾರಣ?" ಎಂದು ಕೇಳಿದನು.

"ಓಹೋ! ತಮಗೆ ಏನೂ ಗೊತ್ತಿಲ್ಲವೇ? ನಿಜ. ನಿಮ್ಮ ಸುತ್ತಲೂ, ಒಂದು ನುಸಿಯೂ ಒಳಕ್ಕೆ ನುಸುಳದಂತೆ, ಶತ್ರುಗಳು ಮುತ್ತಿಕೊಂಡಿರುವಾಗ, ದುರ್ಗಮಧ್ಯದಲ್ಲಿರುವ ನಿಮಗೆ ಹೇಗೆ ಗೊತ್ತಾಗಬೇಕು ಹೊರಗಿನ ಸುದ್ದಿ?"

"ವಿಶೇಷವೇನು ಜರುಗಿತು – ಸಾಧೂರಾವ್ ?"

"ಮಹಾ ವಿಶೇಷ ಜರುಗಿದೆ! ಕೃಷ್ಣದೇವರಾಯನ ಕಡೆಯ ರೂಪಸಿಂಗನೆಂಬೊಬ್ಬ ಹೊಸ ಸರದಾರನೊಬ್ಬನು, ತಮ್ಮ ಸಹಾಯಕ್ಕಾಗಿ ಬರುತ್ತಿದ್ದ ಷಹಾನ್‌ಷಹಾ ಆದಿಲ್‌ಷಹರನ್ನು ಹಿಂದಕ್ಕೆ ಓಡಿಸಿಬಿಟ್ಟನಲ್ಲ?"

"ಅರರೆ! ಎಂದು? ಯಾವಾಗ ಇದು? ಹೇಗೆ?"

"ಇದೇ—ಮೊನ್ನೆ, ನಾಲ್ಕು ದಿವಸಗಳಾದುವಷ್ಟೆ! ಆ ರೂಪಸಿಂಗನು ಮುದಗಲ್ ದುರ್ಗವನ್ನು ಜಯಿಸಿಕೊಡುವೆನೆಂದು ರಾಯರ ಮುಂದೆ ಪ್ರತಿಜ್ಞೆ ಮಾಡಿ, ಒಂದು ಸಣ್ಣಸೈನ್ಯವನ್ನು ಸಾಗಿಸಿಕೊಂಡು ಹೋಗಿ, ಷಹಾನ್‌ಷಹರ ಸೈನಿಕರೆಲ್ಲಾ ನದಿಯನ್ನು ದಾಟುವಾಗ, – ಅದೇನೋ ಮೋಸ – ಮಾಯೆ – ಮಾಟದಿಂದ ಎಲ್ಲರನ್ನೂ ಕೃಷ್ಣಾರ್ಪಣವಮಾಡಿಬಿಟ್ಟರಂತೆ. ಷಹಾನ್‌ಷಹಾರು

ಜೀವವನ್ನು ಕೈಯಲ್ಲಿ ಹಿಡಿದುಕೊಂಡು, ಓಡಿಹೋಗಬೇಕಾದರೆ ಸಾಕುಸಾಕಾಗಿ ಹೋಯಿತಂತೆ!''

ಮರ್ಕಾರನು ಮೂಗಿನಮೇಲೆ ಬೆರಳಿಟ್ಟು, ''ಅರೇ! ದಗಲ್‌ಬಾಜ್!'' ಎಂದನು.

''ಆದರೆ, ಖಾವಂದ್! ಇನ್ನೊಂದು ಶುಭಸಮಾಚಾರವನ್ನು ಕೇಳಿದೆ. ಷಹಾನ್‌ಷಹರು ಇನ್ನು ಬೇಗದಲ್ಲೇ, ಮಹಾಸೇನಾಪ್ರವಾಹದೊಂದಿಗೆ ಪುನಃ ಬರುತ್ತಾರಂತೆ ರಾಯನ ಸೊಕ್ಕು ಮುರಿಯಲಿಕ್ಕೆ!''

''ಅಚ್ಛಾ! ಬರಲಿ........ಈ ದುರ್ಗವು ಬಹಳ ಬಲವಾಗಿದೆ. ಶತ್ರುಗಳ ವಶವಾಗುವುದೆಂದು ಭಯಪಡುವ ಕಾರಣವೇ ಇಲ್ಲ!........"

''ಆದರೂ, ಹುಜೂರ್! ತಾವು ಬಹು ಎಚ್ಚರವಾಗಿರಬೇಕು. ಮೋಸಕ್ಕೆ ಇದಿರೇ ಇಲ್ಲ'' ಎಂದು, ಸಾಧೂರಾಯನು ಪಿಸುಮಾತಿನಿಂದ, ''ಹುಜೂರ್, ಇನ್ನೊಂದು ಗುಟ್ಟು! ತಾವು ಗುತ್ತೀದುರ್ಗವನ್ನೂ ಮೋಸದಿಂದ ಒಳಪಡಿಸಿಕೊಂಡಿರುವುದರಿಂದ, ಈ ದುರ್ಗವನ್ನು ಹಾಗೆಯೇ ವಶಪಡಿಸಿಕೊಂಡು, ನಿಮ್ಮ ಮೇಲಿನ ಸೇಡು ತೀರಿಸಬೇಕೆಂದು ರಾಯನೂ ರೂಪಸಿಂಗನೂ ಯೋಚನೆಮಾಡಿಕೊಂಡಿದ್ದಾರಂತೆ. ಹೀಗೆ ನನಗೊಂದು ಗಾಳಿಮಾತು ಬಂದಿದೆ. ಆದುದರಿಂದ ತಾವು ಬಹು ಹುಷಾರಾಗಿರಬೇಕು."

''ಇರಲಿ ಸಾಧೂರಾವ್! ಈ ಹಾಳುಹರಟೆಯಿಂದ ಏನೂ ಪ್ರಯೋಜನವಿಲ್ಲ. ನನ್ನ ಮನಸ್ಸಿಗೆ ಸವಿಯಾದ ಚಿನ್ನಾದೇವಿಯ ಸುದ್ದಿಯನ್ನು ಅಲ್ಲಿಯೇ ನಿಲ್ಲಿಸಿಬಿಟ್ಟೆಯಲ್ಲ? ಅದನ್ನು ಹೇಳು, ಅವಳನ್ನು ಹೇಗೆ, ಯಾವಾಗ, ನನ್ನ ಕೈವಶಪಡಿಸುತ್ತಿ?''

## ೩೦

## ಉಪಾಯೋಪದೇಶ

ಸಾಧೂರಾಯನು ಯೋಚಿಸುತ್ತಾ,''ಹೇಗೆಂಬುದೇ ಈಗ ಬಗೆಹರಿಯದ ಯೋಚನೆ. ದುರ್ಗವನ್ನು ಶತ್ರುಗಳು ಸುತ್ತಿ ಮುತ್ತಿಕೊಂಡಿರುವುದರಿಂದ, ಬಹಿರಂಗವಾಗಿ ಅವಳನ್ನು ತರುವುದು ಸಾಧ್ಯವೇ ಇಲ್ಲ'' ಎಂದನು.

"ಮರ್ಕಾರನು ಯೋಚಿಸುತ್ತಾ, "ಇದಕ್ಕೇನು ಉಪಾಯಮಾಡಬಹುದು?"

"ಇದಕ್ಕೆ........ಉಪಾಯ........ಹುಜೂರ್! ಈ ದುರ್ಗಕ್ಕೆ ರಹಸ್ಯ ಮಾರ್ಗವಿರಬೇಕಲ್ಲವೇ?"

ಮರ್ಕಾರನು ಸ್ವಲ್ಪ ಸಂದೇಹದಿಂದ, "ಅದು ನಿನಗೆ ಹೇಗೆ ಗೊತ್ತು?" ಎಂದು ಪ್ರಶ್ನಿಸಿದನು.

"ಸಾಧಾರಣವಾಗಿ ಎಲ್ಲಾ ದುರ್ಗಗಳಿಗೂ, ಒಂದು ರಹಸ್ಯಮಾರ್ಗವಿದ್ದೇ ಇರುವುದು. ಆ ಆಧಾರದಮೇಲೆ ಕೇಳಿದೆ!"

"ಓಹೋ! ಈ........ಇದೆ....ಆ....ಆದರೆ........"

"ಹುಜೂರ್! ತಾವು ನನ್ನಮೇಲೆ ಅನುಮಾನವಿಡುವಂತೆ ಕಾಣುತ್ತದೆ".

"ಒಮ್ಮೆಗೇ ನಿನ್ನನ್ನು ನಾನು ಪೂರಾ ನಂಬಿಬಿಡುವುದು ಹೇಗೆ?"

"ಖಾವಂದ್! ಪೂರಾ ನಂಬುವುದೇನೂ ಬೇಡ. ಸ್ವಲ್ಪಮಾತ್ರ ನಂಬಿದರೆ ಸಾಕು. ಇಷ್ಟೂ ನಂಬಲಿಕ್ಕೆ ಆಗದೆ ಇದ್ದರೆ, ಚಿನ್ನಾದೇವಿಯ ಆಶೆಯನ್ನೇ ತಾವು ಬಿಟ್ಟುಬಿಡಬೇಕು. ನಾನು ಬೇರೆ ಯಾರಿಗಾದರೂ ಆ ಸುಂದರಿಯನ್ನು ಒಪ್ಪಿಸುವೆನು"

"ಹಾಗಲ್ಲ, ಸಾಧೂರಾವ್! ಅವಳನ್ನು ಎಲ್ಲಿ ಇಟ್ಟಿರುವಿಯೋ ಆ ಸ್ಥಳವನ್ನು ಮಾತ್ರ ನನಗೆ ತಿಳಿಸು. ನಾನೇ ನನ್ನ ಆಳುಗಳನ್ನು ಕಳುಹಿಸಿ ಅವಳನ್ನು ತರಿಸಿಕೊಳ್ಳುತ್ತೇನೆ"

"ಆಹಾ! ನೀವೇನೋ ಅವಳನ್ನು ಸಾಮಾನ್ಯಹೆಣ್ಣೆಂದು ತಿಳಿದಹಾಗಿದೆ. ಅಷ್ಟು ಸುಲಭ ಸಾಧ್ಯಳಲ್ಲವೇ ಅಲ್ಲ. ಹಾಗೆ ತಿಳಿದರೆ ಅವಳು ಗದ್ದಲ ಮಾಡುವಳು, ಜನರು ಕೂಡುವರು. ನಿಮಗೆ ಹಿಂದೊಮ್ಮೆ ಪ್ರಾಪ್ತವಾದ ಗತಿಯೇ ಒದಗುವುದು. ಹೆಚ್ಚೇನು? ಆಮೇಲೆ ಅವಳು ಇನ್ನೆಂದಿಗೂ ಸಿಕ್ಕಲಾರದಂತೆ ಕಾರ್ಯವೆಲ್ಲಾ ಕೆಟ್ಟು ಕಹಿಯಾಗಿಹೋದೀತು!"

"ಹಾಗಾದರೆ........?"

"ನನ್ನದೊಂದು ಉಪಾಯ ಹೇಳುತ್ತೇನೆ, ಹುಜೂರ್!"

"ಏನದು?"

"ನನ್ನನ್ನು ಹೇಗೂ ತಾವು ರಹಸ್ಯಮಾರ್ಗದಿಂದಲೇ ಹೊರಗೆ ಬಿಡಬೇಕಲ್ಲವೇ?"

"ಏಕದು?"

"ಅಲ್ಲದಿದ್ದರೆ ಕೃಷ್ಣದೇವರಾಯನ ಮುಂದೆ ಸುಳ್ಳುಹೇಳಿಬಂದ ನಾನು ಮತ್ತೆ ಅವನಿದಿರಾಗಿಹೋದರೆ, ನನ್ನನ್ನು ಸುಮ್ಮನೆ ಹೋಗಬಿಟ್ಟಾನೇ?

"ಸರಿ, ಸರಿ! ಹಾಗಾದರೆ ನಿನ್ನನ್ನೀಗ ರಹಸ್ಯಮಾರ್ಗದಿಂದಲೇ ಹೊರಗೆ ಕಳುಹಿಸಬೇಕಾಯಿತು"

"ಹುಜೂರ್! ತಮಗೆ ಸಂದೇಹವಿದ್ದರೆ ನನ್ನ ಕಣ್ಣಿಗೊಂದು ಬಟ್ಟೆಯನ್ನು ಬೇಕಾದರೆ ಕಟ್ಟೋಣಾಗಲಿ!"

"ಆಗಲಿ, ಅದು ಹೇಗೋ ನೋಡಿಕೊಳ್ಳೋಣ. ಈಗ ಉಪಾಯವೇನು?"

"ಆಗಲಿ. ತಾವೇ ನನ್ನೊಂದಿಗೆ ಬರುವಿರಾ? ಅಥವಾ ತಮ್ಮ ವಿಶ್ವಾಸಿಯಾದವನೊಬ್ಬನನ್ನು........"

"ಹೌದು, ಹಾಗೆಯೇ ಮಾಡುವೆನು. ನನ್ನ ವಿಶ್ವಾಸಪಾತ್ರನೊಬ್ಬನನ್ನು ನಿನ್ನೊಂದಿಗೆ ಕಳುಹಿಸಿಕೊಡುತ್ತೇನೆ."

"ಸರಿ, ಆ ಮನುಷ್ಯನೊಂದಿಗೆ, ನನ್ನ ಕಡೆಯ ನಾಲ್ವರು ಬೋವಿಗಳು ಒಂದು ಪಲ್ಲಕ್ಕಿಯನ್ನು ತಂದು, ತಮ್ಮ ಅಂತಃಪುರದಲ್ಲಿ ಬಿಟ್ಟುಹೋಗುವರು. ಪರಂತು ನಾನು ಮಾತ್ರ ಬರಲಾರೆ."

"ಅದೇಕೆ?"

"ನನ್ನೊಡನೆ ಅತಿಯಾಗಿ ಮಾತಾಡುತ್ತಿರುವುದು, ಆ ಹುಡುಗಿಯ ಅಭ್ಯಾಸ. ನನ್ನೊಡನೆ ಮಾತಾಡುತ್ತಿದ್ದರೆ, ಅವಳು ನಿದ್ರೆಯೇ ಹೋಗಲಾರಳು. ಅವಳು ನಿದ್ದೆಹೋಗದಿದ್ದರೆ, ಗುಪ್ತಪಥದಲ್ಲಿ ಪಾಲಕಿಯನ್ನು ಸಾಗಿಸಿಕೊಂಡು ಬರುವುದು ಕಷ್ಟ. ಅಂತೂ ನಾನು ಬಂದರೂಬಂದೆ. ಬಿಟ್ಟರೂ ಬಿಟ್ಟೆ. ಆಗಿನ ಅನುಕೂಲ ಹೇಗಿರುವುದೋ ಹಾಗೆ ನಡೆಯುವೆನು. ಅದೇನೂ

ದೊಡ್ಡದಲ್ಲ. ನನ್ನ ಬಹುಮಾನವನ್ನು ಆ ಬೋವಿಗಳ ಕೈಯಲ್ಲಿ ಕೊಟ್ಟು ಕಳುಹಿಸಿಬಿಟ್ಟರೆ ನನಗೆ ಸಿಕ್ಕುತ್ತದೆ."

ಮರ್ಕಾರನು ಯೋಚಿಸಿ, "ಆ ಬೋವಿಗಳು ನಮ್ಮವರಾದರೆ?" ಎಂದನು.

"ಆಗಬಹುದು. ಆದರೆ, ಅವಳಿಗೆ ಸಂದೇಹಬಾರದಂತೆ ದುರ್ಗದ ವರೆಗೆ, ನಮ್ಮ ಬೋವಿಗಳೇ ಹೊತ್ತುಕೊಂಡು ಬರಬೇಕಾಗುತ್ತದೆ. ನಿಮ್ಮ ವಠಾರಕ್ಕೆ ಸೇರಿದಮೇಲೆ, ನಿಮ್ಮಿಷ್ಟ. ಅವಳಿಗೆ ಇಂದು ಗಾಢನಿದ್ರೆ ಬರುವಂತೆ, ಸ್ವಲ್ಪ ಅಫೀಮು ಆಹಾರದಲ್ಲಿ ಸೇರಿಸಲ್ಪಡುವುದು. ಆದರೂ ಸ್ವಲ್ಪ ದೂರದ ತನಕ ನಮ್ಮ ಬೋವಿಗಳು ಹೊತ್ತುಕೊಂಡು ಬರುವುದೇ ಮೇಲು"

"ಹಾಗೆಯೇ ಆಗಲಿ. ಆದರೆ ನೀನು ಸಂಗಡ ಬಾರದಿದ್ದರೆ, ಅವಳು ಸಂದೇಹಿಸಲಾರಳೋ?"

"ಸಂದೇಹಿಸಲಿಕ್ಕೂ ಬಿಡಲಿಕ್ಕೂ ಪರದೆ ಹಾಕಿದ ಪಾಲಕಿಯೊಳಗೆ, ರಾತ್ರಿ ಕತ್ತಲೆಯಲ್ಲಿ, ಅವಳಿಗೇನಾದರೂ ಕಾಣುವುದೇ? ಬೋವಿಗಳಮೇಲೆ ಅವಳಿಗೆ ಬಹಳ ವಿಶ್ವಾಸವುಂಟು. ನಾನು ಬರುತ್ತೇನೆಂದು ಹೇಳಿ, ಹೊರಟಂತೆ ನಟಿಸಿದರೆ ಸಾಕಾಗುವುದು. ಅದಕ್ಕೇನು, ನಾನು ಬಂದರೂ ಬಂದೇನು, ಬಾರದಿದ್ದರೆ ಮಾತ್ರ ನನ್ನ ಬಹುಮಾನವನ್ನು ಆ ಬೋವಿಗಳ ಕೈಯಲ್ಲಿ ಕೊಟ್ಟು ಕಳುಹಿಸಬೇಕಾಗಿ ಪುನಃ ವಿಜ್ಞಾಪಿಸುತ್ತೇನೆ"

ಮರ್ಕಾರನು ಕೊರಳಾಡಿಸುತ್ತಾ, "ಅಚ್ಛಾ! ಅಚ್ಛಾ! ಅದಕ್ಕೇನೂ ಯೋಚಿಸಬೇಡ" ಎಂದನು.

ಮಹಾ ಧೂರ್ತನಾದ ಮರ್ಕಾರನಿಗೆ ಸಾಧೂರಾಯನಮೇಲೆ ಇನ್ನೂ ಪೂರ್ಣನಂಬಿಗೆಯಾದಂತೆ ಕಾಣಲಿಲ್ಲ. ನಂಬದಿದ್ದರೆ, ಪರಮಸುಂದರಿಯಾದ ಚಿನ್ನಾದೇವಿ ಕೈತಪ್ಪುತ್ತಾಳೆ. ಹೇಗಾದರೂ ಚಿನ್ನಾದೇವಿಯೊಬ್ಬಳು ಕೈಗೆ ಸಿಕ್ಕಲಿ, ಆಮೇಲೆ ಮುಂದಿನಮಾತು. ಎಂದು ಧೈರ್ಯವನ್ನು ತಂದುಕೊಂಡು, ಸಾಧೂರಾಯನ ಉಪಾಯಕ್ಕೆ ಒಪ್ಪಿಕೊಂಡನು.

ಸ್ವಲ್ಪಹೊತ್ತಿನಲ್ಲಿ ಮರ್ಕಾರನು ಇದಿರುನೋಡುತ್ತಿದ್ದ ರಾತ್ರಿಯೂ ಬಂದುಬಿಟ್ಟಿತು.

## ೩೧
# ಪಲ್ಲಕ್ಕಿಯೊಳಗೆ

"ನಿನ್ನ ಹೆಸರೇನಪ್ಪಾ?"

"ತೋಪಿ ಸಾಹೇಬ್"

"ತೋಪಿಸಾಹೇಬ್! ನೀನಿಲ್ಲಿಯೇ ಇರು." ಎಂದು ಸಾಧೂರಾಯನು, ಸೈಯದ್ ಮರ್ಕಾರನು ಕಳುಹಿಸಿಕೊಟ್ಟ ಭಟನಿಗೆ ಸೂಚಿಸಿ, ಆವನನ್ನು ಅಲ್ಲೊಂದು ಅರಳೀಕಟ್ಟೆಯಮೇಲೆ ಕೂಡಿಸಿ, ಪಕ್ಕದಲ್ಲಿದ್ದೊಂದು ಮುರುಕು ಮನೆಯೊಳಗೆ ಹೊಕ್ಕನು.

ಅಂದು ಭಾದ್ರಪದ ಶುಕ್ಲಚತುರ್ಥಿ. ಚಂದ್ರನು ಅಸ್ತಂಗತನಾಗುವ ಸಮಯ. ಅವನ ಕ್ಷುದ್ರಪ್ರಕಾಶವು, ಆ ಮನೆಯೊಳಗೆ ತೀರಾಕ್ಷುದ್ರವಾಗಿ ಬಿದ್ದಿತ್ತು. ಅಲ್ಲಿ ನಾಲ್ವರು ಮನುಷ್ಯರು ಕುಳಿತಿರುವುದೂ, ಮಸಕಾಗಿಕಾಣಿ ಸುತಿತ್ತು. ಹಾಗೆಯೇ ಒಂದು ಪಲ್ಲಕ್ಕಿಯೂ ಗೋಚರಿಸುತಿತ್ತು. ಸಾಧೂರಾ ಯನು ಮನೆಯೊಳಗೆ ನುಸುಳಲು, ಕುಳಿತಿರುವ ನಾಲ್ವರಲ್ಲಿ ಒಬ್ಬನು ಎದ್ದು ನಿಂತು, ಮೆಲ್ದನಿಯಿಂದ, "ರೂಪಸಿಂಗ್‌ಜೀ........" ಎನ್ನುವಷ್ಟರಲ್ಲಿ, ಸಾಧೂರಾಯನು "ಹುಶ್!" ಎಂದು ತಡೆದು, "ಜಯರಾಮ್‌ಜೀ! ನಾನೀಗ ರೂಪಸಿಂಗನಲ್ಲ; ಫಕೀರ ವೇಷಧಾರಿಯಾದ ಸಾಧೂರಾಯ!" ಎಂದು ಮೆಲ್ಲನೆ ಹೇಳಿದನು.

ಜಯ, "ಒಳ್ಳೇ ಸಾಧೂರಾಯರು! ವಿಚಿತ್ರ ವೇಷಪರಿವರ್ತನೆ!"

ಸಾಧೂ, "ಇನ್ನೀಗ ಇನ್ನೂ ವಿಚಿತ್ರವನ್ನು ನೋಡುವಿರಿ, ಅದಿರಲಿ ಜಯರಾಮ್‌ಜೀ! ನಿಮ್ಮ ಸೇನೆ ಸಿದ್ಧವಾಗಿರುವುದೇ?

ಜಯ, "ಸರ್ವರೀತಿಯಿಂದಲೂ ಸಿದ್ಧವಾಗಿದೆ. ಐನೂರು ಮಂದಿ ಆಯುಧಪಾಣಿಗಳು ನಮ್ಮ ಸಂಜ್ಞೆ ನಿರೀಕ್ಷಿಸುತ್ತಾ, ಅಡಗಿರುವರೆಂದು ತಿಳಿ ಯೋಣವಾಗಲಿ.

ಸಾಧು, "ಶಹಭಾಷ್! ಚುಟ್ಟದ ಸಂಕೇತಪ್ರಕಾರವನ್ನು ಅವರಿಗೆ ಸರಿ ಯಾಗಿ ತಿಳಿಸಿರುವಿರಷ್ಟೆ?

ಜಯ, "ಓ! ಅದರಲ್ಲೇನು ಹೆಚ್ಚುಕಡಮೆಯಾಗಿಲ್ಲ.

ಸಾಧು, "ಸರಿ ಇನ್ನು ಕಪಟನಾಟಕಕ್ಕೆ ತೊಡಗಿಬಿಡುತ್ತೇನೆ ಎಂದು ನುಡಿದು, ಅನಂತರ ಹೊರಗೆ ಕಟ್ಟೆಯಮೇಲೆ ಕುಳಿತಿರುವ ತೋಪಿ ಸಾಹೇಬನಿಗೆ ಕೇಳುವಷ್ಟು ಗಟ್ಟಿಯಾಗಿ, "ಮಗೂ! ಚಿನ್ನಾದೇವಿ! ಇನ್ನು ಪಲ್ಲಕ್ಕಿಯೊಳಗೆ ಮಲಗಮ್ಮ! ಹೊರಡಲಿಕ್ಕೆ ಅನುಕೂಲವಾದ ಸಮಯವು ಬಂದಿದೆ" ಎಂದು ತನಗೆತಾನೇ ಹೇಳಿಕೊಂಡನು.

ಜಯರಾಮಾದಿಗಳು ಆಶ್ಚರ್ಯದಿಂದ ನೋಡುತ್ತಿರಲು, ಸಾಧೂರಾಯನು ಸ್ತ್ರೀ ಕಂಠವನ್ನು ತಂದುಕೊಂಡು, ಉತ್ತರವನ್ನು ತಾನೇ ಹೇಳಿಕೊಂಡನು, "ಅಪ್ಪಾಜಿ! ಈಗ ಹೊರಟರೆ ನಾವು ಎಷ್ಟುಹೊತ್ತಿಗೆ ದುರ್ಗವನ್ನು ಸೇರಿಯೇವು?"

ಸಾಧೂರಾಯನ ಬಾಯಿಯಿಂದ ಸುಕೋಮಲವಾದ, ಸಾಮಾರ್ದವವಾದ, ಸ್ತ್ರೀಯ ಸ್ವರವು ಹೊರಟುದನ್ನು ಕೇಳಿ, ಜಯರಾಮನು ಕಟ್ಟಚ್ಚರಿಯಿಂದ, "ಎಲ! ಎಂತಹ ಸ್ವರಪರಿವರ್ತನಾಸಾಮರ್ಥ್ಯವಿದು!" ಎಂದು ಮೆಲ್ಲನೆ ಹೇಳಿಕೊಂಡನು.

ಸಾಧೂರಾಯನ ಪುರುಷಕಂಠದಿಂದ ಪ್ರತ್ಯುತ್ತರವೂ ಹೊರಟಿತು. "ಅಮ್ಮಾ! ಚಿನ್ನಾ! ಬೆಳಗಾಗುವುವರೊಳಗೆ ದುರ್ಗವನ್ನು ಸೇರುತ್ತೇವೆ. ಏನೂ ಭಯವಿಲ್ಲ. ನಮ್ಮ ಬೋವಿಗಳು ಬಹಳ ಜಾಗ್ರತರಾಗಿದ್ದಾರೆ. ನೀನು ಸ್ವಸ್ಥವಾಗಿ ಮಲಗಿ ನಿದ್ದೆಮಾಡು. ನಾನು ಊಟಮಾಡಿ ಸಾಮಾನು ಸರಂಜಾಮು ಹೊರಿಸಿಕೊಂಡು ನಿನ್ನ ಹಿಂದೆಯೇ ಬರುತ್ತೇನೆ........ಹುಂ, ಪಲ್ಲಕ್ಕಿ ಏರಮ್ಮಾ, ತಾಯಿ!"

"ಆಗಲಿ, ಅಪ್ಪಾ" ಎಂಬ ಸ್ತ್ರೀಯ ಮಾರ್ನುಡಿಯೂ ಸಾಧೂರಾಯನ ಕಂಠದಿಂದಲೇ ಹೊರಟಿತು.

ಜಯರಾಮನು ಮೇಲ್ದನಿಯಿಂದ, "ನಿಮ್ಮ ಮಾಟದ ತಂದೆ ಮಗಳ ಸಂಭಾಷಣೆ ಬಹಳ ಚೆನ್ನಾಗಿದೆ! ತಂದೆಯಾರು? ಮಗಳು ಯಾರು? ಪುರುಷನಾರು? ಸ್ತ್ರೀಯಾರು?

ಸಾಧೂ, "ನಾನೇ ತಂದೆ, ನಾನೇ ಮಗಳು ನಾನೇ ಪುರುಷ, ನಾನೇ

ಸ್ತ್ರೀ; ಇರಲಿ. ಇನ್ನು ಸಮಯ ಕಳೆಯುವುದು ಸರಿಯಲ್ಲ. ನಾನಿನ್ನು ಪಲ್ಲಕ್ಕಿಯೊಳಗೆ ಮಲಗುತ್ತೇನೆ, ನೀವು ಹೊತ್ತುಕೊಂಡು ಆ ಭಟನ ಹಿಂದಿನಿಂದಲೇ ಹೋಗಿರಿ; ಮಾತ್ರ ನಿಮ್ಮ ಬಾಯಿಯಲ್ಲಿ ಚುಟ್ಟದಬೆಂಕಿ ಕಾಣುತ್ತಲೇ ಇರಬೇಕು''

ಜಯ, "ಸರಿಸರಿ!"

ಸಾಧೂರಾಯನು ಪಲ್ಲಕ್ಕಿಯೊಳಗೆ ಮಲಗಿದನು. ಜಯರಾಮನು ಪಲ್ಲಕ್ಕಿಯ ಪರದೆಯನ್ನು ಸರಿಯಾಗಿ ಮುಚ್ಚಿಬಿಟ್ಟು, ಉಳಿದ ಮೂವರೊಂದಿಗೆ ಅದನ್ನು ಹೊತ್ತುಕೊಂಡು ಹೊರಕ್ಕೆ ತಂದನು. ಅವರೆಲ್ಲರೂ ಬೋವಿಗಳ ವೇಷದಿಂದಲೇ ಇದ್ದರೆಂದು ಪ್ರತ್ಯೇಕವಾಗಿ ನಾವಿಲ್ಲಿ ಬರೆಯುವುದು ಅನಾವಶ್ಯಕ.

ಕಟ್ಟೆಯ ಮೇಲೆ ಕುಳಿತಿದ್ದ ತೋಪಿಸಾಹೇಬನ ಬಳಿಗೆ ಪಲ್ಲಕ್ಕಿ ಹೋಯಿತು. ಜಯರಾಮನು, 'ಇನ್ನು ಹೋಗೋಣವೇ?' ಎಂದು ಕೇಳುತ್ತಾ, ಪಲ್ಲಕ್ಕಿಯನ್ನು ಕೆಳಕ್ಕಿಳಿಸಿ, ಅಂಗಿಯೊಳಗಿನಿಂದ ಉದ್ದವಾದ ಚುಟ್ಟವೊಂದನ್ನು ಹೊರಕ್ಕೆ ತೆಗೆದು, 'ಈ ಬತ್ತಿಯ ಪ್ರತಾಪ ಇಲ್ಲದಿದ್ದರೆ. ನನ್ನ ಯಂತ್ರ ಸರಿಯಾಗಿ ನಡೆಯುವುದೇ ಇಲ್ಲವಪ್ಪ!' ಎನ್ನುತ್ತ ಇನ್ನೊಂದು ಚುಟ್ಟವನ್ನು ತೆಗೆದು, 'ನೀವು ಒಂದು ಹಚ್ಚೋಣಾಗಲಿ, ಸಾಹೇಬ್‌ಜೀ' ಎಂದು ತೋಪಿಸಾಹೇಬನ ಮುಂದಕ್ಕೆ ನೀಡಿದನು.

'ಬೇಡ........ಹುಂ, ಇರಲಿ' ಎಂದು ತೋಪಿಸಾಹೇಬನು ಆ ಚುಟ್ಟವನ್ನು ತೆಗೆದುಕೊಂಡನು.

'ನಾನು ಬೆಂಕಿಯನ್ನು ತರುತ್ತೇನೆ' ಎಂದು ಜಯರಾಮನು ಮನೆಯೊಳಗೆ ಹೋಗಿ, ತನ್ನ ಚುಟ್ಟಕ್ಕೆ ಬೆಂಕಿ ಹಚ್ಚಿಕೊಂಡು ಬಂದು, ಕೆಂಡದ ಕೊಳ್ಳಿಯನ್ನು ತಂದು ತೋಪೀಸಾಹೇಬನ ಚುಟ್ಟಕ್ಕೆ ಬೆಂಕಿಯನ್ನೊದಗಿಸಿ ಕೊಟ್ಟನು. ಆಮೇಲೆ ಪಿಸುನುಡಿಯಿಂದ ಸಾಹೇಬನನ್ನು ಕುರಿತು, "ಇನ್ನು ಹೊರಡೋಣವೇ............ಸಾಹೇಬಜೀ?"

ತೋಪಿ. 'ಹೊರಡೋಣ; ನಿಮ್ಮ ಸಾಧೂರಾಂ `ರೆಲ್ಲಿ ಹೋದರು?"

ಜಯ, "ಅವರು ಬರುವುದಿಲ್ಲವೆಂದು ಹೇಳಿದ್ದಾರೆ! ಏಕೆಂದರೆ, ಖಾನ್‌ಜೀ!—ಈ ಹುಡುಗಿಗೆ ಇಂದು ನಿಷ್ಪೆ ಬರುವ ಮದ್ದು ಹಾಕಲಿಕ್ಕೆ ಅನು

ಕೂಲವಾಗಲಿಲ್ಲದುದರಿಂದ, ಅವರು ಬಾರದೆ ಹಿಂದೆನಿಂತಿದ್ದಾರೆ. ಹಿಂದಿನಿಂದ ಬಂದರೂ ಬಂದಾರು. ನೀವು ಬಹುಮಾನ ಮಾತ್ರ ನಮ್ಮ ಕೈಗೆ ಕೊಡಿಸ ಬೇಕಂತೆ ?''

ತೋಪಿ, ''ಅಚ್ಛಾ! ಹಾಗೇ ಆಗಲಿ! ಹೊರಡಿ ಇನ್ನು. ಆದರೆ,ನಿಮ್ಮ ಓಂಕಾರ ಝೇಂಕಾರ ಯಾವುದನ್ನೂ ಮಾಡದೆ, ಶಬ್ದವಿಲ್ಲದೆ ಹೊರಡಬೇಕು".

ಜಯ, ''ಅದೇ ದೊಡ್ಡ ಕಷ್ಟ. ಆದರೂ ಚಿಂತೆಯಿಲ್ಲ''

ಆಗ, ಇನ್ನೊಬ್ಬ ಬೋವಿ ಜಯರಾಮನ್ನು ಕುರಿತು ಬೇಸರದಿಂದ, ''ಏನಪ್ಪಾ ? ಇನ್ನೂ ಮುಗಿಯಲಿಲ್ಲವೆ, ಅಗ್ನಿಹೋತ್ರ ! ನಿನ್ನ ಹುಚ್ಚು ಹೋತ್ರಕ್ಕೆ ಬೆಂಕಿಹಚ್ಚ !''

''ಬೆಂಕಿಯನ್ನೇ ಹಚ್ಚಿದ್ದೇನೆ ನೋಡಪ್ಪಾ" ಎಂದು ಜಯರಾಮನು ಪಲ್ಲಕ್ಕಿಯ ಬಳಿಗೆ ಬರಲು, ನಾಲ್ವರೂ ಸೇರಿ ಪಲ್ಲಕ್ಕಿಯನ್ನೆತ್ತಿಕೊಂಡರು.

ಆಗ ಪಲ್ಲಕ್ಕಿಯೊಳಗಿನಿಂದ 'ಅಪ್ಪಾಜಿ!' ಎಂಬ ಸ್ತ್ರೀಕಂಠವು ಕೇಳಿಸಿತು. ಜಯ, "ಯಾಕಮ್ಮಾ? ಏನು ಬೇಕಮ್ಮಾ?"

ಸ್ತ್ರೀಕಂಠ, ''ಏನೂ ಬೇಡ. ಅಪ್ಪಾಜಿ ಎಲ್ಲಿದ್ದಾರೆ."

ಜಯ, ''ಊಟಮಾಡಿಕೊಂಡು ಬರುತ್ತಾರಮ್ಮ. ಪೆಟ್ಟಿಗೆಯನ್ನು ಕಟ್ಟಿಸಿಕೊಂಡು ನಮ್ಮ ಹಿಂದೆಯೇ ಬರುತ್ತಾರೆ. ನಾವು ಮುಂದೆ ಹೋಗೋಣ.''

ಸ್ತ್ರೀಕಂಠ 'ಸರಿ'

ನಾಲ್ವರೂ ಸೇರಿ ಪಲ್ಲಕ್ಕಿಯನ್ನು ಎತ್ತಿಕೊಂಡು ತೋಪಿಸಾಹೇಬನ ಹಿಂದಿನಿಂದ ಹೊರಟರು.

೩೨

# ಸ್ವರ್ಗಕ್ಕೆ ಒಂದೇ ಗೇಣು

ಚಂದ್ರಾಸ್ತಮಾನವಾಗಿ ಹೋಯಿತು, ಆಕಾಶವು ಮೇಘವಿಹೀನವಾಗಿತ್ತು. ತಾರೆಗಳು ಮಿನುಗಲಾರಂಭಿಸಿದುವು. ಆ ಕತ್ತಲೆಯಲ್ಲಿ ತೋಪಿ ಸಾಹೇಬನ ಹಿಂದಿನಿಂದ, ಜಯರಾಮಾದಿಗಳು ಪಲ್ಲಕ್ಕಿಯನ್ನು ಹೊತ್ತು ಕೊಂಡು ಹೋಗುತ್ತಿದ್ದರು. ಜಯರಾಮನೂ, ತೋಪಿ ಸಾಹೇಬನೂ ಚುಟ್ಟೆ

ವನ್ನು ಸೇದುತ್ತಲೇ ಇದ್ದರು. ಚುಟ್ಟದ ಬೆಂಕಿ ಕತ್ತಲೆಯಲ್ಲಿ ಕೆಂಪಾಗಿ ಕಾಣುತ್ತ ಇತ್ತು. ಅವರು ಹೋಗುವ ನಾಲ್ಕು ಕಡೆಗಳಲ್ಲಿ ಗುಂಡು ಗುಂಡಾದ ಕಲ್ಲುಗಳು ರಾಶಿರಾಶಿಯಾಗಿ ಬಿದ್ದಿದ್ದವು. ಅವುಗಳ ಮಧ್ಯ ಮಧ್ಯದಲ್ಲಿರುವ ಅಂಕುಡೊಂಕಾದ ದಾರಿಯಲ್ಲಿ, ಸುಮಾರು ಒಂದು ಮೈಲಿಯ ತನಕ ನಡೆದಮೇಲೆ, ನಾಲ್ವರು ತೋಪಿಸಾಹೇಬನ ಅನುಚರರು ಸಂಧಿಸಿದರು. ಆಗ ತೋಪಿಸಾಹೇಬನು ಜಯರಾಮನ ಬಳಿಗೆ ಬಂದು, ಪಿಸು ನುಡಿಯಿಂದ, "ಅಯ್ಯಾ! ಪಲ್ಲಕ್ಕಿಯನ್ನು ಇನ್ನು ನಮ್ಮ ಬೋವಿಗಳು ಹೊರುತ್ತಾರೆ. ಬಿಟ್ಟು ಬಿಡೋಣಾಗಲಿ" ಎಂದನು.

"ಶ್ಯಾ! ಹುಡುಗಿ ಇನ್ನೂ ನಿದ್ದೆ ಮಾಡಲಿಲ್ಲಪ್ಪಾ! ಮಾತಾಡದಿರು ಇನ್ನೂ ಸ್ವಲ್ಪ ಮುಂದೆ ಹೋಗೋಣ" ಎಂದು ಜಯರಾಮನು ಎಚ್ಚರಿಸಲು, ತೋಪಿಸಾಹೇಬನು ಸುಮ್ಮನಾದನು. ಇನ್ನೂ ಸ್ವಲ್ಪ ಮುಂದೆ ಹೋಗಲು, ದುರ್ಗವು ಸಮಿಾಪಿಸುತ್ತಾ ಬಂದಿತು. ತೋಪಿಸಾಹೇಬನು ಪುನಃ ಪಲ್ಲಕ್ಕಿಯನ್ನು ಬಿಟ್ಟು ಬಿಡುವಂತೆ ತೊಂದರೆಪಡಿಸಿದನು. ಜಯರಾಮನು, "ಇನ್ನೂ ತುಸು ಮುಂದೆ ಹೋಗೋಣ–ಗಾಢವಾದ ನಿದ್ರೆ ಬರಲಿ,– ತಡೆಯಿರಿ. ಕಾರ್ಯವು ಕೆಟ್ಟೀತು — ನಮ್ಮ ಮೇಲೆ ಇಷ್ಟು ಅನುಮಾನವೇ ?" ಇತ್ಯಾದಿ ಉಪಾಯದ ಮಾತುಗಳಿಂದ ಪಲ್ಲಕ್ಕಿಯನ್ನು ಹೊಸ ಬೋವಿಗಳಿಗೆ ಬಿಟ್ಟುಗೊಡದೆ ಮುಂದುವರಿಸಿದನು. ದುರ್ಗವು ತೀರಾ ಸಮಿಾಪವಾಯಿತು. ಇನ್ನು ಮುಂದಕ್ಕೆ ಬರಕೂಡದೆಂದು ಖಂಡಿತವಾಗಿ ತೋಪಿಸಾಹೇಬನು ಹೇಳಿಬಿಟ್ಟುದರಿಂದ ಇನ್ನು ನಿರ್ವಾಹವಿಲ್ಲದೆ, ಪಲ್ಲಕ್ಕಿಯನ್ನು ಆ ಸಾಹೇಬನ ಕಡೆಯ ಬೋವಿಗಳಿಗೆ ಬಿಟ್ಟು ಕೊಡಲೇಬೇಕಾಯಿತು. ದುರ್ಗವು ತೀರಾ ಸಮಿಾಪಿಸಿದುದರಿಂದ, ಜಯರಾಮನು ನಡೆದುದರಲ್ಲಿಯೇ ಸಮಾಧಾನಪಟ್ಟುಕೊಂಡು, ಪಲ್ಲಕ್ಕಿಯನ್ನು ಹೊಸ ಬೋವಿಗಳಿಗೆ ಬಿಟ್ಟುಕೊಟ್ಟನು. ಎಚ್ಚರಿಕೆಯಿಂದ ಪಲ್ಲಕ್ಕಿಯ ಆಧಾರವು ಹೆಗಲಿಂದ ಹೆಗಲಿಗೆ ಬದಲಿಸಲ್ಪಟ್ಟಿತ್ತು. ತೋಪಿಸಾಹೇಬನು, "ಬಹುಮಾನವನ್ನು ತರುವೆನು, ಇಲ್ಲಿಯೇ ನಿಂದಿರಿ," ಎಂದು ಜಯರಾಮಾದಿಗಳನ್ನು ನಂಬಿಸಿ, ಪಲ್ಲಕ್ಕಿಯನ್ನು ಸಾಗಿಸಿಕೊಂಡು ಮುಂದಕ್ಕೆ ಹೋದನು. ತೋಪಿಸಾಹೇಬನ ಬಾಯಿಂದ ಬೆಳಗುತ್ತಲೇ ಇರುವ ಚುಟ್ಟದ ಬೆಂಕಿಯಿಂದ ಜಯರಾಮನಿಗೆ ಸಂತೋಷವುಂಟಾಯಿತು. ಅಲ್ಲಿಗೆ ಒಂದು ಸಣ್ಣ ಕೂಗಳತೆಯಲ್ಲಿಯೇ

ಇತ್ತು ಬೆಟ್ಟದ ಬುಡ. ತೋಪಿಸಾಹೇಬನು ಪಲ್ಲಕ್ಕಿಯೊಂದಿಗೆ ಬೆಟ್ಟದ ಬುಡಕ್ಕೆಹೋಗಿ ಸೇರಿದನು. ಆ ಸ್ಥಳದಲ್ಲಿ ಬೆಟ್ಟದ ಭಾಗವು ಯಾವ ಪ್ರಾಣಿಗೂ ಏರಿಹೋಗಲು ಸಾಧ್ಯವೇ ಇಲ್ಲದೆ, ಗೋಡೆಯಂತಿರುವ ಅಖಂಡವಾಗಿ ಬಹು ಕಡಿದಾಗಿತ್ತು. ತೋಪಿಸಾಹೇಬನು ಗುಡ್ಡದ ಬುಡದಲ್ಲಿದ್ದ ಒಂದು ಚೌಕ ಬಂಡೆಗೆ, ಇನ್ನೊಂದು ಕಲ್ಲಿನಿಂದ ಹೊಡೆದು – ಠಕ್‌ಠಕ್ – ಸಪ್ಪಳಮಾಡಿದನು. ಸ್ವಲ್ಪಹೊತ್ತಿನಲ್ಲಿ ಆ ಚೌಕಬಂಡೆ ಭೂಮಿಯೊಳಕ್ಕೆ ಇಳಿದು, ಅಲ್ಲೊಂದು ಮನುಷ್ಯಪ್ರಮಾಣದ ದ್ವಾರವುಂಟಾಯಿತು. ಒಳಗಡೆಯಲ್ಲಿ, ನಾಲ್ವರು ಅಂಗರಕ್ಷಕರೊಂದಿಗೆ ಸೈಯದ್ ಮರ್ಕಾರನು ನಿಂತುಕೊಂಡಿದ್ದನು.

ಪಾಲಕಿಯನ್ನು ಕಂಡು, ಅವನಿಗಾದ ಆನಂದಕ್ಕೆ ಪಾರವೇ ಇಲ್ಲ. ಅವನು ಬೇಗಬೇಗನೆ ಪಲ್ಲಕ್ಕಿಯನ್ನು ಗುಹೆಯೊಳಗೆ ಹೋಗಗೊಟ್ಟು, ಭಂಗಾರದ ಮೊಹರು ತುಂಬಿದ ಸಂಚಿಯನ್ನು ತೋಪೀಸಾಹೇಬನ ಕೈಯಲ್ಲಿಟ್ಟು, "ಇಗೋ! ಇದರಲ್ಲಿ ಐನೂರು ಮೊಹರುಗಳಿವೆ. ಇದನ್ನು ಆ ಬೋವಿಗಳ ಕೈಯಲ್ಲಿ ಕೊಟ್ಟು, ಬೇಗನೆ ಬಾಗಿಲನ್ನು ಮುಚ್ಚಿಕೊಂಡು ಬಾ" ಎಂದು ಅಪ್ಪಣೆ ಮಾಡಿ, ತಾನು ಪಲ್ಲಕ್ಕಿಯ ಹಿಂದೆಯೇ ಹೋದನು. ಅವನಿಗೀಗ – ಸ್ವರ್ಗಕ್ಕೆ ಒಂದೇ ಗೇಣು ದೂರ—ಪರಮಾನಂದ!

ತೋಪೀಸಾಹೇಬನು ಮೊಹರಿನ ಸಂಚಿಯನ್ನೆತ್ತಿಕೊಂಡು, ಜಯರಾಮಾದಿಗಳು ನಿಂತಿರುವ ಸ್ಥಳಕ್ಕೆ ಬಂದನು. ನೋಡಿದರೆ, ಅಲ್ಲಿ ಯಾರೂ ಇದ್ದಿಲ್ಲ. ಆಶ್ಚರ್ಯ! ಅವನು ಭೀತಿ – ಶೋಕ – ಸಂದೇಹಮಾನಸನಾಗಿ ಆ ಕತ್ತಲೆಯಲ್ಲಿ ಸುತ್ತಮುತ್ತಲೂ ಕಣ್ಣೆತ್ತಿ ಪರೀಕ್ಷಿಸಿದನು. ಗುಂಡು ಗುಂಡಾದ ಗಂಡಶಿಲೆಗಳೂ, ಕುಳ್ಳುಕುಳ್ಳಾದ ಮುಳ್ಳಿನ ಪೊದರುಗಳೂ, ಮಾತ್ರ ಕತ್ತಲೆ ರಾಶಿಯನ್ನು ಧರಿಸಿಕೊಂಡು ನಿಂತಿದ್ದುವು. ಮತ್ತಾರೂ ಕಾಣಿಸಲಿಲ್ಲ. ಇನ್ನು ಅಲ್ಲಿದ್ದರೆ, ತನಗಾಗಲಿ ದುರ್ಗಕ್ಕಾಗಲಿ, ಏನಾದರೂ ಅಪಾಯವಾದೀತೆಂದು ಬೇಗನೆ ರಹಸ್ಯಮಾರ್ಗವನ್ನು ಮುಚ್ಚಿಕೊಂಡು ಹೋಗಬೇಕೆಂದು ಲಗುಬಗೆಯಿಂದ ಹಿಂದಿರುಗಿದ್ದನು.

ಅಷ್ಟರಲ್ಲಿ, ಎಲ್ಲಿಂದಲೋ ಯಾರೋ ಒಬ್ಬನು ಹಾರಿಬಂದು, ಅವನ ಕೊರಳನ್ನು ಬಿಗಿಯಾಗಿ ಅಮುಕಿ ಹಿಡಿದನು. ಪಾಪ! ಉಸಿರೇ ಸಿಕ್ಕಿಕೊಂಡಿತು

ತೋಪಿಸಾಹೇಬನಿಗೆ! ಅಷ್ಟರಲ್ಲಿ ಮತ್ತೆ ಮೂವರೂ ಬಂದು, ಅವನ ಬಾಯಿಗೆ ಬಟ್ಟೆ ತುರುಕಿ, ಮುಖವನ್ನು ಬಟ್ಟೆಯಿಂದ ಮುಚ್ಚಿ, ಬಿಗಿದು, ಕೈಕಾಲುಗಳನ್ನು ಕಟ್ಟಿ ಕೆಡವಿದರು. ಹೀಗೆ ತೋಪೀಸಾಹೇಬನನ್ನು ಬಂಧಿಸಿದವರು ಜಯರಾಮಾದಿಗಳೇ ಎಂದು ನಾವು ಹೇಳಬೇಕೇ?

ಅನಂತರ, ಜಯರಾಮನು ಒಮ್ಮೆ ಕೈತಟ್ಟಿದನು. ನೋಡ ನೋಡುತ್ತಿದ್ದಂತೆ, ಬೂದುಬಣ್ಣದ ಉಡಿಗೆತೊಡಿಗೆಗಳಿಂದ ಮಂಡಿತರಾದ, ಅನೇಕ ಮಂದಿ ಖಡ್ಗಪಾಣಿಗಳು, ಮಿಂಚುಗಳಂತೆ ಬಂದುಸೇರಿದರು. ಅವರೆಲ್ಲರನ್ನೂ ಕರೆದುಕೊಂಡು, ಜಯರಾಮನು ದುರ್ಗದ ಬಾಡಕ್ಕೆ ಹೋದನು. ರಹಸ್ಯ ದ್ವಾರವು ತೆರೆದುಕೊಂಡೇ ಇತ್ತು. ಅನುಕೂಲವೇ ಆಯಿತು. ಒಬ್ಬೊಬ್ಬರು, ಇಬ್ಬರಿಬ್ಬರು. ಮುಮ್ಮೂವರು, ನಾಲ್ನಾಲ್ವರಂತೆ ಎಲ್ಲರೂ ಆ ಗುಹೆಯೊಳಗೆ ಹೊಕ್ಕರು. ಎಲ್ಲರೂ ಹೊಕ್ಕಮೇಲೆ ಒಬ್ಬನು ಕೆಳಗಿನ ಸರಪಳಿಯನ್ನು ಹಿಡಿದು ಮೇಲಕ್ಕೆತ್ತಿ, ಗುಹೆಯ ಬಾಗಿಲನ್ನು ಮುಚ್ಚಿಬಿಟ್ಟನು.

ಆ ಗುಹೆಯ ಅಂತರ್ಭಾಗವು ವಿಶಾಲವಾಗಿತ್ತು. ಕೈಯನ್ನು ಮೇಲಕ್ಕೆ ನೆಗಹಿದರೂ, ಮೇಲ್ಭಾಗವು ಎಟುಕುತ್ತಿದ್ದಿಲ್ಲ. ಆದರೆ ಗಾಢ ತಿಮಿರಾವಿಚ್ಛಿನ್ನವಾಗಿತ್ತು. ಅಷ್ಟು ಮಂದಿಯೂ ಬಹಳ ಹೊತ್ತು ಅಲ್ಲಿಯೇ ತಂಗಿದ್ದರೆ, ಪವನಾಭಾವದಿಂದ ಎಲ್ಲರೂ ಸತ್ತು ಹೋಗುವ ಪ್ರಸಂಗ. ಜಯರಾಮನು ಅಲ್ಲಿ ಒಂದಿಷ್ಟೂ ಕಾಲವಿಳಂಬ ಮಾಡದೆ, ಗುಹೆಯ ಸುರಂಗಮಾರ್ಗವನ್ನು ಹಿಡಿದು ಸೈನ್ಯವನ್ನು ಮುಂದಕ್ಕೆ ಹೊರಡಿಸಿಕೊಂಡು ಹೋದನು. ಪಥವು ಮೇಲಕ್ಕೇರುತ್ತಾ ಹೋಗುತ್ತಿತ್ತು. ಅಲ್ಲಲ್ಲಿ ಸಣ್ಣ ಸಣ್ಣ ಮೆಟ್ಟಿಲುಗಳೂ ಹತ್ತಿದುವು. ಹೀಗೆ ಸುಮಾರು ಇನ್ನೂರು ಹೆಜ್ಜೆಗಳನ್ನು ನಡೆದು, ಆ ಸುರಂಗದಲ್ಲಿಯೇ ಮೇಲಮೇಲಕ್ಕೇರಿದಮೇಲೆ, ಸುರಂಗವು ಅಂತವಾಗುವಂತೆ ತೋರಿತು. ತಣ್ಣಗಾದ ಬಹಿರ್ವಾತ ಸ್ಪರ್ಶವೂ, ಮುಸಮುಸಕಾದ ತಾರಾ ಪ್ರಕಾಶದ ಪ್ರತಿಭಾಯೆಯೂ, ಗೋಚರವಾಯಿತು. ನಿಶ್ಶಬ್ದವಾಗಿ ಇನ್ನೂ ಮುಂದುವರಿಯುವಷ್ಟರಲ್ಲಿ, ಏನೋ ಮಾತುಗಳು ಕೇಳಿಸಲಾರಂಭಿಸಿದುವು. ಮತ್ತೂ ಮುಂದೆ ಹೋಗಲು, ಅಲ್ಲಿ ದ್ವಾರಪ್ರದೇಶದಲ್ಲಿ, ಇಬ್ಬರು ಸಿಪಾಯಿಗಳು ಕೈಯ್ಯಲ್ಲೇನೋ ಆಯುಧವನ್ನು ಹಿಡಿದುಕೊಂಡು ಕುಳಿತು,

ತಮ್ಮೊಳಗೆ ಏನೋ ಮಾತನಾಡಿಕೊಳ್ಳುತ್ತಿದ್ದರು. ತಮ್ಮ ಸಪ್ಪಳವು ಕೇಳಿದರೆ, ಆ ಸಿಪಾಯಿಗಳು ಕೂಗಿ, ಜೇರೆಯುವರನ್ನು ಬರಮಾಡುವರೆಂದು ನೆನೆದು, ಜಯರಾಮನು ತನ್ನ ಹಿಂದಿನವರಿಗೆ ಸನ್ನೆಯಿಂದ ಮಾಡಬೇಕಾದುದನ್ನು ಸೂಚಿಸಿ, ಬಹು ನಿಶ್ಶಬ್ದನಾಗಿ, ಮಾರ್ಜಾಲಚರಣದಿಂದ ಆ ಸಿಪಾಯಿಗಳ ಹಿಂಬದಿಗೆ ಹೋಗಿ, ಒಂದೊಂದು ಕೈಯಿಂದ, ಒಬ್ಬೊಬ್ಬರ ಕುತ್ತಿಗೆಯನ್ನು ಕವಕ್ಕನೆ ಹಿಡಿದನು. ಆ ಕ್ಷಣದಲ್ಲೇ ಒಬ್ಬರ ಮೇಲೊಬ್ಬರಂತೆ, ನಾಕಷ್ಟು ಅನುಯಾಯಿಗಳು ಅವರಮೇಲೆ ಬಿದ್ದು, ಕುಯಿಕ್–ಎನ್ನಬಿಡವೆ, ಬಂಧಿಸಿ ಹಾಕಿದರು.

ಪಾಪ! ಇದಾವುದೂ ಸೈಂಏವ್ ಮರ್ಕಾರನಿಗೆ ತಿಳಿಯದು. ಆ ಪ್ರಸಂಗವೆಲ್ಲವೂ ಸದ್ದಿಲ್ಲದೆ, ಉಪಾಯದಲ್ಲಿ ನಡೆದುದರಿಂದ ಪಲ್ಲಕ್ಕಿಯೊಂದಿಗೆ ಮುಂದುವರಿಸಿಹೋದ ಅವನಿಗೆ ಹೇಗೆ ತಿಳಿಯಬೇಕು? ಆ ಮೂಢನಾದ ವಿಷಯಲಂಪಟನು ಯಾವಾಗ ತಾನು ಚಿನ್ನಾದೇವಿಯ ವದನಾರವಿಂದವನ್ನು ಕಾಣುವೆನೋ ಎಂದು, ತಹತಹಗೊಳ್ಳುತ್ತಾ, ಪಾಲಕಿಯನ್ನು ಬಿರಬಿರನೆ ಸಾಗಿಸಿಕೊಂಡು, ದುರ್ಗಮಧ್ಯದ ತನ್ನ ಮಂದಿರದಲ್ಲಿ ಆ ಪಾಲಕಿಯನ್ನು ಇಳಿಸಿ, ಒಂದು ಕಾಲುದೀಪವನ್ನು ತರಿಸಿ, ಪಲ್ಲಕ್ಕಿಯ ಪರದೆಯನ್ನು ಸರಿಸಿ, ಅತ್ಯಾತುರದಿಂದ, ಅತ್ಯಾಸೆಯಿಂದ ಇಣಿಕಿನೋಡಿದನು--ಆಹಾ! ಅದೇ ಮುಖಚಂದ್ರ! ಬಣ್ಣದಶಾಲನ್ನು ಹೊದ್ದುಕೊಂಡು ಮುಖವನ್ನು ಮಾತ್ರ, ತೆರೆದುಕೊಂಡು ಕಣ್ಣುಮುಚ್ಚಿ ಮಲಗಿದ್ದಾಳೆ! ಚಿನ್ನಾದೇವಿಯಹುಚ್ಚು ಹಿಡಿದುಹೋದ ಅವನಿಗೆ, ಪಾಲಕಿಯೊಳಗಿರುವ ವ್ಯಕ್ತಿ ಚಿನ್ನಾದೇವಿಯೆಂದೇ ತೋರಿತು. ಸ್ವಲ್ಪವೂ ಸಂದೇಹಿಸಲಿಲ್ಲ. ಆಶ್ಚರ್ಯ! ಅತ್ಯಾಶ್ಚರ್ಯ!! ಸಂತೋಷದಿಂದ ಅವನ ಕಾಲುಗಳು ಕುಣಿಯಲಿಕ್ಕಾಗಿ ತುರಿಸಿದುವು. ಆದರೆ ಅಲ್ಲಿ ಸೇವಕರಿದ್ದುದರಿಂದ ಕುಣಿಯಲಾರದೇ ಹೋದನು. ಬಳಿಕ ಬೇಗಬೇಗನೆ ಪರದೆಯನ್ನು ಮುಚ್ಚಿ, ಪಾಲಕಿಯನ್ನು ಅಲ್ಲಿಂದ ಇನ್ನೊಂದು ಕೊಠಡಿಯೊಳಕ್ಕೆ ಕೊಂಡೊಯ್ದನು. ಆ ಕೊಠಡಿ ಮೊದಲೇ ನೂತನವಾಗಿ ನಯನಮನೋಹರವಾಗಿ ಶೃಂಗಾರಿತವಾಗಿತ್ತು. ಅಲ್ಲಿ ಪಾಲಕಿಯನ್ನಿರಿಸಿ ಹೊರಗೆಬಂದು ಬಾಗಿಲುಮುಚ್ಚಿ, ಜೋವಿಗಳಿಗೆ ಅಪ್ಪಣೆಕೊಟ್ಟು ಕಳುಹಿಸಿ, ಇನ್ನೊಂದು ಕೋಣೆಯೊಳಗೆ ಹೊಕ್ಕು, ತನ್ನ ಭೂಷಣಗಳನ್ನು ಕಳಚಿ, ಹೊಸಹೊಸ

ಮನೋಹರವಾದ ಅಲಂಕಾರಾಭರಣಗಳನ್ನು ಧಾರಣೆಮಾಡಿಕೊಳ್ಳಲಾರಂಭಿದನು. ಆಹಾ! ಸ್ವರ್ಗವು ಕಾಣುತ್ತಿದೆ! ಸಿಕ್ಕಿಬಿಟ್ಟಿತು! ಒಂದೇ ಗೇಣು!

## ೩೩

# ಕೀಚಕ ವಧೆ

ಪ್ರಿಯವಾಚಕರೇ ! ನಾವೀಗ ಪಲ್ಲಕ್ಕಿಯನ್ನಿರಿಸಿದ ಕೋಣೆಯೊಳಗೆ ಪ್ರವೇಶಮಾಡಬೇಕು. ಬಾಗಿಲನ್ನು ದೂಡಿನೋಡಿರಿ. ಹಾ! ತೆರೆಯಲಿಲ್ಲ. ಒಳಗಣಿಂದ ಚಿಲಕಹಾಕಿದೆ. ಹಾಕಿದವರು ಯಾರು? ಪಲ್ಲಕ್ಕಿಯಲ್ಲಿ ಮಲಗಿದ್ದ ಸಾಧುರಾಯನಲ್ಲದೆ ಮತ್ತಾರು? ನೋಡೋಣ! ನಮ್ಮೀ ಲೇಖನಿಯ ಮೊನೆಯ ಮೂಲಕವಾಗಿ ಬಾಗಿಲಸಂದಿನಿಂದ ಒಳಹೊಕ್ಕುಬಿಡೋಣ ಬನ್ನಿ.

ಅಹಹ! ಈ ಕೋಣೆ ಬಹು ವಿಶಾಲವಾದುದು. ನಾಲ್ಕು ದಿಕ್ಕುಗಳಲ್ಲಿ ನಾಲ್ಕು ಪಾಲಘಾಟು ಕಾಲುದೀಪಗಳು ಉಜ್ವಲವಾಗಿ ಉರಿಯುತ್ತಿವೆ. ನಾಲ್ಕು ಮೂಲೆಗಳಲ್ಲಿ ನಾಲ್ಕು ಸರದೀಪಗಳು ಮುತ್ತಿನಜಾಲರಿಗಳಂತಿದ್ದುವು. ನೆಲಕ್ಕೆ ಜಗಿಜಗಿಸುವ ಆದವಾನೀ ಬಣ್ಣದ ಜಮಖಾನೆಯನ್ನು ಹಾಸಿದೆ. ಶ್ರೇಷ್ಠವಾದ ಮಂಚವೊಂದು ಅಲ್ಲಲ್ಲಿ ಚಿನ್ನ ಬೆಳ್ಳಿಗಳ ಕಟ್ಟುಗಳಿಂದಲೂ ನೇರುವಾದ ಕೈಗೆಲಸದಿಂದಲೂ ಥಳಥಳಿಸುತ್ತಿದೆ. ಅದಕ್ಕೆ ಚಂದವಾದ ಕಮಾನಿನ ಮೇಲ್ಕಟ್ಟು; ಆ ಮೇಲ್ಕಟ್ಟಿನಲ್ಲಿ ಮುತ್ತಿನಜಾಲರಿಗಳೂ, ಬಣ್ಣಬಣ್ಣದ ಹೂವಿನದಂಡೆಗೊಂಡೆಗಳೂ ತೂಗಾಡುತ್ತಿರುವುವು. ಮಂಚದಮೇಲೆ ತುಪ್ಪುಳದಹಾಸಿಗೆ, ಕಾಶೀಪಟ್ಟೆಯ ನಾಲ್ಕಾರು ದಿಂಬುಗಳು, ಬೆಲೆಬಾಳುವ ಸೇಲಂ ಜರಿಯ ಮಿರುಮಿರುಗುವ ಹಾಸುಬಟ್ಟೆಗಳೂ ಅವುಗಳ ಮೇಲೆಲ್ಲಾ ಚೆಲ್ಲಿಕೊಂಡಿದ್ದುವು. ಘುಮಘುಮಿಸುವ ಮಂಗಳೂರು ಮಲ್ಲಿಗೆ ಅದರೊಂದಿಗೇ ದಿಲ್ಲೀಗುಲಾಬೀ ಅತ್ತರಿನ ಸುಗಂಧ ಬೇರೆ. ಹೀಗೆ ಆ ಮಂಚವು ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಿರಲು, ನಾನಾ ರೀತಿಯ ಸುಂದರ ಸುಂದರಿಯರ ಚಿತ್ರಪಟಗಳಿಂದಲೂ, ಅಲ್ಲಲ್ಲಿ ಕಂಗೊಳಿಸುವ ನಿಲುವುಗನ್ನಡಿಗಳಿಂದಲೂ, ಶೋಭಾಯಮಾನವಾಗಿ ರಂಜಿಸುವ ಗೋಡೆಗಳದೃಶ್ಯವು ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಿತ್ತು. ಹಾಗೆಯೇ ಮೇಜಿನಮೇಲೆ ಚೆಂದವಾದ ತಟ್ಟೆ

ಬಟ್ಟಲುಗಳಲ್ಲಿ ತುಂಬಿರುವ ಸುಪಕ್ವವಾದ ಬಗೆಬಗೆಯ ಹಣ್ಣುಗಳನ್ನು ನೋಡಿದರೆ, ನಮ್ಮ ಬಾಯಲ್ಲಿ ನೀರೂರುತ್ತಿದೆ. ಲೇಖನಿಯೂ ನಿಂತು ನಿಧಾನಿಸುತ್ತಿದೆ. ಆದರೆ ಕಾರ್ಯಾತುರನಾಗಿರುವ ಸಾಧುರಾಯನು ಮಾತ್ರ ಅದಾವುದನ್ನೂ ಗಮನಿಸಲೇ ಇಲ್ಲ. ಅವನು ಒಂದು ನಿಲುವುಗನ್ನಡಿಯ ಇದಿರಿನಲ್ಲಿ ನಿಂತು, ಅವಸರವಸರದಿಂದ ತನ್ನ ದಾಡಿ ಮೀಸೆಗಳನ್ನು ಹೇಗೋ ಹಾಗೆ ತಿದ್ದಿ ಸರಿಪಡಿಸಿಕೊಳ್ಳುತ್ತಿದ್ದನು.

ಅಲ್ಪಾವಕಾಶದಲ್ಲಿಯೇ ಸರಿಯಾಯಿತೆಂದುಕೊಂಡು, ತಲೆಯೊಲೆದು ಕೊಳ್ಳುತ್ತಾ, ಬಾಗಿಲಿನ ಚಿಲಕವನ್ನು ಮೆಲ್ಲನೆ ತೆಗೆದು, ಪಲ್ಲಕ್ಕಿಯೊಳಗೆ ಹೊಕ್ಕು ಮಲಗಿಕೊಂಡನು.

ಸ್ವಲ್ಪಹೊತ್ತಿನಮೇಲೆ ಆ ಕೋಣೆಯಬಾಗಿಲನ್ನು ದೂಡಿ, ತೆರೆದು ಕೊಂಡು ಸೈಯದ್ ಮರ್ಕಾರನು ಒಳಗೆಹೊಕ್ಕನು. ಆಗ ಆತನ ವಸನಭೂಷಣವು ತಿಳಿಯಾದ ಬೆಳದಿಂಗಳಂತೆ ಸ್ವಚ್ಛವಾಗಿತ್ತು. ಬಿಳೀ ಟೋಪಿ. ಸೂಕ್ಷ್ಮವಾಗಿ ಒಳಗಿನ ಅವಯವಗಳನ್ನು ಬಹಿರ್ಗತಪಡಿಸುವಷ್ಟು ತೆಳ್ಳಗಾದ ಮಿರುಗುವ ಬಿಳೀ ಅಂಗಿ, ಬಿಳೀ ಪಾಯಿಜಾಮೆ, ಅವುಗಳಲ್ಲಿ ಅಲ್ಲಲ್ಲಿ ಹೊಳೆಯುತ್ತಿರುವ ಜರೀಹೂಗಳು. ಸುಗಂಧತೈಲವನ್ನು ಲೇಪಿಸಿ, ನೀವಿನೀವಿ ಹೊಳೆಯುತ್ತಿರುವ ದಾಡಿಮೀಸೆ. ಅವನ ಸರ್ವಾಂಗವೂ ಸುಗಂಧಮಯವಾಗಿತ್ತು. ಮಂದಿರದೊಳಗೆ ಹೊಕ್ಕವನು ಬಾಗಿಲ ಚಿಲಕಹಾಕಿ ಭದ್ರಪಡಿಸಿ ಆಶಾದೃಷ್ಟಿಯನ್ನು ಅಡಿಗಡಿಗೆ ಪಲ್ಲಕ್ಕಿಯಮೇಲೆ ಪಸರಿಸುತ್ತಾ, ಮುಗುಳ್ನಗುತ್ತಾ ಬಾಯಿಯಿಂದ ಸುಯ್ಯೆಂದು ಸೊಗಸಿನರಾಗ ಹೊರಡಿಸುತ್ತಾ, ನಿಲುವುಗನ್ನಡಿಯ ಇದಿರಿನಲ್ಲಿ ನೆಟ್ಟಗೆನಿಂತು, ಬಾರಿಬಾರಿಗೂ ದಾಡಿಮೀಸೆಗಳನ್ನು ನೀವಿ ಹುರಿಮಾಡಿ, ಅಂಗಿಪಾಯಿಜಾಮೆಗಳನ್ನು ಎಳೆದು ಸರಿಮಾಡಿ, ತನ್ನೊಳಗೆ ತಾನೇ ಹಿಗ್ಗಿಕೊಂಡನು. ಬಳಿಕ ಮೆಲ್ಲನೆ ಪಲ್ಲಕ್ಕಿಯ ಬಳಿಗೆಬಂದು, ಮೊದಲು ಪರದೆಯೆಡೆಯಿಂದ ಸ್ವಲ್ಪ ಇಣಕಿ ಬಳಿಕ ಪರದೆಯನ್ನು ಪೂರಾ ತೆಗೆದುಹಾಕಿದನು. ಆಹಾ! ಆ ಪಾದಮಸ್ತಕವಾಗಿ ಮುಸುಕು ಹಾಕಿಕೊಂಡು ಮಲಗಿದೆ ಅವನ ಸ್ವರ್ಗಪಕ್ಷರಗಿಳಿ! ಗಾಢನಿದ್ರೆ, ಸ್ವಲ್ಪಹೊತ್ತು ಮರ್ಕಾರನು ಮೋಹಪದದಾಹದನೇತ್ರದಿಂದ, ಆ ಮುಸುಕಿನ ದೃಶ್ಯವನ್ನು ನೋಡುತ್ತಾ, ಬಾಯಿಯಿಂದ ಆಶಾರಸವನ್ನಿಳಿಸುತ್ತಾ, ನಾಲಿಗೆ ಚಪ್ಪರಿಸುತ್ತಾ, ಬೆರಳನ್ನು

ಚೀಪಿಕೊಂಡು ತಕತಕನೆ ಕುಣಿದನು. ನಿದ್ರಾಮುಕುಳಿತವಾಗಿರುವ ಈ ಚಿನ್ನಾ ಕುಸುಮವನ್ನು ನಿದ್ರೆಯಿಂದ ಎಚ್ಚರಿಸಲೆ? ಮುಸುಕು ತೆಗೆಯಲೆ? ಬೇಡ. ತೃಪ್ತಿ ಇಲ್ಲ. ಮುಸುಕು ತೆಗೆದು ಅವಳ ಮುಖಸೌಂದರ್ಯಾಮೃತವನ್ನು ಮನದಣಿಯೆ ಹೀರಲೇಬೇಕು. ತಾಳಲು ಸಾಧ್ಯವೇ ಇಲ್ಲ. ಹಸಿದು ಕಂಗಾಲಾದ ಪ್ರಾಣಿ ಸಿಕ್ಕಿದತುತ್ತನ್ನು ನುಂಗುವುದಕ್ಕೆ ತಾಳುವುದುಂಟೆ? ಇಲ್ಲ. ಮರ್ಕಾರನು ಮೆಲ್ಲನೆ, ಬಹುಮೆಲ್ಲನೆ—ಕುಸುಮಪರಾಗವನ್ನು ಮುಟ್ಟುವಷ್ಟು ಮೆಲ್ಲನೆ, ಮಲಗಿದ ವ್ಯಕ್ತಿಯ ಮುಖಭಾಗದ ಶಾಲುವೆಯನ್ನು ಎತ್ತಿದನು.

ಮುಸುಕನ್ನು ಎತ್ತಿದ್ದೇ ತಡ! ನಾಗರಹಾವಿನ ಹೆಡೆಯನ್ನು ಮುಟ್ಟಿದಂತಾದನು—ಮಿಂಚನ್ನು ಮುಟ್ಟಿದಂತಾದನು. ಹಾರಿಬಿದ್ದನು! ಗುಂಡಿಗೆ ಒಡೆದು ಹೋಯಿತು!—ಜೀವ ಹಾರಿಹೋದಂತಾಯಿತು! ಸ್ವರ್ಗದಿಂದ ಧೊಪ್ಪನೆ ಪಾತಾಳಕ್ಕೇ ಬಿದ್ದುಬಿಟ್ಟನು! ಪಲ್ಲಕ್ಕಿಯೊಳಗಿರುವ ಆ ಮುಖವು ಯಾರ ಮುಖ! ಚಿನ್ನಾದೇವಿಯ ಸುಕುಮಾರ ಮುಖವೆ? ಅಲ್ಲ! ಅಲ್ಲ; ಪೂರ್ಣಚಂದ್ರನಂತೆ ಸ್ವಚ್ಛ ಸುಕೋಮಲವಾದ ಆ ಮುಖವೆಲ್ಲಿ? ದಾಡಿ – ಮೀಸೆಗಳಿಂದ ಭಯಂಕರವಾಗಿ ತೋರುವ ಈ ಮುಖವೆಲ್ಲಿ? ಇದು, ಆ ಫಕೀರವೇಷಧಾರಿಯಾದ ಸಾಧೂರಾಯನ ಮುಖವಲ್ಲವೆ? ಇದೇನು ವಿಚಿತ್ರ! ಆಗ, ಕಂಡುದು ಭ್ರಾಂತಿಯೋ? ಈಗ ಕಾಣುತ್ತಿರುವುದು ಭ್ರಾಂತಿಯೋ? ಅಥವಾ ಭೂತಮಾಯೆಯೋ? ಇಷ್ಟು ಯೋಚನೆಗಳು, ಕ್ಷಣವೆನ್ನುವದರೊಳಗೆ ಮರ್ಕಾರನ ಎದೆ ಗುಂಡಿಗೆಯನ್ನು ಗಡಗಡನೆ ಅಲುಗಾಡಿಸಿಬಿಟ್ಟವು. ಭೀತಿಯಿಂದ ಮತ್ತೊಮ್ಮೆ ಆ ಮುಖವನ್ನು ನೋಡಿದನು. ಅಬ್ಬಾ! ಆ ಮುಖದ ಜ್ವಾಲಾನೇತ್ರಗಳು ಮರ್ಕಾರನ ಮುಖವನ್ನು ದುರುದುರನೆ ನೋಡುತ್ತಿವೆ! ಮರ್ಕಾರನ ಗಂಟಲು ಒಣಗಿತು; ಕೈಕಾಲುಗಳು ನಡುಗಿದವು. ಬಾಲ್ಯದ ಬೈಲಾಟದ ಕೀಚಕವಧೆಯ ಆ ದೃಶ್ಯವು ಅವನ ಕಣ್ಣಿಗೆ ಕಟ್ಟಿತು! ಇಲ್ಲಿ ಈಗತಾನೆ ಕೀಚಕ! ಮಾಡುವುದೇನು?........ಹೇಡಿ! ಮರ್ಕಾರನು ತೀರಾ ಹೇಡಿ, ಅಂಜುಗುಳಿ, ಅಂಪಮೋಲೆ, ಕೇಳುವುದೇನು? ಒಂದುಬಗೆಯಾದ ವಿಕಾರ ಕಂಪಿತ ಸ್ವರದಿಂದ "ಆ........" ಎಂದು ಆರ್ತನಾದಮಾಡಿದನು! ಕಣ್ಣು ಮುಚ್ಚಿದನು. ಮೆಲ್ಲನೆ ಬಿಡಿಸಿ ನೋಡಿದನು. ಥಳಥಳಿಸುವ ತೀಕ್ಷ್ಣಾಗ್ರದ ದೀರ್ಘಕೃಪಾಣವನ್ನು ತನಗೆ ಚುಚ್ಚುವಂತೆ ಹಿಡಿದು ನಿಂತಿ

ರುವ, ಭಯಂಕರ ಫಕೀರನನ್ನು ನೋಡಿದನು. ಅದೇ ಸಾಧೂರಾಯನ ರುದ್ರಮೂರ್ತಿ!

ಸಾಧೂರಾಯನು ಕರ್ಕಶ ಸ್ವರದಿಂದ, "ನೆನೆದುಕೊ! ಪಾಪಿ! ನೆನೆದುಕೊ! ಚಾಂಡಾಲ! ರಾಕ್ಷಸ! ನೆನೆದುಕೊ, ಗುತ್ತೀದುರ್ಗದ ಚಿತ್ರವನ್ನು! ನೆನೆದುಕೊ; ಮೋಸದಿಂದ ದುರ್ಗಪ್ರವೇಶ ಮಾಡಿದುದನ್ನು! ನೆನೆದುಕೊ; ಗೋವಿಂದರಾಜನನ್ನು ಒದೆದ ನಿನ್ನ ಈ ಕಾಲಿನ ಪರಾಕ್ರಮವನ್ನು........" ಎಂದು ಮರ್ಕಾರನ ತೊಡೆಯಮೇಲೆ ಒಂದು ಒದೆಯನ್ನಿತ್ತನು.

ಸಾಧೂರಾಯನ ಕಣ್ಣುಗಳಿಂದ ಕಿಡಿಗಳು ಉದರುತ್ತಿದ್ದುವು. ಮರ್ಕಾರನು ಜೀವಚ್ಛವ! ಸಾಧೂರಾಯನು ಒದೆಯುತ್ತಲೇ,ಮರ್ಕಾರನು ಧಡಮ್ಮನೆ ಬಿದ್ದುಬಿಟ್ಟನು.

ಸಾಧುರಾಯನು ಪುನಃ ಕತ್ತಿಯ ತುದಿಯನ್ನು ಅವನೆದೆಗೆ ಮುಟ್ಟಿಸಿ, "ನರಪಿಶಾಚಿ, ನೆನೆ—ನೆನೆದುಕೊ, ಗೋವಿಂದರಾಜನ ಕೊಲೆಯನ್ನು! ಚಿನ್ನಾದೇವಿಯ ಪ್ರತಿಜ್ಞೆಯನ್ನು! ...........ಪಾಪೀ........!" ಮರ್ಕಾರನು, ಬಿದ್ದುಹೋದ ನಾಲಿಗೆಯಿಂದ, ''ದಪ್ಪದ್ಪಮ್ಮಯ್ಯಾ! ಕೊಲ್‌ಲ್ಲ........ಬೇಡ....'' ಎಂದು ಅಂಗಲಾಚಿದನು.

''ಏಳು! ನೀಚಾ! ನಿನ್ನನ್ನು ಈಗಲೇ ತಲೆಹಾರಿಸಿ ಕೊಲ್ಲಲಿಕ್ಕೆ ನಾನು ನಿನ್ನಂತೆ ಕಟುಕನೆಂದೂ— ಚಾಂಡಾಲನೆಂದೂ— ನರಹಂತಕನೆಂದೂ ತಿಳಿದೆಯೋ? ದ್ರೋಹಿ! ನಡೆ, ಕಟುಕರೇ ನಿನ್ನ ಕೊಲೆಯನ್ನು ಮಾಡುವರು! ನ್ಯಾಯಾಧೀಶರಾದ ಶ್ರೀಕೃಷ್ಣದೇವರಾಯ ಮಹಾರಾಜರೇ ನಿನಗೆ ತಕ್ಕ ದಂಡನೆಯನ್ನು ವಿಧಿಸುವರು. ನಡೆ, ನಾಯಿಯಹಾಗೆ, ತೆರೆಬಾಗಿಲು !''

ಮರ್ಕಾರನಿಗೆ ಉಪಾಯವಿಲ್ಲ. ತಿಲಾಂಶದಷ್ಟು ಊಹೂ—ಎಂಬ ಭಾವವನ್ನು ತೋರುವುದಾದರೆ, ಕತ್ತಿಯ ಸುನಿಶಿತವಾದ ಕರಾಳಾಗ್ರವು ಹೊಕ್ಕೇಬಿಡುವುದು ಅವನ ಆ ಅಳ್ಳೆದೆಯೊಳಗೆ! ಮಾಡುತ್ತಾನೇನು? ತಡವರಿಸುತ್ತಾ ಎದ್ದು ಬಾಗಿಲ ಬಳಿಗೆಹೋಗಿ, ಬಾಗಿಲನ್ನು ತೆರೆದನು. ಸಾಧೂರಾಯನ ಕತ್ತಿಯ ಮೊನೆ, ಅವನನ್ನೂ ಮಂದಿರದ ಬಹಿರ್ಭಾಗಕ್ಕೆ, ಒತ್ತಿಕೊಂಡು ಹೋಯಿತು.

ಇದೇನು ? ಅಲ್ಲಿ ಎಲ್ಲಿಯೂ, ಮರ್ಕಾರನ ಸೇವಕರ ಸದ್ದೇ ಇಲ್ಲ. ಎಲ್ಲೆಲ್ಲಿಯೂ ನಿಶ್ಶಬ್ದ, ಆಕಾಶದಲ್ಲಿ ಅಸಂಖ್ಯ ತಾರೆಗಳು ಮಿನುಗಿ ಮಿನುಗಿ ನಗುತ್ತಿದ್ದುವು. ಗಾಳಿ ಸುಯ್ಯನೆ ಹೀಯಾಳಿಸುತ್ತಾ ಬೀಸುತ್ತಿತ್ತು.

ಸಾಧೂರಾಯರು ಒಂದು ಸಣ್ಣ ಸಿಳ್ಳು ಹಾಕಿದ್ದೇ ತಡ. ಅನೇಕ ಮಂದಿ ಹಿಂದೂ ಖಡ್ಗಪಾಣಿಗಳು ಅಲ್ಲಿ ಪ್ರಾಪ್ತರಾದರು. .... ...ಅವರ ಮಧ್ಯದಿಂದ ಜಯರಾಮನು ಮುಂದಕ್ಕೆ ಬಂದು, ಸಾಧೂರಾಯನನ್ನು ಕುರಿತು, "ರೂಪ ಸಿಂಗ್‌ಜೀ! ಅಪ್ಪಣೆ ಏನು?" ಎಂದು ಕೇಳಿದನು.

ರೂಪಸಿಂಗ್, "ಜಯರಾಮ್‌ಜೀ! ಈ ಅರಮನೆಯ ಸೇವಕವೃಂದ ವೆಲ್ಲವೂ ಬಂಧನಗೊಳಗಾಯಿತೆ ?"

ಜಯ, "ಆಯಿತು, ನಾಲ್ಕಾರುಮಂದಿ ಸೇವಕರು ಮಾತ್ರವೇ ಇದ್ದರು. ಅವರನ್ನು ನಿರ್ವಿಘ್ನವಾಗಿ ಬಂಧಿಸಿ ಆಯಿತು."

ರೂಪ, "ಸರಿ, ಇಲ್ಲಿ ಕೀಚಕವಧೆಯೂ ಆಯಿತು. ಆ ಭಾರತ ಕೀಚಕ ನನ್ನು ಜೀವತೆಗೆದು ಕೊಂದನು. ಆ ಭೀಮಸಿಂಹನ ಕೀರ್ತಿಗೆ ಅಗೌರವ ಮಾಡುವುದೇಕೆಂದು ಯೋಚಿಸಿ, ಈ ಕೀಚಕನನ್ನು ಈ ರೂಪಸಿಂಹನು ಜೀವ ತೆಗೆಯದೆ ಜೀವಚ್ಛವವಮಾಡಿದ್ದಾನೆ. ಆಹಾ! ಇನ್ನು ಮುಂದಿನ ವಿಚಾರವು ನಮ್ಮ ಧರ್ಮರಾಯರಿಗೆ ಸೇರಿದೆ. ಈಗ ಈ ಪಾಪಿಯನ್ನು ಹೆಡೆಮುಡಿ ಬಿಗಿ ಯೋಣಾಗಲಿ !"

## ೩೪

# ದುರ್ಗ ಪ್ರವೇಶ

ಪಾಪ! ಅಂದು, ಮರ್ಕಾರನು, ಸ್ವರ್ಗಸುಖತುಲ್ಯವಾದ ಆನಂದವನ್ನು ಅನುಭವಿಸಬೇಕೆಂದು ಬಯಸಿದ್ದನು. ಆದುದರಿಂದಲೇ, ಅನಾವಶ್ಯಕ ಸೇವಕವೃಂದವನ್ನೆಲ್ಲಾ ದೂರಕ್ಕೆ ಕಳುಹಿಸಿಕೊಟ್ಟು, ವಿಶ್ವಾಸಿಗಳಾದ ನಾಲ್ಕಾರು ಮಂದಿಯನ್ನು ಮಾತ್ರ, ಮಂದಿರದಲ್ಲಿಟ್ಟುಕೊಂಡಿದ್ದನು. ಅದುಃಕಾರಣ, ಜಯ ರಾಮಾದಿಗಳಿಗೆ ಆ ಸ್ವಲ್ಪಮಂದಿಯನ್ನು ಶಬ್ದವಿಲ್ಲದೆ ಬಂಧಿಸಲು ಅನುಕೂಲ

ವಾಯಿತು. ಅಂತೆಯೇ, ಅವನು ತನ್ನ ಸೇನಾಸಹಾಯದಿಂದ, ಒಮ್ಮೆಗೇ ಅವಗನ್ನು ಹಿಡಿದು, ಮಿಸುಕಾಡದಂತೆ, ಕಟ್ಟಿ ಕೆಡಹಿದ್ದನು.

ಆ ಸಮಯದೊಳಗೆ, ಅದೇ ಗತಿ ಮರ್ಕಾರನಿಗೂ ಪ್ರಾಪ್ತವಾಗಿತ್ತು. ರೂಪಸಿಂಗನು, "ಜೈ ಭುವನೇಶ್ವರೀ!" ಎಂದು ಕೂಗಿದನು. ಅದನ್ನನುಸರಿಸಿ, ನೂರಾರು ಮಂದಿಯ ಜಯಘೋಷವು, ನಿಶಿತಬಾಣಗಳಂತೆ, ಆ ನಿಶೀಥ ಪ್ರಕೃತಿಯನ್ನು ಸೀಳಿಕೊಂಡು, ನಾಲ್ಕು ಕಡೆಯೂ ಕೇಳಿಸಿತು.

ದುರ್ಗಶಿಖರದಲ್ಲಿ ಅಪರರಾತ್ರಿಯಲ್ಲಿ, ಅಕಸ್ಮಾತ್ತಾಗಿ ಹೊರಟ, ಆ ಪ್ರಚಂಡ ಜಯಾರವವನ್ನು ಕೇಳಿ, ದುರ್ಗದಳಾಧಿಪನು ಬೆಚ್ಚರಬಿದ್ದು, ಸಣ್ಣ ಸೇನೆಯೊಂದಿಗೆ, ಅರಮನೆಯಕಡೆಗೆ, ಧಾವಿಸಿ ಬರಲಾರಂಭಿಸಿದನು. ಅವನು ಸಮೀಪಕ್ಕೆ ಬರಲು, ಜಯರಾಮನೂ ಸಾಧೂರಾಯನೂ, ಗಂಭೀರಧ್ವನಿಯನ್ನು ಏರಿಸುತ್ತಾ, "ಯಾರವರು! ಆಯುಧವನ್ನು ಕೆಳಗಿಟ್ಟು, ಮುಂದಕ್ಕೆ ಬರೋಣಾಗಲಿ! ಈ ದುರ್ಗವೀಗ ಶ್ರೀಕೃಷ್ಣದೇವರಾಯ ಮಹಾರಾಜರ ವಶವಾಗಿದೆ. ದುರ್ಗಾಧಿಪ—ಸೈಯದ್ ಮರ್ಕಾರನು ನಮ್ಮ ಬಂದಿಯಾಗಿ ಬಿದ್ದಿದ್ದಾನೆ. ನಮ್ಮ ಮಾತನ್ನು ಮೀರಿ ಮುಂದೆ ಬರುವುದಾದರೆ, ಈ ಮರ್ಕಾರನ ದುರ್ಗತಿಯೇ ನಿಮಗೂ ಬರುವುದು! ಎಚ್ಚರಿಕೆ! ಜೈ! ಶ್ರೀಕೃಷ್ಣದೇವ ಸಾರ್ವಭೌಮಾ!" ಎಂದು ಗರ್ಜಿಸಿಹೇಳಲು, ರಾಯನ ಸೈನಿಕರೆಲ್ಲರೂ, ಖಡ್ಗವನ್ನು ಎತ್ತಿ, ಝಳಪಿಸುತ್ತಾ, "ಕರ್ಣಾಟಕ ರಮಾರಮಣ ಜೈ," ಎಂದು ನಿರ್ಘೋಷಣಗೈದರು.

ಹಾಗೆ ನಿರ್ಘೋಷಣಾಯಮಾನವಾದ ವಾತಾವರಣದ ಮಧ್ಯದಲ್ಲಿದ್ದು, ದುರ್ಗದಳಾಧೀಶನು ಕಿಂಕರ್ತವ್ಯತಾಮೂಢನಾಗಿ, ಮೇಲೆಕೆಳಗೆ ನೋಡುತ್ತಿರಲು ಜಯರಾಮನು ಕೋಟೆಯಬುರುಜಿನಮೇಲೇರಿ, ಅಲ್ಲಿದ್ದ ಒಂದು ಫಿರಂಗಿಯನ್ನು ಹಾರಿಸಿದನು.

"ಢ್ಞಾಂ" ಎಂದು ದೊಡ್ಡದೊಂದು ಶಬ್ದವು ಎಲ್ಲೆಲ್ಲಿಯೂ ಕವಿದ ನಿಶಾನಿಶ್ಶಬ್ದತೆಯನ್ನು ಭೇದಿಸಿಕೊಂಡು, ಹತ್ತೆಂಟು ಮೈಲುಗಳ ಭೂವಲಯದೊಳಗೆಲ್ಲಾ ಪ್ರತಿಧ್ವನಿತವಾಗಿ ಎಲ್ಲರನ್ನೂ ಚುಚ್ಚಿ ಥಟ್ಟನೆ ಎಚ್ಚರಿಸಿಬಿಟ್ಟಿತು.

ಮರುನಿಮಿಷದಲ್ಲಿಯೇ ದುರ್ಗದ ಕೆಳಭಾಗದಿಂದ ಗಗನವನ್ನು ಭೇದಿಸುತ್ತಾ ಹೋಯಿತು—ಇನ್ನೊಂದು ಫಿರಂಗಿಯ ಶಬ್ದ! ಅದು ರಾಯನ ಸೇನಾಭಾಗದಿಂದ ಹೊರಟ ಪ್ರತಿಶಬ್ದವಾಗಿತ್ತು. ಈ ಶಬ್ದ, ಪ್ರತಿಶಬ್ದಶ್ರವಣದಿಂದ ದುರ್ಗದಕ್ಷಾಧೀಶನು ಏನೂ ತೋರದೆ, ಕತ್ತಲೆಯಲ್ಲಿ ಸಿಕ್ಕಿಬಿದ್ದಂತಾದನು. ಕಡೆಗೆ ಶತ್ರುಗಳ ಮಸ್ತಂತ್ರವು ಫಲಕಾರಿಯಾಗುವುದೆಂದು ನೆನೆದು ಸುಮ್ಮನೆ ಕೈಮಾಡಿ ಪ್ರಯೋಜನವಿಲ್ಲವೆಂದು ಬಗೆದು ನಿರಾಯುಧ ಸೇನಾಸಮೇತನಾಗಿ ಜಯರಾಮನ ಕೈವಶನಾದನು. ಜಯರಾಮನು ಅವರೆಲ್ಲರ ಕೈಗಳನ್ನೂ ಬಂಧಿಸಿ ನಿಲ್ಲಿಸಿದನು.

ನೋಡನೋಡುವಷ್ಟರಲ್ಲಿಯೇ ಬೆಳ್ಳನೆ ಬೆಳಗಾಯಿತು; ವೀರಪಂಚಮೀ ಸುದಿನವು ಮೂಡಿತು. ಸೂರ್ಯೋದಯವಾಯಿತು. ಉನ್ನತವಾದ ಮುದಗಲ್ ದುರ್ಗಶಿಖರದ ಸೌಧಾಗ್ರದಲ್ಲಿ ಹಾರುಗಾಡುವ ಅರುಣಕಿರಣಗಳೊಂದಿಗೆ ಕ್ರೀಡಿಸುತ್ತಾ, ವಿಜಯನಗರದ ವರಾಹಾಂಕಿತವಾದ ವಿಜಯಪತಾಕವು ಪ್ರಭಾತಮಾರುತನೊಂದಿಗೆ ಬೆರೆತು ಕುಣಿಕುಣಿದಾಡುತ್ತಿದ್ದಿತು. ಪಕ್ಷಿಗಳು ಮಂಗಳಗೀತವನ್ನು ಹಾಡುತ್ತಿವೆ. ಆ ಚಿಲಿಪಿಲಿಯೊಂದಿಗೆ ಅಗೋ ಕೇಳಬರುತ್ತಿದೆ ಮಂಗಳವಾದ್ಯದ ಮಂಜುಳರವ! ವಿಜಯಭೇರಿಯ ಘನಸ್ವನ! ಆಃ! ಜಯಸೂಚಕಧ್ವನಿವು ಭೂನಭೋಂತರಾಳವನ್ನು ಭೇದಿಸುತ್ತಿದೆ! ಅಗೋಗೋ! ಶ್ರೀಕೃಷ್ಣದೇವರಾಯ ಮಹಾರಾಜರು ನೂತನವಾಗಿ ವಿಶೇಷ ರೀತಿಯಿಂದ ಶೃಂಗಾರಿತವಾದ ಪಟ್ಟದಾನೆಯ ಬಂಗಾರದ ಅಂಬಾರಿಯಮೇಲೆ ಆರೋಹಿತನಾಗಿ, ಸಚಿವ, ಸೈನ್ಯ, ಸೈನ್ಯಾಧೀಶ, ಪರಿವಾರ, ಸರ್ವವೈಭವ ಸಮೇತನಾಗಿ ದುರ್ಗಪ್ರವೇಶಮಾಡುತ್ತಿದ್ದಾನೆ! ಫಿರಂಗಿಗಳು ಅಬ್ಬರಿಸುತ್ತಾ ಇಂದ್ರಲೋಕಕ್ಕೆ ಈ ವಾರ್ತೆಯನ್ನು ಕಳುಹಿಸುತ್ತಿವೆ. ಸಂಭ್ರಮವೇ ಸಂಭ್ರಮ! ಮಹಾವಿಜಯೋತ್ಸವಾರಂಭ"

## ೨೫

## ರೂಪಸಿಂಗ್

ಗೊತ್ತುಮಾಡಿದ ಸಮಯವು ಪ್ರಾಪ್ತವಾಯಿತು. ಮುದಗಲ್ ದುರ್ಗ ಸೌಧದ ಸಭಾಮಂಟಪದಲ್ಲಿ, ಮಹಾವೀರರ ಸಭೆಯೊಂದು ಸೇರಿತು. ಶ್ರೀಕೃಷ್ಣ

ದೇವರಾಯನು ಸರ್ವರಾಜವೈಭವಾಂಕಿತನಾಗಿ, ಉತ್ತುಂಗ ಸಿಂಹಾಸನಾರೂಢನಾಗಿದ್ದನು. ಅವನ ಬಲಭಾಗದ ವೀರಾಸನದಲ್ಲಿ ಅಮಾತ್ಯಶೇಖರ ತಿಮ್ಮರಸನೂ, ಎಡಬದಿಯ ದಿವ್ಯಾಸನದಲ್ಲಿ ರೂಪಸಿಂಗನೂ, ಅನಂತರ ಸಾಲುಸಾಲಾಗಿ ತಾರತಮ್ಯಕ್ಕನುಸಾರವಾದ ಮಹಾಸರದಾರರೂ, ಸರದಾರರೂ, ಸೇನಾನಾಯಕರೇ ಮೊದಲಾದ ರಾಜ್ಯಾಧಿಕಾರಿಗಳೂ ಆ ಆಸನಗಳಮೇಲೆ ಗಾಂಭೀರ್ಯದಿಂದ ಉಪಸ್ಥಿತರಾಗಿದ್ದರು. ಅವರೆಲ್ಲರಿಗಿಂತಲೂ ರೂಪಸಿಂಗನ ಬಣ್ಣವೊಂದು ವಿಶೇಷರೀತಿಯದಾಗಿತ್ತು. ಪ್ರತಿಯೊಬ್ಬರ ಕಣ್ಣುಗಳೂ ಅವನ ಕಡೆಗೇ ಓಡುತ್ತಿದ್ದವು. ಅವನು ಅಷ್ಟು ಮುದ್ದುಮುದ್ದಾಗಿದ್ದನು. ತುಂಬಿದತರುಣ; ತಾರುಣ್ಯತೇಜದಿಂದ ಮಿನುಗುತ್ತಿರುವ ಗೌರವವರ್ಣದ ಸುಂದರವಾದ ಮುಖ; ಮುಖದ ಮಧ್ಯದಲ್ಲಿ ಸುಂದರವಾಗಿ ಚಿತ್ರಿತವಾಗಿರುವ ಎಳೆಮೀಸೆ; ಹಣೆಯಲ್ಲಿ ತಿಲಕ, ತಲೆಯಲ್ಲಿ ಜರತಾರಿ ರುಮಾಲು; ಕಿವಿಯಲ್ಲಿ ಕುಂಡಲಗಳು; ಮಿರುಗುವ ಅಂಗಿ; ಅದರಮೇಲೆ ಬಿಗಿದುಕೊಂಡಿರುವ ನಡುವಟ್ಟಿ; ಆ ವೀರದಟ್ಟಿಯಿಂದ ನೇತಾಡುತಿತ್ತು ಒಂದು ಖಡ್ಗಕೋಶ; ಜರಿಯ ರೇಖೆಯಿಂದೊಪ್ಪುವಕಾಲುಚೀಲ; ಬಣ್ಣದ ಪಾದರಕ್ಷೆ, ಅವನು ಕೈಗಳನ್ನು ಕಟ್ಟಿಕೊಂಡು, ಠೀವಿಯಿಂದ, ಮೂರ್ತಿಮಂತಗಾಂಭೀರ್ಯತೆಯಿಂದ ಸರ್ವಜನಾಕರ್ಷಿತನಾಗಿ ಕುಳಿತಿದ್ದನು. ಅವನ ವೃದ್ಧಮಾತಾಪಿತರು ಸರ್ವಾಂಗವನ್ನೂ ಬಟ್ಟೆಯಿಂದ ಮುಚ್ಚಿಕೊಂಡು, ಒಂದೆಡೆಯಲ್ಲಿ ಕುಳಿತಿದ್ದರು.

ರೂಪಸಿಂಗನು ಈಗ್ಗೆ ನಾಲ್ಕಾರುದಿನಗಳ ಹಿಂದೆ, ನಮ್ಮ ರಾಯನಸನ್ನಿಧಿಗೆ ನೂತನವಾಗಿ ಬಂದಿದ್ದನು. ಆಗ ಆತನು ಇಂದಿನಂತಹ ಬೆಲೆಬಾಳುವ ಉಡಿಗೆತೊಡಿಗೆಯಿಂದ ಮಂಡಿತನಾಗಿದ್ದಿಲ್ಲ. ದಾರಿದ್ರ್ಯ ಸೂಚಕವಾದ ಸಾಮಾನ್ಯ ಭೂಷಣಗಳಿಂದ ಉದ್ಯೋಗಾರ್ಥಿಯಾಗಿ ರಾಯನ ಪಾದಪ್ರದೇಶದಲ್ಲಿ ನಿಂತಿದ್ದನು. ಅವನೊಬ್ಬ ಕ್ಷತ್ರಿಯಕುಲದವನಂತೆ. ಸೈಯದ್ ಮರ್ಕಾರನ ದುರಾಗ್ರಹದಿಂದ ಅವನಿಗೆ ದಾರಿದ್ರ್ಯವು ಸಂಪ್ರಾಪ್ತಿಯಾಯಿತಂತೆ. ವೃದ್ಧಮಾತಾಪಿತರನ್ನು ಕೂಡಿಕೊಂಡು, ಭಿಕ್ಷಾರ್ಥಿಯಾಗಿ ತಿರುಗುತ್ತಿದ್ದನಂತೆ. ಹಾಗಿರಲು, ರಾಯನು ಮುದಗಲ್ ದುರ್ಗವನ್ನು ಮುತ್ತಿಗೆಹಾಕಿ, ಕುಳಿತಿರುವುದನ್ನು ನೋಡಿ, ತನ್ನ ಸಾಹಸವನ್ನು ತೋರಿಸಿ, ರಾಯನ ಕೃಪೆಯನ್ನು ಸಂಪಾದಿಸಲಿಕ್ಕೂ, ನೀಚ ಮರ್ಕಾರನ ಮೇಲಿದ್ದ ತನ್ನ ಹಗೆಯನ್ನು ತೀರಿಸಲಿಕ್ಕೂ,

ತಕ್ಕ ಸಮಯವು ಪ್ರಾಪ್ತವಾಯಿತೆಂದು ತಿಳಿದು, ರಾಯನ ಸನ್ನಿಧಿಗೆ ಬಂದ ನಂತೆ. ಹೀಗೆ ತನ್ನ ಚರಿತ್ರೆಯನ್ನು ಹೇಳಿಕೊಂಡು ಮುದಗಲ್‌ದುರ್ಗವನ್ನು ಸಾಧಿಸಿಕೊಡುವುದಾಗಿ, ರಾಯನ ಮುಂದೆ ಪ್ರತಿಜ್ಞೆಯನ್ನು ಮಾಡಿದನು. ಪರ ಹೃದಯಭಾವಜ್ಞನಾದ ರಾಯನು ರೂಪಸಿಂಗನ ಸರಳಸ್ವಭಾವಕ್ಕೆ ಮೆಚ್ಚಿ ನಂಬಿ, ಸೇನಾಧಿಪತಿ ಜಯರಾಮನ ಸ್ವಾಧೀನಕ್ಕೆ ರೂಪಸಿಂಗನನ್ನು ಒಪ್ಪಿಸಿ ಬಿಟ್ಟಿದ್ದನು. ರೂಪಸಿಂಗನು ತನ್ನ ಬುದ್ಧಿಚಾತುರ್ಯದಿಂದ ಜಯರಾಮನಿಂದಲೂ ಗೌರವವನ್ನು ಹೊಂದಿ, ತಾನುಮಾಡಿದ ಪ್ರತಿಜ್ಞೆಯನ್ನು ಹೇಗೆ ಕೊನೆಗಾಣಿಸಿದನೆಂಬುದೆಲ್ಲವೂ ಪ್ರಿಯವಾಚಕರಿಗೆ ಗೊತ್ತಿದ್ದ ವಿಷಯವೇ ಸರಿ. ಇಂದಿನ ವಿಜಯಸಭೆಯಲ್ಲಿ ಸೈಯದ್ ಮರ್ಕಾರನಿಗೆ ತಕ್ಕ ಶಾಸನವೂ, ದುರ್ಗಸ್ವಾಧೀನಸಾಧನೆಯಲ್ಲಿ ಸಾಹಸವನ್ನು ಹೂಡಿದ ಶೂರರಿಗೆ ತಕ್ಕ ಬಹುಮಾನವೂ, ಇತ್ಯಾದಿ ಸಮುಚಿತವಾದ ಕಾರ್ಯಕ್ರಮಗಳು ನೆರವೇರಲಿಕ್ಕಿರುವುವು. ವಂದಿಮಾಗಧರು ರಾಯನ ವಂಶಬಿರುದಾವಳಿಯನ್ನು ಹೊಗಳಿ, ಪರಾಕುಮಾಡಿದಮೇಲೆ ಸಭಾಕಾರ್ಯಕ್ರಮಕ್ಕೆ ಪ್ರಾರಂಭವಾಯಿತು. ಮೊದಲು ಶನಿರೂಪನಾದ ಮರ್ಕಾರನ ವಿಷಯವನ್ನು ತೀರಿಸಿ, ಅನಂತರ ವಿಜಯನಂದ ಸಮಾರಂಭ. ಅದರಂತೆ ಮೊದಲು ಮರ್ಕಾರನ ಅಪರಾಧ ವಿಚಾರಣೆಯಾಯಿತು. ಅದನ್ನು ವಿಚಾರಿಸುವುದೇನು? ಅವನು ಸುತ್ತಮುತ್ತಲಿನ ಗ್ರಾಮಪ್ರಜಾಪೀಡಕನೆಂಬುದೇನೋ ಲೋಕಪ್ರಸಿದ್ಧ. ಅದರಮೇಲೆ ರಾಯನಿಗೆ ಮೋಸಮಾಡಿದ ಮಹಾಚೋರ; ರಾಯನ ಶತ್ರುಪಕ್ಷವನ್ನು ಸೇರಿದ ವಿಶ್ವಾಸಘಾತಕ; ಗೋವಿಂದರಾಜನನ್ನು ಕೊಲೆಮಾಡಿದ ಕೊಲೆಪಾತಕ; ಚಿನ್ನಾದೇವಿಯನ್ನು ಭಂಗಪಡಿಸಲು ಯತ್ನಿಸಿದ ನೀಚ; ಮಹಾಪಾಪಿ! ಅವನಿಗೆ ಮರಣದಂಡನೆಯೇ ಸರಿಯಾದ ಶಿಕ್ಷೆ. ಆಗ ರಾಯನಿಗೆ ಚಿನ್ನಾದೇವಿ ಹೇಳಿದ ಪ್ರತಿಜ್ಞಾವಚನವು ಜ್ಞಾಪಕಕ್ಕೆ ಬಂದಿತು. ಜ್ಞಾಪಕಕ್ಕೆ ಬರುವುದೇನು – ಜ್ಞಾಪಕದಲ್ಲೇ ಸದಾ ಇತ್ತು. ಅದನ್ನು ಪೂರ್ಣಮಾಡಬೇಕಾದುದು ಅವಳ ಪ್ರೇಮಪಾತ್ರನಾದ ತನ್ನ ಕರ್ತವ್ಯವೆಂದು ನಿಶ್ಚಯಿಸಿದನು. ಮರಣದಂಡನೆಗಿಂತಲೂ ಅದೇ ಅವನಿಗೆ ಮೇಲಾದ ಶಿಕ್ಷೆಯೆಂದು ತೋರಿತು. ಅದರಂತೆ ಮರ್ಕಾರನಿಗೆ ಕರಪದಚ್ಛೇದನ ಶಿಕ್ಷೆಯನ್ನೇ ವಿಧಿಸಿಬಿಟ್ಟನು. ಕಟುಕರು ಮರ್ಕಾರನನ್ನು ಎಳೆದುಕೊಂಡುಹೋದರು.

ಇನ್ನು ಮುದಗಲ್ ದುರ್ಗಸಾಧನೆಯಲ್ಲಿ ವಿಶೇಷ ಸಾಹಸ ತೋರಿಸಿದವನು ರೂಪಸಿಂಗನೆಂದು ಎಲ್ಲರೂ ಬಲ್ಲರು. ಜಯರಾಮನು ಎದ್ದುನಿಂತು, ರೂಪಸಿಂಗನ ಧೈರ್ಯಚಾತುರ್ಯಗಳನ್ನು ವಿವರಿಸಿ ಹೇಳಿದನು. ಅಭೇದ್ಯವಾದ ಮುದಗಲ್‌ದುರ್ಗದ ಮುತ್ತಿಗೆಯಲ್ಲಿ, ರಾಯನ ಇಕ್ಕಟ್ಟಿಗೆ ಸಿಕ್ಕಿಬಿದ್ದು, ಮಹಾಚಿಂತೆಗೊಳಗಾಗಿದ್ದ ಕಾಲದಲ್ಲಿ, ವಿಲಕ್ಷಣ ಧೈರ್ಯೋಪಾಯಾವಲಂಬನದಿಂದ, ಆದಿಲ್‌ಷಹನನ್ನೇ ಹಿಡಿಸಿ, ದುರ್ಗವನ್ನು ಸಾಧಿಸಿಕೊಟ್ಟ ರೂಪಸಿಂಗನಮೇಲೆ ಕೃಷ್ಣದೇವರಾಯನಿಗೆ ಪರಮ ವಿಶ್ವಾಸ ಉಂಟಾಯಿತು; ತುಂಬಾ ಪ್ರೀತಿ ಹುಟ್ಟಿತು. ರೂಪಸಿಂಗನ ಛದ್ಮವೇಷ ಚಾತುರ್ಯವನ್ನೂ, ಅದಕ್ಕೆ ತಕ್ಕಂತಹ ಸ್ವರಪರಿವರ್ತನಾಕೌಶಲವನ್ನೂ ನೋಡಿ, ತಿಮ್ಮರಸನು ಪರಮಾಶ್ಚರ್ಯಪಡುತ್ತಾ, ಅವರನೇತ್ರದಿಂದ ರೂಪಸಿಂಗನನ್ನು ನೋಡುತ್ತಿದ್ದನು. ನೋಡುತ್ತಿದ್ದಂತೆ ತಿಮ್ಮರಸನ ನೋಟದಲ್ಲಿ ಏನೋ ಒಂದು ಸಂದೇಹದ ಛಾಯೆ ಅಲೆದಾಡಲಾರಂಭಿಸಿತು. ರೂಪಸಿಂಗನ ಸರ್ವಾಂಗಗಳಲ್ಲಿಯೂ, ತುಳುಕಾಡುತ್ತಿರುವ ಅದೊಂದು ಹೊಸ ರೀತಿಯ, ಹಾಗೂ ಹೇಳಲಸಾಧ್ಯವಾದ ವಿಚಿತ್ರ ಸೌಂದರ್ಯವೇ ಆ ಸಂದೇಹಕ್ಕೆ ಕಾರಣ. ರೂಪಸಿಂಗನು ದೇವಲೋಕದಿಂದಿಳಿದು ಬಂದ ದೇವಪುರುಷನಂತೆ ಬೆಳಗುತ್ತಿದ್ದನು. ಇಂತಹ ನೂತನ ವ್ಯಕ್ತಿ ಯಾರಿರಬಹುದು?........ ...ಎಂಬುದೇ ತಿಮ್ಮರಸನ ಬುದ್ಧಿಯನ್ನು ಹೊಕ್ಕ ಒಂದು ಹೊಸ ಯೋಚನೆ. ರೂಪಸಿಂಗನಿಗೆ ಮನಮೆಚ್ಚಿಹೋದ ರಾಯನು, ಸ್ವಹಸ್ತದಿಂದ ಅವನಿಗೆ ರತ್ನಭೂಷಣಾದ್ಯಲಂಕಾರ ವಸ್ತುಗಳನ್ನು ಕಾಣಿಕೆಯಾಗಿ ಕೊಟ್ಟು ಗೌರವಿಸಿ, ಬಳಿಕ ಸಭೆಯನ್ನು ನೋಡಿ, "ನನ್ನ ಪ್ರಿಯ ವೀರಸಭಾಸದರೆ! ಈಗಣ ಈ ಸಂಗದಲ್ಲಿ, ಈ ರೂಪಸಿಂಗನು ವಿದ್ಯಾನಗರ ಸಂಸ್ಥಾನಕ್ಕೆ ಮಾಡಿರುವ ಲಾಭವು ಬಹು ಘನವಾದುದು. ನಮ್ಮ ಹಿರಿಯರಿಂದ ಸಾಧ್ಯವಾಗದ ಕಾರ್ಯವನ್ನು ಈ ತರುಣವೀರನು, ಲೀಲಾಮಾತ್ರದಿಂದಲೇ ನೆರವೇರಿಸಿಕೊಟ್ಟನು. ಇದೀಗ, ಆದಿಲ್‌ಷಹನು ನಮಗೆ ಮಾಡಿದ ಮೋಸಕ್ಕೆ ಮೋಸವೂ ಆಯಿತು. ನಮ್ಮ ಲಾಭಕ್ಕೆ ಲಾಭವೂ ಆಯಿತು. ಈ ಮಹಾ ಕಾರ್ಯಸಾಧಕನಾದ ರೂಪಸಿಂಗನಿಗೆ ಎಷ್ಟು ಬಹುಮಾನವಿತ್ತರೂ ಸ್ವಲ್ಪವೇ ಸರಿ! ಈಗ ಈ ಮಹಾದುರ್ಗವನ್ನು ರಕ್ಷಿಸುವ ಭಾರಕ್ಕೂ ಈತನೇ ಅರ್ಹನಾಗಿರುವನೆಂದು ನನ್ನ ಮತ. ಆದುದರಿಂದ ಈ

ದುರ್ಗಾಧಿಪತ್ಯವನ್ನು ಇವನಿಗೇ ಒಪ್ಪಿಸಿಬಿಡಬೇಕೆಂದಿದ್ದೇನೆ. ಇದಕ್ಕೆ ನಿಮ್ಮೆಲ್ಲರ ಅಭಿಮತ ಹೇಗಿರುವುದೋ ಮೊದಲು ತಿಳಿಸಬೇಕಾಗಿ ಕೋರುತ್ತೇನೆ'' ಎಂದನು.

"ಅಗತ್ಯವಾಗಿ! ಅಗತ್ಯವಾಗಿ!'' ಎಂದು ಎಲ್ಲರೂ ಒಂದೇ ಬಾರಿಗೆ ಕೂಗಿದರು. ಅನೇಕರ ಕರತಾಳ ಧ್ವನಿಯಿಂದ ಸಭೆಯೇ ನಿರ್ಘೋಷಿತವಾಯಿತು. ರೂಪಸಿಂಗನು ಎದ್ದು ನಿಂತು, ರಾಯನಿಗೆ ಕೈಜೋಡಿಸಿ, ತಲೆ ಬಾಗಿ ವಿನಯದಿಂದ, ''ರಾಜೇಶ್ವರಾ! ಈ ಪರದೇಶಿಯಮೇಲೆ ತಾವು ತೋರಿಸಿದ ಗೌರವವು ಮಿತಿಮೀರಿಹೋಯಿತು. ಆದರೆ, ಊರುಕೇರಿಗಳಿಲ್ಲದ, ಇನ್ನೂ ಸಂಸಾರವನ್ನೂ ಪ್ರವೇಶಿಸದ ನಾನು, ಈ ಅಧಿಕಾರಕ್ಕೆ ಎಂದಿಗೂ ಅರ್ಹನಲ್ಲ. ಮನ್ನಿಸಬೇಕು,'' ಎಂದು ಬೇಡಿದನು.

ಕೃಷ್ಣದೇವರಾಯನು ಮುಗುಳ್ನಗೆ ನಗುತ್ತಾ, "ಅದಕ್ಕೇನು? ಬಿಡು! ನಿನ್ನನ್ನು ಈ ದುರ್ಗಾಧಿಪತ್ಯಕ್ಕೆ ಅರ್ಹನನ್ನಾಗಿ ಮಾಡುವ ಭಾರವು ನನ್ನ ಮೇಲಿರಲಿ, ರೂಪಸಿಂಗ್! ನಿನ್ನನ್ನು ಶೀಘ್ರದಲ್ಲಿಯೇ ಸಂಸಾರಾಮೃತದಲ್ಲಿ ಮುಳುಗಿಸುತ್ತೇನೆ; ನೋಡು, ನಾರೀಶಿರೋಮಣಿ ಎಂದೂ, ಅಪ್ರತಿಮ ಸುಂದ........," ಎನ್ನುವಷ್ಟರಲ್ಲಿ ತಿಮ್ಮರಸು ತಟ್ಟನೆದ್ದು ರಾಜನ ಮಾತನ್ನು ತಡೆದು, "ರಾಜೇಂದ್ರಾ! ಎಚ್ಚರಿಕೆ! ರಾಜ್ಯರಹಸ್ಯಭೇದನ ಮಾಡಕೂಡದೆಂದು ವಿಜ್ಞಾಪಿಸುತ್ತೇನೆ."

''ಓ! ಸರಿ!" ಎಂದು ರಾಯನು ತನ್ನ ತಪ್ಪನ್ನು ಒಪ್ಪಿಕೊಂಡು, ರೂಪಸಿಂಗನ ಸಮೀಪಕ್ಕೆ ತನ್ನ ಮುಖವನ್ನೊಯ್ದು, ಅವನಿಗೆ ಮಾತ್ರ ಕೇಳಿಸುವಂತೆ ಮೆಲ್ಲನೆ, ''ರೂಪಸಿಂಗ್, ಸೌಂದರ್ಯದಲ್ಲಿ ಜಗನ್ಮೋಹಿನೀ ಎಂದು ಪ್ರಖ್ಯಾತಳಾದ ಕಳಿಂಗೇಶನ ಮಗಳು ತಿರುಮಲಾದೇವಿಯನ್ನು ನಿನಗೆ ವಿವಾಹ ಮಾಡಿಸುವೆನು. ಆದರೆ, ಆದುತನಕ ಈ ವಿವಾಹ ವಿಷಯವನ್ನು ನೀನು ಯಾರಿಗೂ ತಿಳಿಸದೆ, ರಹಸ್ಯದಲ್ಲಿಯೇ ಇಟ್ಟುಕೊಂಡಿರಬೇಕು''ಎಂದು, ಬಳಿಕ ಗಟ್ಟಿಯಾಗಿ ಹೀಗೆಂದನು: "ಆದುದರಿಂದ, ರೂಪಸಿಂಗ್, ನೀನು ಈ ಅಧಿಕಾರವನು ಸ್ವೀಕರಿಸಲೇ ಬೇಕು".

ರೂಪಸಿಂಗನು ಮುಗುಳ್ನಗೆ ನಗುತ್ತಾ ತಲೆಬಾಗಿ, "ಮಹಾರಾಜಾಧಿರಾಜರು ಇಷ್ಟೊಂದು ಒತ್ತಾಯಪಡಿಸುವಾಗ, ನಾನು ಇನ್ನು ಒಲ್ಲೆನೆನ್ನುವುದು ವಿಧೇಯತೆಗೆ ಭಂಗವಾದೀತು. ಆದುದರಿಂದ ಮಹಾರಾಜರ ಚಿತ್ತ" ಎಂದು ಅಂಗೀಕರಿಸಿದನು.

ಸಭೆಯಲ್ಲಿ ಪುನಃ ಕರತಾಳ ಘೋಷವೆದ್ದಿತು.

ರಾಯನು ಸಂತೋಷದಿಂದ ಸಭೆಯನ್ನು ನೋಡಿ, "ನನ್ನ ಪ್ರಿಯ ವೀರರೇ! ನಾನೀಗ ರೂಪಸಿಂಗನ ಕಿವಿಯಲ್ಲಿ ಹೇಳಿದ ಮಾತುಗಳು, ಏನೋ ಎಂದು ನೀವೆಲ್ಲರೂ ಶಂಕಾತಂಕಗೊಳ್ಳುತ್ತಿರುವಿರೆಂದು, ನಾನು ಬಲ್ಲೆನು. ರಾಜ್ಯ ಕಾರಣಾಂತರದಿಂದ ಅದೀಗ ರಹಸ್ಯದಲ್ಲಿಯೇ ಇಡಬೇಕಾಗಿದೆ. ಭುವನೇಶ್ವರಿಯ ಕೃಪೆಯಿಂದ ಆ ರಹಸ್ಯವು ಬಹಿರ್ಗತವಾಗುವ ಸಕಾಲವು ಇನ್ನು ಬೇಗದಲ್ಲಿಯೇ ಬಂದೀತು. ಅದುತನಕ, ನೀವೆಲ್ಲರೂ ಮನಸ್ಸಮಾಧಾನವನ್ನು ತಂದುಕೊಂಡು, ಈವರೆಗಣಂತೆ ಮುಂದೆಯೂ ನಮಗೆ ಸಹಾಯಕರಾಗುವಿರೆಂದು ನಂಬಿದ್ದೇನೆ".

ಪುನಃ ಕರತಾಳ ಧ್ವನಿ! ಜೈ ಶ್ರೀಕೃಷ್ಣದೇವರಾಯ ಮಹಾರಾಜ!" ಎಂದು ಜಯಘೋಷ.

ತಿಮ್ಮರಸನ ಮುಖವು ಮಾತ್ರ ಸಪ್ಪಗಾಗಿದೆ! ರಾಯನು ರೂಪಸಿಂಗನಿಗೆ ಹೇಳಿದ ರಹಸ್ಯವಚನವನ್ನು ತಿಳಿದು ಅವನು ಕ್ಷುಣ್ಣಮಾನಸನಾಗಿ, ಮುಂದಾಲೋಚನೆಗೆ ಬಿದ್ದಿದ್ದಾನೆ. ರೂಪಸಿಂಗನಮೇಲೆಯೂ ಅವನಿಗೊಂದು ಸಂದೇಹ. ಅಂದರೆ ಶತ್ರುಪಕ್ಷದವನೇನೋ ಎಂಬ ಆ ಬಗೆಯ ಸಂದೇಹವಲ್ಲ. ಅವನ ವಿಚಿತ್ರ ಸೌಂದರ್ಯವೇ ಅವನಿಗೆ ಸಂದೇಹವನ್ನುಂಟುಮಾಡುತಿದ್ದುದಲ್ಲದೆ, ರೂಪಸಿಂಗನು ಸ್ವಾಭಾವಿಕವಾದ ಸ್ವರವನ್ನು ಬದಲಾಯಿಸಿಕೊಳ್ಳುತ್ತಿರುವಂತೆಯೂ ಒಮ್ಮೊಮ್ಮೆ ತೋರುತ್ತಿತ್ತು. ಆ ಚಾಣಾಕ್ಷ ತಿಮ್ಮರಸನಿಗೆ ಅದೇ ಒಂದು ಬಗೆಯ ಸಂದೇಹ. ಇವನಾರಿರಬಹುದು? ಎಂಬ ಯೋಚನೆ. ಆದರೆ ಆ ಸಂದೇಹವು ಸಂದೇಹವಾಗಿಯೇ ಉಳಿಯಿತು. ಯೋಚನೆ ಯೋಚನೆಯಾಗಿಯೇ ಉಳಿಯಿತು. ಬಗೆಹರಿಯಲೇ ಇಲ್ಲ.

## ೩೬
# ಯೋಗೀಶ್ವರ

ಬಹಳ ದಿನಗಳು ಕಳೆದುಹೋಗಿಬಿಟ್ಟುವು. ಕೃಷ್ಣದೇವರಾಯನು, ಉತ್ಕಲದಮೇಲೆ ವಿಜಯಪ್ರಯಾಣಮಾಡುತ್ತಲೇ ಇದ್ದನು. ಪ್ರತಾಪರುದ್ರನು ಸೈನ್ಯವನ್ನು ಕಳುಹಿಸುತ್ತಲೇ ಇದ್ದನು. ಕೃಷ್ಣದೇವರಾಯನು ಆ ಸೇನಾಪ್ರವಾಹದ ಕಟ್ಟೆಯನ್ನು ಒಡೆದು ಮುಂದಕ್ಕೆ ನುಗ್ಗುತ್ತಲೇ ಇದ್ದನು. ಆದರೂ, ಪ್ರತಾಪರುದ್ರನು ತಿರುಮಲಾದೇವಿಯನ್ನು ರಾಯನಿಗೆ ಒಪ್ಪಿಸುವ ಮನಸ್ಸು ಮಾಡಲಿಲ್ಲ. ರಾಯನು ಮುಂದುವರಿಯುವುದನ್ನು ಬಿಡಲೂ ಇಲ್ಲ. ಉತ್ಕಲ ದೇಶದ ಕೊಂಡಪಲ್ಲಿ, ನಾಗೂರು, ಅದ್ದಂಕೀ, ಕೇತಾವರ ಇತ್ಯಾದಿ ರಾಷ್ಟ್ರಭಾಗಗಳಲ್ಲೆಲ್ಲಾ ರಾಯನ ವಿಜಯಪತಾಕವು ತಾಂಡವನೃತ್ಯಮಾಡಿತು. ವಿಶಾಖಪಟ್ಟಣದ ಸಿಂಹಾದ್ರಿಯವರೆಗೂ, ರಾಯನಸೇನೆಯ ಸಿಂಹನಾದವು ಮೊಳಗಿತು. ಬೊಟ್ಟನೂರಿನಲ್ಲಿ ರಾಯನು ಒಂದು ವಿಜಯಸ್ತಂಭವನ್ನು ನೆಟ್ಟನು. ಇನ್ನೇನು? ಉತ್ಕಲರಾಜಧಾನಿಯಾದ ಕಟಕಪುರಿಯೊಂದೇ ಉಳಿದಿದೆ!

ಪಾಪ! ನಾವು ತಿರುಮಲಾದೇವಿಯನ್ನು ನೋಡದೇ ಬಹಳ ದಿನಗಳಾಗಿ ಹೋದುವು. ಪ್ರಿಯವಾಚಕರೇ! ಬನ್ನಿ ಬನ್ನಿ! ಈಗಲೇ ಕಟಕಪುರಿಗೆ ಹೋಗೋಣ.

ಓಹೋ! ಇಲ್ಲಿ ಒಂದು ವಿಶೇಷವಾರ್ತೆ! ಸುಮಾರು ಒಂದು ವರ್ಷದಿಂದ, ಇಲ್ಲಿ ಒಬ್ಬ ಯೋಗೀಶ್ವರನು ಉಪಸ್ಥಿತನಾಗಿರುವನಂತೆ. ಅವನು ಎಲ್ಲಿಂದ ಬಂದನೆಂಬುದೊಂದೂ ತಿಳಿಯದು. ಒಮ್ಮೆಗೇ ಮಹಾನದೀ ತಟದಲ್ಲಿ ಪ್ರತ್ಯಕ್ಷನಾದನಂತೆ. ಕೆಲವರು ಆಕಾಶದಿಂದ ಕೆಳಕ್ಕೆ ಇಳಿದುಬಿಟ್ಟನು ಎನ್ನುವರು; ಇನ್ನೂ ಕೆಲವರು ಭೂಮಿಯಿಂದ ಮೇಲೆದ್ದುಬಂದನು ಎನ್ನುವರು; ಮಹಾನದಿಯೊಳಗಿನಿಂದ ಉದ್ಭವಿಸಿದನೆಂದು ಬೇರೆ ಹಲವರು ಹೇಳುವರು. ಹೀಗೆ ಅದ್ಭುತ ಪ್ರವಾದವು ಹರಡಲು ಕಾರಣವೇನೆಂದರೆ, ಮಟಮಟ ಮಧ್ಯಾಹ್ನಕಾಲನಲ್ಲಿ ಮಹಾನದೀ ತೀರದಲ್ಲಿ, ಧ್ಯಾನರೂಪದಿಂದ ಅವನು ಅಕಸ್ಮಾತ್ ಜನರ ಕಣ್ಣಿಗೆ ಬಿದ್ದುದೇ!

ಸ್ವಲ್ಪ ಹೊತ್ತಿನಲ್ಲೇ, ಅವನ ಸುತ್ತಲೂ, ಜನರು ಕಿಕ್ಕಿರಿದುಹೋದರು. ಹಿಂದಿನ ಕಾಲವು ಇಂದಿನಷ್ಟು ನಾಸ್ತಿಕ ಕಾಲವಾಗಿದ್ದಿಲ್ಲ. ಆಸ್ತಿಕ ಭಾವೀಕ ಜನರು ಈಗಿರುವುದಕ್ಕಿಂತಲೂ, ಆ ಕಾಲದಲ್ಲಿ ಹೆಚ್ಚಾಗಿದ್ದರು. ಅಂತೆಯೇ, ಆ ಯೋಗಿಯ ಸುತ್ತಮುತ್ತಲೂ ನೆರೆದ ಗುಂಪಿನಲ್ಲಿ ಹಲವರು ಭಾವಿಕರೂ ಇಲ್ಲದೇ ಹೋಗಲಿಲ್ಲ. ಅವಕ್ಕೆ ತಕ್ಕಹಾಗೆ, ಆ ಯೋಗಿಯೂ,—ಅವನು ಸ್ವಲ್ಪ ಸಾಮುದ್ರಿಕ ಜ್ಯೋತಿಶ್ಶಾಸ್ತ್ರವನ್ನು ನೋಡಿದ್ದರೂ, ಇರಬಹುದು—ಅದರ ಸಹಾಯದಿಂದ—ನೆರೆದ ಗುಂಪಿನ ಕೆಲವರ ಕೈಯನ್ನೋ ಮುಖವನ್ನೋ ನೋಡಿ, ಏನೋ ಭವಿಷ್ಯತ್ತನ್ನು ಹೇಳಲಿಕ್ಕೂ ಮೊದಲುಮಾಡಿಬಿಟ್ಟನು. ಅವನು ಹೇಳಿದುದರಲ್ಲಿ ಹಲವು ಸತ್ಯವಾದುವು, ಕೆಲವು ಸುಳ್ಳಾದುವು. ಸತ್ಯವು ಎತ್ತೆತ್ತಲೂ ಹಬ್ಬಿತು. ಸುಳ್ಳು ಅಲ್ಲಲ್ಲೆ ಮರೆತುಹೋಯಿತು. ಹೀಗಾಗಿ ಅವನ ಹೆಸರೊಂದು ಪ್ರಸಿದ್ಧವಾಯಿತು. ಕುಂದುಕೊರತೆಗಳಿಂದ ಪೀಡಿತರಾದ ಜನರು, ಸಾಲುಗಟ್ಟಿ, ಅವನ ಬಳಿಗೆ ಬಂದು, ಮನಸ್ಸಮಾಧಾನಮಾಡಿಗೊಂಡು ಹೋಗಲಾರಂಭಿಸಿದರು. ಯಾರಾದರೂ ಹಣ್ಣುಹಂಪಲಗಳನ್ನು ಕಾಣಿಕೆಯಾಗಿ ಕೊಟ್ಟರೆ ಮಾತ್ರವೇ ಸ್ವೀಕರಿಸುವನು. ಮತ್ತೇನೂ ಮುಟ್ಟನು. ಮುಖ್ಯವಾಗಿ ಈ ಬಗೆಯ ನಿಸ್ಪೃಹತೆಯಿಂದಲೇ, ಅವನ ಪ್ರಸಿದ್ಧಿ ಇಮ್ಮಡಿ ಮುಮ್ಮಡಿಗೇರಿತು. ಭೂತಭವಿಷ್ಯದ್ವಾರ್ತೆಗಳನ್ನು ಹೇಳುವ ಅಂತರ್ಜ್ಞಾನದ ದಿವ್ಯದೃಷ್ಟಿಯುಳ್ಳ ಮಹಾಯೋಗೀಶ್ವರನೆಂದು, ಸುಪ್ರಸಿದ್ಧನಾದನು. ರಾಜನ ಮನಸ್ಸನ್ನೂ ಎಬ್ಬಿಸಿಬಿಟ್ಟಿತು, ಅವನ ಆ ಪ್ರಸಿದ್ಧಿ. ರಾಜಾ ಪ್ರತಾಪರುದ್ರನು ತನ್ನ ದೇಶಕ್ಕೊದಗಿದ ಆ ಯುದ್ಧವಿಪ್ಲವ ಕಾಲದಲ್ಲಿ—ಈ ಯೋಗೀಶ್ವರನ ಉಪ್ಲವವು ತನಗೆ ಮಂಗಳಸೂಚಕವೆಂದೇ ನಂಬಿ, ಬಹಳ ಭಕ್ತಿಭಾವದಿಂದ ಅವನನ್ನು ಪಾಲಕಿಯಲ್ಲಿ ಕರೆದೊಯ್ದು ........ಆದರೆ, ಯೋಗೀಶ್ವರನು ಪಾಲಕಿಯನ್ನು ಆರೋಹಣಮಾಡಲಿಲ್ಲವಂತೆ: ರಾಜನೊಂದಿಗೆ ಪಾದಚಾರಿಯಾಗಿಯೇ ನಡೆದನಂತೆ, ಬರಿಯ ಪಾಲಕಿ ಅವನ ಹಿಂದಿನಿಂದಲೇ ಹೋಯಿತಂತೆ. ಅದು ಹೇಗೂ ಇರಲಿ. ಅಷ್ಟು ಗೌರವದಿಂದ ರಾಜನು ತನ್ನ ಅರಮನೆಯ ಬಳಿಯಲ್ಲಿ ತಪೋವನದಂತೆ ಮನೋಹರವಾದ ತೋಟದೊಳಗೆ, ಆ ಯೋಗೀಶ್ವರನಿಗಾಗಿಯೇ ಕಟ್ಟಿಸಲ್ಪಟ್ಟ ಆಶ್ರಮಕ್ಕೆ ಅವನನ್ನು ಕರೆದುಕೊಂಡು ಹೋಗಿ, ಅಲ್ಲಿಯೇ ಇದ್ದು, ತನ್ನ ದೇಶಕೆ

ಕ್ಷೇಮ ಉಂಟಾಗುವಂತೆ ಅನುಗ್ರಹಿಸಬೇಕೆಂದು ವಿಜ್ಞಾಪಿಸಿಕೊಂಡನಂತೆ. ರಾಜನ ಬೇಡಿಕೆಯನ್ನು ಮೀರಲಾರದೆ, ಯೋಗೀಶ್ವರನು ಅಲ್ಲಿಯೇ ನೆಲೆಸಿರುವನಂತೆ. ಅವನ ಸೇವೆಗಾಗಿ, ಗೌರಾಂಬೆ ಎಂಬ ವೃದ್ಧೆಯೋರ್ವಳು, ರಾಜನಿಂದಲೇ ನಿಯಮಿತಳಾಗಿರುವಳಂತೆ. ರಾಜಕುಮಾರಿ ತಿರುಮಲಾದೇವಿ ಪ್ರತಿದಿನವೂ ಯೋಗೀಶ್ವರನ ದರ್ಶನಮಾಡಿ ಆಶೀರ್ವಾದವನ್ನು ಶಿರಸಾವಹಿಸಿಕೊಂಡು, ಹೋಗುತ್ತಿರುವಳಂತೆ. ಆ ಆಶ್ರಮದ ಉಪವನಕ್ಕೆ ಒಬ್ಬ ಕಾವಲುಗಾರನೂ ಇರುವನಂತೆ. ಆದರೂ ಯಾರು ಬೇಕಾದರೂ ಯೋಗೀಶ್ವರನ ದರ್ಶನಮಾಡಬಹುದಂತೆ. ಅಂದರೆ, ಕಾವಲುಗಾರನು ಮಿತವಾದಷ್ಟು ಮಂದಿಯನ್ನೇ ಒಳಗೆ ಬಿಡುತ್ತಿದ್ದನು ಅಷ್ಟೆ!

ಇಷ್ಟೊಂದು ರಾಜಾದರಕ್ಕೆ ಪಾತ್ರನಾದರೂ, ಆ ಯೋಗೀಶ್ವರನು ತೀರಾ ನಿಸ್ಪೃಹನಾಗಿದ್ದನಂತೆ. 'ನಿಸ್ಪೃಹಸ್ಯ ತೃಣಂ ಜಗತ್' ಎಂಬ ಹಾಗಿರುವನಂತೆ. ಏನಾದರೂ ಹಾಲೋ ಹಣ್ಣೋ ತೆಗೆದುಕೊಂಡರೆ ಸರಿ. ಇಲ್ಲದಿದ್ದರೆ ಅದೂ ಇಲ್ಲ. ಅಷ್ಟೇ ಸರಿಯಂತೆ ಅವನ ಆಹಾರ.

ಪ್ರಿಯವಾಚಕರೇ! ಈ ಅಂತೆಕಂತೆಗಳ ಸಂತೆಯನ್ನು ಓದಿ ನಿಮಗೆ ಬೇಸರವಾಗಿರಬಹುದು. ಹಾಗಾದರೆ ದಯವಿಟ್ಟು ನಡೆಯಿರಿ; ಆಶ್ರಮದೊಳಗೆ ಹೋಗಿ, ಸ್ವಯಂ ನೋಡಿ ಅನುಭವಮಾಡಿಕೊಳ್ಳೋಣ!

ಅಗೋ! ನೋಡಿರಿ! ಆಶ್ರಮದಲ್ಲಿ ಕೃಷ್ಣಾಜಿನದಮೇಲೆ ಕಣ್ಣುಮುಚ್ಚಿ ಧ್ಯಾನಸ್ಥನಾಗಿ ಕುಳಿತಿರುವವನೇ ಯೋಗೀಶ್ವರ. ಅವನ ಜಡೆಗಟ್ಟಿದ ತಲೆ; ಎದೆಯತನಕ ಇಳಿದಿರುವ ದಾಡಿ-ಮೀಸೆಗಳೂ, ಮೈತುಂಬಾ ಧಾರಣೆಮಾಡಿಕೊಂಡಿರುವ ಭಸ್ಮ, ಕರಗಳಿಗೂ, ಕೊರಳಿಗೂ, ಜಡೆಗೂ ಸುತ್ತಿಕೊಂಡಿರುವ ರುದ್ರಾಕ್ಷಿಯಸರ, ಕಟ್ಟಿಕೊಂಡಿರುವ ಒಂದೇ ಒಂದು ಕಾವಿಯ ಕೌಪೀನ, ಮತ್ತು ಅದರಮೇಲೆ ಮೃಗಚರ್ಮಾಂಬರ, ಬಳಿಯಲ್ಲಿರುವ ಯೋಗದಂಡ ಕಮಂಡಲು ಇವನ್ನೆಲ್ಲಾ ನೋಡಿದರೆ, ಅವನೊಬ್ಬ ಮಹಾ ವಿರಕ್ತಮುನಿಯಂತೆ—ಅಲ್ಲಲ್ಲ—ಪ್ರತ್ಯಕ್ಷ ಪರಮೇಶ್ವರನಂತೆಯೇ ಕಂಗೊಳಿಸುತ್ತಿದ್ದನು. ಅವನ ಸೇವೆಗಾಗಿ ನಿಯಮಿತಳಾಗಿರುವ ಗೌರಾಂಬೆ ಒಂದು ಮೂಲೆಯಲ್ಲಿ ಕುಳಿತುಕೊಂಡು ಬತ್ತಿ ಹೊಸೆಯುತ್ತಿದ್ದಳು.

ಅಗೋ! ಇತ್ತ ನೂಪುರದಸ್ವರವು ಕೇಳಿಬರುತ್ತಿದೆ. ಓಹೋ! ರಾಜಕುಮಾರಿ ತಿರುಮಲಾದೇವಿ ಬರುತ್ತಿದ್ದಾಳೆ. ವಾಚಕರೆ! ಸ್ವಲ್ಪಬದಿಗೆ ಸರಿಯಿರಿ.

ಸಖೀದ್ವಯ ಸಮೇತಳಾದ ತಿರುಮಲಾದೇವಿ, ಯೋಗೀಶ್ವರನ ಬಳಿಗೆ ಬಂದು, ಧ್ಯಾನಸ್ಥನಾಗಿದ್ದ ಅವನ ಪಾದಕ್ಕೆ ಅಡ್ಡಬಿದ್ದು, "ಯೋಗೀಶ್ವರಾ ಪ್ರತಾಪರುದ್ರ ಗಜಪತೀ ಸುತೆ ತಿರುಮಲಾದೇವಿ ನಮಸ್ಕಾರಮಾಡುತ್ತಾಳೆ" ಎಂದಳು.

ಧ್ಯಾನಸ್ಥನಾಗಿದ್ದ ಯೋಗೀಶ್ವರನ ಮುಂದೆ ಆ ರೀತಿಯಾಗಿ ನಾಮೋಚ್ಚಾರಣೆಗೈಯುತ್ತಾ ನಮಸ್ಕಾರಮಾಡಬೇಕಾದುದೇ ಕ್ರಮವಾಗಿತ್ತು.

ಯೋಗೀಶ್ವರನು, "ಜೈ ಮಹಾದೇವ, ಶಂಭೋ!! ಮಹಾದೇವ! ಮಹಾದೇವ !" ಎಂದು ಉಚ್ಚರಿಸುತ್ತಾ ಕಣ್ಣುತೆರೆದು, ಇನ್ನೂ ಅಡ್ಡಬಿದ್ದಿದ್ದ ತಿರುಮಲಾದೇವಿಯನ್ನು ಕರುಣಾದ್ರ್ರದೃಷ್ಟಿಯಿಂದ ನೋಡುತ್ತಾ, "ಕಲ್ಯಾಣಮಸ್ತು! ಸತ್‌ಸಂತಾನ ಪ್ರಾಪ್ತಿರಸ್ತು! ಸರ್ವಮನೋಭೀಷ್ಟ ಸಿದ್ಧಿರಸ್ತು! ಸದಾ ಕುಂಕುಮ ಸೌಭಾಗ್ಯಾಭಿವೃದ್ಧಿರಸ್ತು! ಮಹಾದೇವ! ಮಹಾದೇವ!" ಎಂದು, ಹರಸಿದನು.

## ೩೭

## "ಅಗೋ—ನಿನ್ನ ಭಾಗ್ಯಸೂರ್ಯ!"

ಯೋಗೀಶ್ವರನ ಬಾಯಿಂದ ಈವರೆಗೂ ಹೊರಡದ ವಿಚಿತ್ರವಾದ ಆಶೀರ್ವಾದಗಳನ್ನು ಇಂದು ಕೇಳಿ, ತಿರುಮಲಾದೇವಿಗೆ ಅತ್ಯಾಶ್ಚರ್ಯ ಉಂಟಾಯಿತು. ಅದರೊಂದಿಗೆ ಸ್ವಲ್ಪ ಲಜ್ಜೆಯೂ ಕೂಡಿತು. ಅವಳು ಎದ್ದು ನಿಂತು, ತಲೆತಗ್ಗಿಸಿ, ಕೈಜೋಡಿಸಿ, ದುಃಖಸೂಚಕ ಧ್ವನಿಯಿಂದ, "ಯೋಗಿವರ್ಯಾ ಮಹಾತ್ಮರಾದ ತಾವು ನನಗೆ ಈದಿನ ಮಾಡಿದ ಆಶೀರ್ವಾದವನ್ನು ಕೇಳಿ ಒಂದೂ ತೋರದವಳಾಗಿರುವೆನು. ಅತ್ಯಾಶ್ಚರ್ಯವಾಗುತ್ತಿದೆ" ಎಂದಳು.

ಯೋಗೀಶ್ವರನು, ತಲೆದೂಗಿ ಮುಗುಳ್ನಗೆ ನಗುತ್ತಾ, "ಅದೇಕೆ ತಾಯಿ?" ಎಂದನು.

"ತಮಗೆ ತಿಳಿಯದ ವಿಷಯವುಂಟೆ, ಸ್ವಾಮಿ? ಆದರೂ ಪಾಮರಳಾದ ನನ್ನನ್ನು ಪರೀಕ್ಷೆಮಾಡುವುದಾಗಿರಬೇಕು. ಸ್ವಾಮಿ! ನೋಡೋಣಾಗಲಿ! ಕೃಷ್ಣದೇವನು ಈಗ ನಮ್ಮ ಗೋದಾವರೀ ತೀರದ ತನಕವೂ ಬಂದುಬಿಟ್ಟಿದ್ದಾನೆ.—ಇನ್ನು ನದೀದಾಟಿ, ಈ ರಾಜಧಾನಿಯನ್ನು ಸುತ್ತಿ ಸೂರೆಮಾಡುವುದೊಂದೇ ಉಳಿದಿದೆ. ಯೋಗಿವರ್ಯಾ! ಹೆಚ್ಚೇನು ಹೇಳಲಿ! ಕೃಷ್ಣದೇವನೆಂಬ ಹೆಬ್ಬಾವು ನಮ್ಮ ಉತ್ಕಲದ ಸರ್ವಾಂಗವನ್ನೂ ನುಂಗಿತು. ಇನ್ನು ತಲೆಯೊಂದನ್ನು ನುಂಗಿಬಿಟ್ಟರೆ ತೀರಿಹೋಯಿತು! ಸರ್ವವೂ ಕೃಷ್ಣಾರ್ಪಣ! ಇಂತಹ ಸ್ಥಿತಿಯನ್ನು ಅರಿತರಿತೂ, ತಾವು ಇಂದು ನನಗೆ ಅನುಗ್ರಹಿಸಿದ ವಿಚಿತ್ರವಾದ ಆಶೀರ್ವಾದವನ್ನು ಕೇಳಿ, ಆಶ್ಚರ್ಯಪಡದೆ ಮತ್ತೇನುಮಾಡಲಿ?"

"ಮಹಾದೇವ! ಮಹಾದೇವ! ತಾಯಿ! ಅಖಿಲ ಬ್ರಹ್ಮಾಂಡವೂ ಕೃಷ್ಣಾರ್ಪಣವಾಗುತ್ತಲೇ ಇದೆ. ಇದಕ್ಕೆ ಸಂತೋಷಿಸಬೇಕೇ ಹೊರತು, ವ್ಯಸನಪಡಬಾರದು. ಇದರಿಂದ ನಿನ್ನ ಸೌಭಾಗ್ಯಕ್ಕೆ ಏನೂ ಕೊರತೆಯಾಗುವುದಿಲ್ಲ. ಗೊತ್ತಾಯಿತೇ? ಮಹಾದೇವ! ಮಹಾದೇವ!"

"ಮಹಾತ್ಮಾ! ದ್ವಂದ್ವಾರ್ಥ ಸಂಯುಕ್ತವಾದ ತಮ್ಮ ಮಾತಿಗೆ ಉತ್ತರವೀಯಲು ನಾನು ಅಸಮರ್ಥಳಾಗಿದ್ದೇನೆ, ಏನೋ ಭಗವಂತನ ಚಿತ್ತವಿದ್ದಂತಾಗಲಿ!"

"ಇಷ್ಟೊಂದು ವಿರಕ್ತಿ ಏಕೆ ತಾಯಿ? ಮಹಾದೇವ! ಮಹಾದೇವ! ನನ್ನ ವಚನವು ಎಂದಿಗೂ ಸುಳ್ಳಾಗುವಂತಹುದಲ್ಲ. ಸ್ವಲ್ಪಕಾಲ ಆ ಕೃಷ್ಣದೇವನಿಂದ ನಿಮಗೆ ಅಮಂಗಳ, ಅಪಜಯ, ನಿರಾಶೆಗಳುಂಟಾದರೂ, ಕಡೆಗೆ ಅದೆಲ್ಲವೂ ನಿಮಗೆ ವಿಜಯೋಲ್ಲಾಸವನ್ನುಂಟುಮಾಡುವುದೆಂದು, ನಾನು ಪದೇ ಪದೇ ಹೇಳುತ್ತಿದ್ದುದನ್ನು ಮರೆತೆಯಾ? ಕೃಷ್ಣದೇವನೆಂಬ ಹೆಬ್ಬಾವು, ನಿಮ್ಮ ದೇಶದ ಸರ್ವಾಂಗವನ್ನು ನುಂಗಿದರೂ, ಶಿರವನ್ನು ನುಂಗಲು ಸಾಧ್ಯವೇ ಇಲ್ಲ. ಒಬ್ಬ ಮಹಾಪುರುಷನು—ನಿನ್ನ ಭಾಗ್ಯಸೂರ್ಯನು,—ಆ ಹಾವನ್ನು ಮೆಟ್ಟಿ ಅದರ ಹೊಟ್ಟೆಯಲ್ಲಿದ್ದುದನ್ನೆಲ್ಲಾ ಕಾರಿಸಿಬಿಡುವನು. ಮಹಾದೇವ! ಮಹಾದೇವ!"

"ಯೋಗೀಂದ್ರಾ! ಇದೇ ಮಾತನ್ನು ತಾವು ಪ್ರತಿದಿನವೂ ಹೇಳುತ್ತಿದ್ದಿರೂ, ಈಗಣ ಭಯಂಕರ ಪರಿಸ್ಥಿತಿಯಲ್ಲಿ ಈ ಭಕ್ತಳ ಮನಸ್ಸು ಬಹಳ ಚಂಚಲವಾಗಿ, ಹೊಯ್ದಾಡುತ್ತಿದೆ. ತಮ್ಮಮೇಲೆ ಅತ್ಯಂತ ವಿಶ್ವಾಸವಿಟ್ಟಿರುವ ನನ್ನ ಪಿತಾಜಿಯೂ........''

"ಮಹಾದೇವ! ಮಹಾದೇವ! ನಿನ್ನ ಪಿತಾಜಿಯನ್ನೂ ನಾನಿಂದು ಸಮಾಧಾನಪಡಿಸಿ ಕಳುಹಿಸಿದ್ದೇನೆ. ಮಹಾದೇವ! ಮಹಾದೇವ! ತಾಯಿ! ಇದೇ ನಿಮ್ಮ ಕಟ್ಟಕಡೆಯ ಭಯಂಕರ ಪರಿಸ್ಥಿತಿ ಎಂದು ತಿಳಿ. ಭಗವಂತನು ಕಷ್ಟವನ್ನು ಕೊಟ್ಟು, ಅದನ್ನು ಸಹಿಸಲಾರದೆ ಗೋಳಿಡುವಾಗಲೇ, ಗೋಳಿಟ್ಟು ಅವನಿಗೆ ಶರಣುಹೋಗುವಾಗಲೇ, ಸಹಾಯವನ್ನು ಒದಗಿಸಿಕೊಡುವನು ಶರಣಾಗತರಕ್ಷಕನು. ಅಂತಹ ಸಹಾಯಕ್ಕೆ ಬಹಳ ಮಹತ್ವವುಂಟಾಗುವುದು ಮಹಾದೇವ! ಮಹಾದೇವ! ಅದಕ್ಕಾಗಿಯೇ, ನಿಮಗೆ ಸಹಾಯ ಒದಗಲು ಇಷ್ಟು ವಿಳಂಬವಾಯಿತು. ನಾನೀಗ ಧ್ಯಾನಸ್ಥನಾಗಿ ನೋಡಿದೆ; ತಾಯಿ! ಇನ್ನು ಏನೂ ತಡವಿಲ್ಲ. ಇಂದಿನಿಂದ—ಇಗೋ, ಈಗಳಿಂದ ನಿಮಗೆ ಮಂಗಳ ಕಾಲವೂ, ವಿಜಯ ಸಮಯವೂ, ಬೆಳಗಲಾರಂಭವಾಗಿದೆ. ಮಹಾದೇವ! ಮಹಾದೇವ! ಅಗೋ! ನಿನ್ನ ಭಾಗ್ಯಸೂರ್ಯ........!" ಎಂದು ಯೋಗೀಶ್ವರನು ಮುಂಗಡೆಗೆ ಬೆರಳು ತೋರಿಸಿದನು. ತಿರುಮಲಾದೇವಿ ಆಕಡೆ ನಿರೀಕ್ಷಿಸಿದಳು. ಅವಳಿಗೇನೂ ಕಾಣಲಿಲ್ಲ, ಮಾತ್ರ ಆಶ್ಚರ್ಯದಿಂದ ನೋಡುತ್ತಿದ್ದಳು.

ಯೋಗೀಶ್ವರನು ಮತ್ತೆ ಹೇಳಿದನು, "ಏನು ತಾಯಿ, ಆಶ್ಚರ್ಯದಿಂದ ನೋಡುತ್ತಿ? ಆಹಾ! ನಿಜ. ಪರಮೇಶ್ವರನ ಲೀಲೆ. ಅತ್ಯಾಶ್ಚರ್ಯಕರವಾದುದೇ ಸರಿ! ಮಹಾದೇವ! ಮಹಾದೇವ! ಅಗೋ! ನಿನ್ನ ದಶಾಕಾಶದಲ್ಲಿ ಅರುಣೋದಯವಾಯಿತು. ಭಾಗ್ಯಸೂರ್ಯನು ಉದಯಃನಾಗುತ್ತಾ ಇದ್ದಾನೆ. ನಿನ್ನ ಸೌಭಾಗ್ಯಸೂರ್ಯನನ್ನು ಕಣ್ತುಂಬಾ ನೋಡು. ಈಗಲೇ ತೋರಿಸುತ್ತೇನೆ" ಎಂದು ಗೌರಾಂಬೆಯನ್ನು ಕುರಿತು, "ಗೌರಾಂಬಾ! ಹೋಗು, ತೋಟದ ಬಾಗಿಲಲ್ಲಿ ಒಬ್ಬ ವೃದ್ಧನೊಡನೆ ಇನ್ನೊಬ್ಬ ಯೌವನ ಪುರುಷನು ನನ್ನ ದರ್ಶನಾಪೇಕ್ಷಿತನಾಗಿ ಬಂದಿದ್ದಾನೆ. ಆದರೆ, ಇಲ್ಲಿ ರಾಜಕುಮಾರಿ ಇರುವ ಕಾರಣದಿಂದ ದ್ವಾರಪಾಲಕನು ಅವರನ್ನು ಒಳಗೆ ಬರಬಿಡದೆ ತಡೆದಿದ್ದಾನೆ.

ಹೋಗಿ, ಅವರಿಬ್ಬರನ್ನೂ ಆದರಪೂರ್ವಕವಾಗಿ ಕರೆದುಕೊಂಡುಬಾ" ಎಂದು ಆಜ್ಞಾಪಿಸಿದನು.

ಗೌರಾಂಬೆ ಸಂಭ್ರಮದಿಂದ ಹೊರಟುಹೋದಳು. ತಿರುಮಲಾದೇವಿ ಆ ಕಡೆ ನೋಡುತ್ತಾ ಆಶ್ಚರ್ಯ ಕುತೂಹಲದಿಂದ ಬೆರಗಾಗಿ ನಿಂತಿದ್ದಳು.

## ೩೮

## ರಾಜವರ್ಮ

ಅಲ್ಲಿ ಬರುತ್ತಿರುವ ಇಬ್ಬರ ಕಡೆಗೆ ಬೆರಳು ತೋರಿಸುತ್ತಾ, ಯೋಗೀಂದ್ರನು ತಿರುಮಲಾದೇವಿಯನ್ನು ಕುರಿತು, "ನೋಡಿದೆಯಾ ತಾಯಿ? ಆ ವೃದ್ಧನೊಂದಿಗೆ ತುರಗಗಮನದಿಂದ ಬರುತ್ತಿರುವ ಪುರುಷಸಿಂಹನೇ, ವಿಧಾತನು ಈ ಲೋಕದಲ್ಲಿ ನಿನಗಾಗಿ ಸೃಷ್ಟಿಸಿರುವ ಏಕಮಾತ್ರ ವಲ್ಲಭನೆಂದು ತಿಳಿ! ನಿಮ್ಮೆಲ್ಲರನ್ನೂ ಈಗಣ ಮಹಾ ಸಂಕಟದಿಂದ ವಿಮುಕ್ತಗೊಳಿಸುವ ಪುರುಷೋತ್ತಮನು ಈತನೇ ನೋಡು. ನೀವು ಈತನಿಗೆ ಶರಣುಹೋಗಬೇಕು" ಎಂದು ಆಜ್ಞಾಪಿಸಿದನು.

ತಿರುಮಲಾದೇವಿ ಒಮ್ಮೆ ಆ ಕಡೆಗೆ ನೋಟವನ್ನು ಪಸರಿಸಿ, ಬಳಿಕ ಯೋಗೀಶ್ವರನನ್ನು ನೋಡಿ, ಲಜ್ಜಾವ್ಯಂಜಕ ಸ್ವರದಿಂದ, "ಅವರು ಯಾವ ರಾಜವಂಶೀಯರು, ಯೋಗೀಂದ್ರಾ?" ಎಂದು ಕೇಳಿದಳು.

"ತಾಯೇ! ಇವನ ಗುರುತೆಲ್ಲವನ್ನೂ ಈಗಲೇ ಬಹಿರಂಗಗೊಳಿಸಲು ಆಗುವುದಿಲ್ಲ. ಆತನೊಂದು ಮಹತ್ಕಾರ್ಯೋದ್ಯುಕ್ತನಾಗಿ, ತನ್ನ ನಿಜಪರಿಚಯವನ್ನು ಬೇಕೆಂದೇ ಗುಪ್ತವಾಗಿರಿಸಿಕೊಂಡಿದ್ದಾನೆ. ಅದನ್ನು ನಾನು ಈಗಲೇ ಬಹಿರಂಗಗೊಳಿಸಿ, ಅವನ ಕಾರ್ಯವನ್ನು ಭಗ್ನಮಾಡಿದ ದೋಷಕ್ಕೆ ಭಾಗಿಯಾಗಲಾರೆ! ಅದಿನ್ನು ಶೀಘ್ರದಲ್ಲಿಯೇ ತನ್ನಂತೆ ತಾನೇ ಸ್ಪಷ್ಟವಾಗಿ ಬೆಳಗುವುದು. ಆದರೆ, ತಾಯಿ! ನಿನ್ನ ಮನಸ್ಸಮಾಧಾನಕ್ಕಾಗಿ, ಮುಖ್ಯವಾದ ಒಂದಂಶವನ್ನು ಮಾತ್ರ, ಈಗ ಹೇಳುತ್ತೇನೆ. ಈತನು ಆದಿಯಲ್ಲಿ ಮಂಗಲಪುರವರಾಧೀಶನ ಬಂಧುವರ್ಗದವನಾದ, ಚಂದ್ರವಂಶೋದ್ಭವನಾದ, ದಕ್ಷಿಣದೇಶದ ಒಬ್ಬ ರಾಜನೆಂದಿಷ್ಟೇ ತಿಳಿ. ಕೃಷ್ಣದೇವನಿಂದ ಭಂಗಿತ

ನಾಗಿಹೋದ, ಈತನು ಅದರ ಪ್ರತೀಕಾರಕ್ಕಾಗಿ, ಹೀಗೆ ಗುಪ್ತವೇಷವನ್ನು ಧರಿಸಿಕೊಂಡು, ಮಹಾ ಸಿದ್ಧತೆಯನ್ನು ಮಾಡುತ್ತಿದ್ದಾನೆ. ಇವನ ಪ್ರಯತ್ನವು ಸಫಲವಾಗುವ ಕಾಲವು ಈಗಲೇ ಪ್ರಾಪ್ತವಾಗಿದೆ, ತಾಯಿ! ಈಗ ಮಹಾನದೀ ತೀರದ, ಅರಣ್ಯದ ಒಂದಾನೊಂದು ಭಾಗದಲ್ಲಿ, ಈತನ ದೊಡ್ಡ ಸೈನ್ಯವು, ಕೃಷ್ಣದೇವನನ್ನೇ ಹೊಂಚುಹಾಕುತ್ತಾ, ಅಡಗಿಕೊಂಡು ಕುಳಿತಿದೆ. ಇವನಿಂದಲೇ ನಿಮ್ಮ ಸರ್ವಾಭೀಷ್ಟವೂ ಫಲಿಸುವುದು.''

ಒಂದರ ಮೇಲೊಂದಾಗಿ ಹೊರಟ ಆ ವಿಚಿತ್ರವಾರ್ತೆಯನ್ನು ಕೇಳಿ, ಹಾಗೂ ಯೋಗೀಶ್ವರನ ಮಾತಿಗೆ ಸರಿಯಾಗಿ, ಅಲ್ಲಿ ಬರುತ್ತಿರುವ ಇಬ್ಬರನ್ನೂ ನೋಡಿ ಯೋಗೀಶ್ವರನ ಅದ್ಭುತವಾದ ದಿವ್ಯದೃಷ್ಟಿಯ ಪ್ರಭಾವವನ್ನು ನೆನೆನೆನೆದು ತಿರುಮಲಾದೇವಿ ಪರಮಾಶ್ಚರ್ಯದಿಂದ ಸ್ತಂಭೀಭೂತಳಾಗಿಹೋದಳು. ಹೃದಯವು ಅತ್ಯಾನಂದದಿಂದ ಪರಿಪೂರ್ಣವಾಗಿಹೋಯಿತು. ಆಗ ಗೌರಾಂಬೆಯೊಂದಿಗೆ, ಆ ನೂತನ ಪುರುಷರಿಬ್ಬರೂ ಸಮೀಪಕ್ಕೆ ಬಂದುಬಿಟ್ಟುದನ್ನು ಕಂಡು, ಅವಳು ನಾಚಿ ಸಂಕುಚಿತೆಯಾಗಿ ಸಖೀವೃಂದ ಮಧ್ಯದಲ್ಲಿ ಹುದುಗಿ, ಒಂದು ಬದಿಗೆ ಸರಿದುನಿಂತಳು. ಆ ನೂತನ ಪುರುಷರಿಬ್ಬರೂ ತೆಳ್ಳಗೆ ಮಿರುಗುವ ಶುಭ್ರವಸ್ತ್ರವನ್ನು ಪರಿಧಾನಮಾಡಿಕೊಂಡಿದ್ದರು. ಉದ್ದವಾದ ದಾಸರಂಗಿಯಿಂದ ಅವರ ದೇಹವು ಅಲಂಕೃತವಾಗಿತ್ತು. ಹೆಗಲಲ್ಲಿ ಉದ್ದವಾದ ಜರತಾರಿವಲ್ಲಿಯನ್ನು ಸುತ್ತಿ, ಇಳಿಬಿಟ್ಟುಕೊಂಡಿದ್ದರು. ಅವರಲ್ಲಿ ವೃದ್ಧನಾಗಿ ತೋರುವವನ ತಲೆಯಲ್ಲಿ ಪಟ್ಟೆ ಜರಿಯ ಚೆಂದವಾದ ರುಮಾಲು ಶೋಭಿಸುತ್ತಿತ್ತು. ಕೈಯಲ್ಲಿ ಸುಂದರವಾದ ಒಂದು ಬೆಳ್ಳಿಹಿಡಿಕೆಯ ದೊಣ್ಣೆಯನ್ನು ಹಿಡಿದಿದ್ದನು. ಸುಕ್ಕುಬಿದ್ದು ವಾರ್ಧಿಕ್ಯ ಚಿಹ್ನಸೂಚಕವಾಗಿದ್ದರೂ, ಒಳ್ಳೇ ವ್ಯಕ್ತಿತ್ವದ ಕಳೆಯಿಂದ ಅವನ ಮುಖವು ಎದ್ದು ಕಾಣುತ್ತಿತ್ತು; ಹಾಗೂ ಬೆಳ್ಳಗಾಗಿಯೂ, ದಪ್ಪವಾಗಿಯೂ ಇರುವ ಆ ಮೀಸೆಯಿಂದಾಗಿ ಗಾಂಭೀರ್ಯದಿಂದಲೂ ಒಪ್ಪುತ್ತಿತ್ತು. ಧೃಷ್ಟಪುಷ್ಟವಾದ ಸುದೀರ್ಘಗಾತ್ರದಿಂದ ಮಹಾಬಲಿಷ್ಟನಾಗಿ ಕಾಣುತ್ತಿದ್ದನು. ಇನ್ನೊಬ್ಬನು ಅವನಿಗಿಂತಲೂ, ವಿಶೇಷ ಕಾಂತಿಯುಕ್ತನಾದ ಯೌವನ ಪುರುಷ. ಯೌವನಕಾಠಿಣ್ಯದಿಂದ ಅವನ ಗುರುತರವಾದ ಗಾತ್ರವು ಹೆಪ್ಪುಗಟ್ಟಿದಂತೆ ಕಾಣುತ್ತಿತ್ತು. ಅವನ ಮುಖವು ಮಿನುಗುತ್ತಿತ್ತು. ತುಟಿಯಮೇಲೆ ಸಣ್ಣ

ದಾದ ವಿಸಾಸೆಯಸಾಲು -- ಚಿತ್ರದಲ್ಲಿನಂತೆ ತಿದ್ದಿದಹಾಗಿತ್ತು. ಗಾಂಭೀರ್ಯವೂ, ರಾಜತೇಜಸ್ಸೂ ವದನವಲಯದಲ್ಲಿ ಮನೆಮಾಡಿಕೊಂಡಿದ್ದುವು. ಅಂತಹ ಮುಖಕ್ಕೆ, ತಲೆಯಮೇಲೆ ರಾಜಚಿಹ್ನದ ಶಿರಸ್ತ್ರಾಣರೂಪವಿಲ್ಲದಿರುವುದೊಂದು ಕೊರತೆಯಾಗಿ ಕಾಣುತ್ತಿತ್ತು. ಆ ಬಿಡುದಲೆಯ ಗುಂಗುರು ಗುಂಗುರಾದ ಕೂದಲುಗಳು ಭುಜಗಳಮೇಲೆ ಆಡುತ್ತಿದ್ದವು. ಅವನ ಕೈಯಲ್ಲಿಯೂ ರತ್ನದ ಹಿಡಿಕೆಯ ಸಪೂರವಾದ ಒಂದು ಬೆತ್ತವಿತ್ತು.

ಆತನು ಸವಿನಯದಿಂದ ಮುಂದೆಬಂದು, ಯೋಗೀಶ್ವರನ ಪಾದಗಳಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದನು.

"ವಿಜಯೀ ಭವ! ಕಲ್ಯಾಣಮಸ್ತು!" ಎಂದು ಕೈಯೆತ್ತಿ ಆಶೀರ್ವಾದ ಮಾಡಿ ಕುಳಿತುಕೊಳ್ಳುವಂತೆಸನ್ನೆ ಮಾಡಿದನು ಯೋಗೀಂದ್ರ. ಯುವಾಪುರುಷನು ಕುಳಿತನು.

ವೃದ್ಧನು ಕೈಮುಗಿದುಕೊಂಡು, "ಯೋಗೀಶ್ವರಾ! ತಾವು ಅಂತ ಜ್ಞಾನಿಗಳು! ಭಕ್ತಾದಿಗಳಿಂದ ಯಾವ ಕಾಣಿಕೆಯನ್ನೂ ಸ್ವೀಕರಿಸುವುದಿಲ್ಲವೆಂದು ಕೇಳಿದುದರಿಂದ ನಾವು ಬರಿಕೈಯಿಂದಲೇ, ತಮ್ಮ ಪಾದದರ್ಶನಾರ್ಥವಾಗಿ ಬಂದಿದ್ದೇವೆ. ಕ್ಷಮಿಸಿ, ಕೃಪೆಮಾಡಬೇಕು" ಎಂದನು.

ಯೋಗಿ, "ಮಹಾದೇವ! ಮಹಾದೇವ! ಸಂತೋಷ! ಸಂತೋಷ! ನಿಮ್ಮ ಹೃದಯದಲ್ಲಿರುವ ಭಕ್ತಿಕಾಣಿಕೆಯನ್ನು ಕಂಡು, ಪರಮ ಸಂತೋಷವಾಯಿತು. ಮಹಾದೇವ! ಮಹಾದೇವ!" ಎಂದು ತಲೆದೂಗಿ, ಕಣ್ಣುಮುಚ್ಚಿ, ಒಂದು ನಿಮಿಷದಮೇಲೆ, ಕಣ್ಣುತೆರೆದು, "ಮಹಾದೇವ! ಮಹಾದೇವ! ತಿಳಿಯಿತು! ನೀವು ಬಂದ ಕಾರ್ಯವು ಯಾವುದೆಂದು ತಿಳಿಯಿತು. ನನ್ನದರ್ಶನಾಕಾಂಕ್ಷೆಯಿಂದಲೂ, ಭವಿಷ್ಯದ್ವಿಜಯ ವಾರ್ತೆಯನ್ನು ತಿಳಿಯುವ ಕುತೂಹಲದಿಂದಲೂ, ನೀವು ಇಲ್ಲಿಗೆ ಬಂದಿದ್ದೀರಿ ಮಹಾದೇವ! ಮಹಾದೇವ! ನಿಮ್ಮ ಮನೋಭೀಷ್ಟವು ಫಲಿಸುವುದು. ಶೀಘ್ರವೇ ವಿಜಯಿಗಳಾಗುವಿರಿ! ಸಂದೇಹ ಬೇಡ! ಆಹಾ! ಮಹಾದೇವ! ಮಹಾದೇವ! ನೀವೀಗ ಬಂದಿರುವುದು ಎಂತಹ ಸುಯೋಗವು! ಸಂತಸದ ಸುಯೋಗವು........!"

ವೃದ್ಧ, "ಅದೇನು ಮಹಾತ್ಮಾ ?"

ಯೋಗೀಶ್ವರನು ಯುವಾಪುರುಷನನ್ನು ನೋಡಿ ಹೇಳತೊಡಗಿದನು, "ರಾಜಾ! ರಾಜವರ್ಮಾ!........'' ಈ ಸಂಬೋಧನೆಯನ್ನು ಕೇಳಿ, ಯುವಾ ಪುರುಷನು ಚಕಿತನಾಗಿ, ವೃದ್ಧನ ಮುಖವನ್ನು ನೋಡಿದನು. —ಆ ನೋಟ ದಲ್ಲಿ, 'ತನ್ನ ರಹಸ್ಯವನ್ನೆಲ್ಲಾ ಈ ಯೋಗಿ ಕಂಡುಕೊಂಡನಲ್ಲಾ!' ಎಂಬ ಆಶ್ಚರ್ಯೋದ್ಗಾರವು ತುಂಬಿಕೊಂಡಿತ್ತು. ವೃದ್ಧನೂ, ಅರ್ಥಸೂಚಕ ದೃಷ್ಟಿ ಯಿಂದ, ಯುವಾಪುರುಷನನ್ನು ದೃಷ್ಟಿಸಿ ಉತ್ತರವಿತ್ತನು. ಅದರಲ್ಲಿ, ''ಮತ್ತೆ, ನಾನು ಹೇಳಿದುದು ಸುಳ್ಳೇ ಈ ಯೋಗಿಯ ಮಹಿಮೆ?'' ಎಂಬ ಹೆಮ್ಮೆಯ ಭಾವವು ಅಡಗಿದ್ದಿತು.

"ಆಶ್ಚರ್ಯಪಡುವೆ ಏಕೆ ರಾಜವರ್ಮಾ?" ಎಂದು ಕೇಳಿದನು ಯೋ ಗೀಶ್ವರ.

ರಾಜ, "ಮಹಾತ್ಮಾ! ತಮ್ಮ ಅದ್ಭುತವಾದ ಅಂತರ್ಜ್ಞಾನವನ್ನು ಕಂಡು, ಆಶ್ಚರ್ಯಪಡುತ್ತೇನೆ".

ಯೋಗಿ, ''ಇದರಲ್ಲಿ ಅತ್ಯಲ್ಪನಾದ ನನ್ನ ಮಹಿಮೆ ಏನೂ ಇಲ್ಲ. ಎಲ್ಲವೂ ಆ ಮಹಾದೇವನ ಲೀಲೆ. ಮಹಾದೇವ! ಮಹಾದೇವ! ರಾಜವರ್ಮಾ! ನಿನ್ನ ನಿಜ ನಾಮಧೇಯವನ್ನು ಈಗ ಬಹಿರಂಗಪಡಿಸಬಾರದೆಂಬುದನ್ನು ನಾನು ಬಲ್ಲೆ. ನೀನು ಆ ವಿಷಯದಲ್ಲಿ ನನ್ನ ಮೇಲೆ ಚಂಚಲಚಿತ್ತನಾಗಬೇಡ. ನಿನ್ನ ಮನಸ್ಸಿನಂತೆ ಎಲ್ಲಾ ಕಾರ್ಯವೂ ನೆರವೇರಿದಾಗ, ಅದು ತನ್ನಂತೆ ತಾನೇ ಬಹಿರಂಗವಾಗಿ ಬರುವುದು. ಮಹಾದೇವ! ಮಹಾದೇವ! ಅದಿರಲಿ, ರಾಜ ವರ್ಮಾ! ನೀನು ಈಗ, ಭವಿಷ್ಯದ್ವಿಜಯ ವಾರ್ತೆಯನ್ನು ತಿಳಿದುಕೊಳ್ಳುವುದ ಕ್ಕಾಗಿ ಬಂದಿರುವೆಯಷ್ಟೆ? ನೀನೀಗ ಬಂದ ಸಮಯವು ಚಿನ್ನದಂತಹ ಸಮ ಯವಾಯಿತು. ಆ ವಿಜಯಕ್ಕೆ ಮೂಲಾಧಾರ ವಸ್ತು ಒಂದನ್ನು ಈಗಲೇ ನಿನಗೆ ತೋರಿಸಿಕೊಡುವೆನು. ಮಹಾದೇವ! ಮಹಾದೇವ! ಮಹಾದೇವ!''

ರಾಜವರ್ಮನು ಭಕ್ತಿಭಾವದಿಂದ ಕೈಮುಗಿದು, ''ಯೋಗೀಶ್ವರರ ಅನುಗ್ರಹ" ಎಂದನು.

''ಮಹಾದೇವ! ಮಹಾದೇವ!'' ಎನ್ನುತ್ತಾ ಯೋಗೀಶ್ವರನು ರಾಜವ ರ್ಮನ ಎಡಭಾಗದ ಕಡೆಗೆ ಬೆರಳು ತೋರಿಸಿ, ''ವತ್ಸಾ! ರಾಜವರ್ಮಾ! ಆಗೋ

ಆ ಸಖೀದ್ವಯದ ಮಧ್ಯದಲ್ಲಿ ಬೆಳಗುವ ಆ ವಿಜಯಮಣಿಯನ್ನು ಒಮ್ಮೆ ನೋಡು" ಎಂದನು.

ರಾಜವರ್ಮನು ಕೂಡಲೇ ಕೊರಳ ತಿರುಗಿಸಿ, ಆ ಕಡೆಗೆ ದೃಷ್ಟಿ ಹಾರಿಸಿದನು.

## ೩೯

## "ಛಪ್ಪರೆ ಕಳ್ಳ!"

ಮಿಂಚಿನಂತಹ ಕಟಾಕ್ಷವೊಂದು ರಾಜವರ್ಮನ ದೃಷ್ಟಿಯನ್ನು ಕೆಣಕಿ, ಸೋತು, ತಲೆತಗ್ಗಿಸಿತು. ರಾಜವರ್ಮನು, ಮತ್ತೂ ನೋಡಿದನು. ಅವನು ಆ ಪ್ರದೇಶಕ್ಕೆ ಬರುತ್ತಿರುವಾಗಲೇ, ಆ ಮೂವರು ರಮಣಿಯರನ್ನು ನೋಡಿದ್ದನು. ಆಗ, ಅವರ ಬೆಂಬದಿ ಮಾತ್ರವೇ, ಅವನ ಕಡೆಗಿದ್ದುದಲ್ಲದೆ, ಮುಖಬಿಂಬಗಳು ಗೋಚರಿಸಿರಲಿಲ್ಲ. ಅವನು ಲಕ್ಷ್ಯಪೂರ್ವಕವಾಗಿ ನೋಡಲೂ ಇಲ್ಲ. ಈಗ ಯೋಗೀಶ್ವರನೇ ನೋಡೆಂದು ತೋರಿಸಿದಾಗ, ನೋಡಿದನು. ಮನಃಪೂರ್ವಕವಾಗಿ ದೃಷ್ಟಿಸಿದನು, ಅವನ ದೃಷ್ಟಿಯತಾಡನೆಯಿಂದ, ತಿರುಮಲಾದೇವಿಯ ದೃಷ್ಟಿ, ಅಧೋಮುಖ ರೂಪವಾಯಿತು. ರಾಜವರ್ಮನಿಗಾದರೋ, ಅಂತಹ ಲಜ್ಜಾ ಸಂಕೋಚವಾವುದೂ ಇದ್ದಂತೆ ಕಾಣಲಿಲ್ಲ. ಅವನಿಗೆ ಆ ಭುವನಮೋಹಿನಿಯನ್ನು, ಇನ್ನೂ ನೋಡಬೇಕೆನ್ನಿಸಿತು. ಅವನು, ಅಂಜದೆ, ಅಳುಕದೆ, ಆ ದೇವಿಯ ಮುಖಾಮೃತವನ್ನು ನೇತ್ರದ್ವಾರ ಯಥೇಚ್ಛವಾಗಿ ಪಾನಮಾಡಲಾರಂಭಿಸಿದನು. ಹಾಗೆಯೇ ಆ ಮುಖದ ಚಿತ್ರವನ್ನು ಮನಸ್ಸಿನಲ್ಲಿ ಕೆತ್ತಿಡಲೂ ಮೊದಲುಮಾಡಿದನು. ಇದನ್ನು ನೋಡಿ, ಯೋಗೀಂದ್ರನು, "ಹೇಗಿದೆ ಸೌಂದರ್ಯದ ಮಹಿಮೆ?" ಎಂಬರ್ಥವನ್ನು ಸೂಚಿಸುವ ನೋಟದಿಂದ ವೃದ್ಧನ ಮುಖವನ್ನು ನೋಡಿದನು. ವೃದ್ಧನೂ ತಲೆದೂಗುತ್ತಾ ಮುಗುಳ್ನಗೆ ನಕ್ಕನು.

ಬಳಿಕ ಯೋಗೀಂದ್ರನು ರಾಜವರ್ಮನನ್ನು ಕುರಿತು, "ಇದೇನಿದು ರಾಜವರ್ಮಾ? ಪಾಪ! ಏನೂ ಅರಿಯದ ಈ ಹುಡುಗಿಯನ್ನು ನುಂಗಿಯೇ ಬಿಡುವಂತೆ ನೋಡುವುದೇ? ಮಹಾದೇವ! ಮಹಾದೇವ!" ಎಂದು ಹೇಳಿದನು.

ರಾಜವರ್ಮನಿಗೆ ಮನಸ್ಸು ಸೂಜಿಯಿಂದ ಚುಚ್ಚಿದಂತಾಯಿತು. ತಟ್ಟನೆ ಎಚ್ಚತ್ತು, ತನ್ನ ನೋಟವನ್ನು ಆ ಕಡೆಯಿಂದ ಸೆಳೆದು ತಿರುಗಿಸಿದನು.

ತಿರುಮಲಾದೇವಿ ನಾಚಿಕೆಯನ್ನು ಸಹಿಸಲಾರದೆ, ಸಖಿಯರನ್ನು ದೂಡಿ ಕೊಂಡು ದೂರಹೊರಟುಹೋದಳು.

ಯೋಗೀಶ್ವರನು ಎದ್ದು, ರಾಜಕುಮಾರಿಯ ಬಳಿಗೆ ಹೋಗಿ ಮೆಲ್ಲನೆ, "ತಾಯಿ! ನೀನು ಸ್ತ್ರೀ ಸಹಜವಾದ ನಾಚಿಕೆಯಿಂದ ಇಲ್ಲಿ ನಿಲ್ಲಲಾರದವಳಾ ಗಿರುವೆ. ವಿಧಿಯ ವಿಧಾನದಂತೆ, ನಿನ್ನ ಮನಸ್ಸು ಈ ರಾಜವರ್ಮನ ಮನ ಸ್ಸಿನಲ್ಲಿ ಸಂಲಗ್ನವಾಯಿತು. ಇದೇನೂ ಆಶ್ಚರ್ಯವಲ್ಲ! ಉಳಿದ ಮಂಗಳ ಕಾರ್ಯವು ಬೇಗನೆ ಸಿದ್ಧಿಯನ್ನು ಪಡೆಯುವುದು; ನೀನೀಗ ಹೊರಟು ಹೋಗು" ಎನ್ನಲು, ತಿರುಮಲಾದೇವಿ ಯೋಗೀಶ್ವರನಿಗೆ ವಂದಿಸಿ, ಹೋಗಲಾ ರದೆ ಹೊರಟುಹೋದಳು. ಸೆರಗನ್ನು ಸರಿಪಡಿಸಿಕೊಳ್ಳುವುದೇ ಮೊದಲಾದ ಏನೋ ನೆಪಗಳಿಂದ, ಮುಖವನ್ನು ಸ್ವಲ್ಪ ತಿರುಗಿಸುತ್ತಾ, ರಾಜವರ್ಮನನ್ನು ಕಳ್ಳನೋಟದಿಂದ ನೋಡುತ್ತಾ, ಮಂದಗಮನದಿಂದ ಹೊರಟುಹೋದಳು. ಮನಸ್ಸಿನಂತೆಯೇ ಅವಳ ಕಾಲುಗಳೂ ಚಂಚಲವಾಗಿವೆ. ನೀರಿನ ಸೆಳತ ದಲ್ಲಿದ್ದು ನಡೆಯುವಂತೆ ಹಿಂದಕ್ಕೆ ಜಗ್ಗುತ್ತಿರುವ ಕಾಲನ್ನು ಬಲಾತ್ಕಾರ ದಿಂದ ಮುಂದೂಡುತ್ತಾ ಹೊರಟುಹೋದಳು. ಕಡೆಗೊಂದು ದೀರ್ಘನಿಶ್ವಾಸ ವನ್ನು ಬಿಟ್ಟು, ರಾಜವರ್ಮನಿಗೆ ಕಣ್ಮರೆಯಾಗಿಹೋದಳು.

ಯೋಗೀಶ್ವರನ ಚುಚ್ಚಿದನುಡಿಯನ್ನು ಕೇಳುತ್ತಲೇ, ರಾಜವರ್ಮನಿಗೆ ಬಡಿದೆಬ್ಬಿಸಿದಂತಾಯಿತು! ಕಣ್ಣನ್ನು ಕೂರಯಿಸುವಂತಹ ತಿರುಮಲಾದೇ ವಿಯ ಸೌಂದರ್ಯದ ಜಾಜ್ವಲ್ಯಮಾನವಾದ, ವಿದ್ಯುತ್‌ಪ್ರಕಾಶದಿಂದ ಸದಾ, ಬೆಳಕಿಗೆ ತಂದಿರಿಸಿದಂತಾಯಿತು. ಮನಸ್ಸು ಎಚ್ಚರವಾಗಿ ವಿಚಾರವು ಹರಿಯಿ ತು. ಆ ಲೋಕಸುಂದರಿ ಯಾರಾಗಿರಬಹುದೆಂಬುದು ಹೊಳೆಯಿತು. ಯೋಗೀ ಶ್ವರನ ಮೇಲೆಯೂ ಸಂದೇಹವು ಅಂಕುರಿಸಿತು. ಇಷ್ಟೇ ಅಲ್ಲದೆ, ಸುತ್ತು ಮುತ್ತಣ ಪ್ರದೇಶವೆಲ್ಲಾ ಸಂದೇಹರಾಜ್ಯವಾಗಿಯೇ ಕಂಡುಬಂತು. ಅವನು ಇದನ್ನೆಲ್ಲಾ ಕುರಿತು, ಪರ್ಯಾಲೋಚನೆಮಾಡುತ್ತಿರಲು, ಯೋಗೀಶ್ವರನು ಅಲ್ಲಿಗೆ ಬಂದು ಕೃಷ್ಣಾಜಿನದಮೇಲೆ ಪದ್ಮಾಸನಹಾಕಿ ಕುಳಿತು, ರಾಜವರ್ಮ

ನನ್ನು ನೋಡಿ ನಸುನಗುತ್ತಾ, "ತಿಳಿಯಿತು, ರಾಜವರ್ಮ! ನಿನ್ನ ಭಾವ ವೆಲ್ಲಾ ನನಗೆ ತಿಳಿಯಿತು. ಮಹಾದೇವ ಮಹಾದೇವ!" ಎಂದನು.

ರಾಜ, "ಏನು ತಿಳಿಯಿತು?"

ಯೋಗಿ, "ಎಲ್ಲವೂ ತಿಳಿಯಿತು. ನೀನು ತರುಣಿಯ ಸೌಂದರ್ಯವನ್ನು ಮೋಹಿಸಿರುವೆ. ಅವಳ ಆತ್ಮವನ್ನು ಪ್ರೇಮಿಸಿರುವೆ. ಜೈ! ಮಹಾದೇವ! ಮಹಾದೇವ!"

ರಾಜ, "ಯಾರ ಆತ್ಮ? ಯಾರ ಸೌಂದರ್ಯ?"

ಯೋಗಿ, "ಓಹೋ! ಬೆಕ್ಕು ಕಣ್ಣು ಮುಚ್ಚಿ ಹಾಲುಕುಡಿದಂತೆ ನಟಿಸು ವೆಯೋ? ಚೆನ್ನಾಗಿದೆ! ಮಹಾದೇವ! ಮಹಾದೇವ! ತಿಳಿಯಿತು. ಈಗ ಯೋಚನೆಹತ್ತಿದೆ. ಏನೋ ಕ್ರೋಧಪರವಶನಾಗಿ ಯೋಚನೆಮಾಡದೆ ದುಡುಕಿ ಬಾಯಿಹಾರಿಸಿ, ಈಗ 'ಅಯ್ಯೋ! ಎಂಥಾ ಸೌಂದರ್ಯದ ನಿಧಿಯಿದು!' ಎಂದು ಪಶ್ಚಾತ್ತಾಪಪಡುತ್ತೀ! ರಾಜವರ್ಮ! ಅದೇನೂ ದೊಡ್ಡದಲ್ಲ ಬಿಡು. ರಹಸ್ಯದಲ್ಲಿ ಹೇಳಿದ ಆ ಮಾತು, ಬರಿಗಾಳಿ ಮಾತೇ—ಹೊರತು, ಪ್ರತಿಜ್ಞೆ ಯಲ್ಲ ಬಿಡು. ವಿಧಾತನು ನಿಮ್ಮಿಬ್ಬರನ್ನೂ ಸತೀಪತಿಗಳನ್ನಾಗಿಯೇ ನಿರ್ಮಿ ಸಿರುವುದರಿಂದ ನೀವಿಬ್ಬರೂ ಈಗ ಪ್ರೇಮಪರವಶರಾಗಿರುವಿರಿ. ಆದುದರಿಂದ ........"

ರಾಜ, "ಗೊತ್ತಾಯಿತು ಯೋಗೀಶ್ವರಾ! ಮುಂದಿನ ಮಾತು ನನಗೆ ಗೊತ್ತಾಯಿತು. ಹಾಗೆಯೇ ತಮ್ಮ ವಿಷಯದಲ್ಲಿ ನನಗಿದ್ದ ತಪ್ಪಭಿಪ್ರಾ ಯವೂ, ತನ್ನ ಮನಸ್ಸಿನಿಂದ ಈಗ ಜಾರಿಹೋಗಿ ನಿಜವಾದ ಅಭಿಪ್ರಾಯವೂ ಹುಟ್ಟಿತು."

ಯೋಗೀಶ್ವರನು ವಿಸ್ಮಯದಿಂದ ಕೇಳಿದನು "ಅದೇನದೇನು?"

ರಾಜ, "ಮತ್ತೇನಿಲ್ಲ, ಮೊತ್ತಮೊದಲು ತಮ್ಮನ್ನು ನೋಡಿದಾಗ— ತಾವು ರಾವಣಸಂನ್ಯಾಸಿಯೋ ಅಥವಾ ಅರ್ಜುನಸಂನ್ಯಾಸಿಯೋ ಎಂದು ಸಂದೇಹಿಸಿಕೊಂಡೆನು. ಈಗ ನೋಡಿದರೆ ತಾವು ಘಟಕಸಂನ್ಯಾಸಿಗಳೆಂದು ಸ್ಪಷ್ಟವಾಯಿತು."

ಆ ಮಾತನ್ನು ಕೇಳಿ, ವೃದ್ಧನು ನಾಲಿಗೆಕಚ್ಚಿ, ಕಣ್ಣರಳಿಸಿದನು. ಯೋಗೀಶ್ವರನು ಬೆಚ್ಚಿಬಿದ್ದಂತಾಗಿ ಅದನ್ನು ಬಹಿರಂಗಗೊಳಿಸದೆ, ಶಾಂತತೆಯಿಂದಲೇ ಕೇಳಿದನು, "ಹಾಗೆಂದರೆ?........ನನಗೆ ಸ್ಪಷ್ಟವಾಗಿ ಬೆಳಗಲಿಲ್ಲವಲ್ಲ, ರಾಜವರ್ಮ?"

"ಬೆಳಗಲಿಲ್ಲವೇ? ತಮ್ಮ ಯೋಗಶಕ್ತಿಯೂ, ದಿವ್ಯದೃಷ್ಟಿಯೂ ಎತ್ತ ಹೋದುವು? ನಿಮ್ಮ ಈ ಗಡ್ಡಮೀಸೆಗಳೊಳಗೆ ಅಡಗಿಹೋದುವೆ?'' ಎಂದು ಥಟ್ಟನೆ, ಯೋಗೀಶ್ವರನ ಬಿಳಿಯಾದ ಗಡ್ಡಮೀಸೆಯನ್ನು ಒಮ್ಮೆಗೇ ಕೈಹಾಕಿ ಕಿತ್ತುಬಿಟ್ಟನು! ಅದು ಹಾಗೆಯೇ ಕೆಳಕ್ಕೆ ಬಿದ್ದುಹೋಯಿತು. ಯೋಗೀಶ್ವರನಾಗಿದ್ದ ತೆನ್ನಾಲಿ ರಾಮಕೃಷ್ಣನು ಪಿಳಿಪಿಳಿನೋಡುತ್ತಿದ್ದಾನೆ!

ವೃದ್ಧನು ಬೆಚ್ಚಿಬಿದ್ದು, ಯಾರಾದರೂ ಈ ನೋಟವನ್ನು ನೋಡುತ್ತಿರುವರೇ, ಎಂದು ಸಂದೇಹಿಸಿ ಸುತ್ತಲೂ ನೋಡಿದನು. ಯಾರೂ ನೋಡಲಿಲ್ಲ. "ಭಪ್ಪರೇ ಕಳ್ಳಾ!" ಎಂದು ರಾಜವರ್ಮನು ತಲೆಯಾಡಿಸಿ ರಾಮಕೃಷ್ಣನನ್ನು ಹಂಗಿಸುತ್ತಾ "ಓಹೋ! ಅಂತೆಯೇ, ಇಷ್ಟು ದೊಡ್ಡ ಮಹಾತ್ಮನಾಗಿಬಿಟ್ಟಿದ್ದೀ! ಯೋಗೀಶ್ವರನಾಗಿ ಬಿಟ್ಟಿದ್ದೀ! ಏನಾದರೇನು? ನಿನ್ನ ನಿಜಸ್ವರವನ್ನು ನನ್ನಮುಂದೆ ಮರೆಯಿಸಿಡಲಾಗಲಿಲ್ಲ. ಎಲೋ! ಕಳ್ಳಬ್ರಾಹ್ಮಣಾ! ಊರಿಗೆ ಹೋಗಿಬರುತ್ತೇನೆಂದು ಸುಳ್ಳುಹೇಳಿ ಹೊರಟು, ಇಲ್ಲಿಗೆ ಬಂದು ಈ ಊರಲ್ಲಿ ಬಕಧಾನ್ಯವನ್ನು ಕಲಿತೆಯಾ! ಭಲೆ! ಯೋಗೀಶ್ವರಾ, ನೀನು!'' ಎಂದು ವಿಸ್ಮಯ-ಕೋಪ-ಹಾಸ್ಯಗಳಿಂದ ನುಡಿದನು.

ರಾಮಕೃಷ್ಣಯೋಗಿ, ನಗುಮೊಗವನ್ನು ತಂದುಕೊಂಡು, "ಏನು ಮಾಡಲಿ ಪ್ರಭು? 'ಏನಕೇನಾಪ್ಯುಪಾಯೇನ ಪ್ರಸಿದ್ಧಪುರುಷೋ ಭವ!' ಎಂಬಹಾಗೆ ಯಾವುದೋ ಒಂದು ಉಪಾಯದಿಂದ ಮಹಾಪ್ರಸಿದ್ಧ ಯೋಗೀಶ್ವರನಾಗಿ ತಮ್ಮ ಬಾಯಿಂದ ಭಲೆ! ಭಪ್ಪರೆ! ಎನ್ನಿಸಿಕೊಂಡೆನಲ್ಲ!" ಎಂದು ನುಡಿದು ಕಿತ್ತುಹೋದ ಗಡ್ಡವನ್ನೂ, ಮೀಸೆಯನ್ನೂ ಹಿಡಿದುಕೊಂಡು, ಆಶ್ರಮದೊಳಗೆ ಹೊಕ್ಕನು. ಸಿಕ್ಕಿಬಿದ್ದ ಕಳ್ಳನಾದರೂ ಅವನು ಒಳ್ಳೇಗೆಲುವಿನಿಂದಲೇ ಇದ್ದಾನೆ! ತೆನ್ನಾಲಿರಾಮಕೃಷ್ಣನಲ್ಲವೇ?

## ೪೦

# "ಉಪಾಯವಿಲ್ಲ"

ನಮಗೆ ಗುರುತು ಸಿಕ್ಕದೆ, ವೃದ್ಧನೆಂದು ಸಂಬೋಧಿಸಲ್ಪಟ್ಟ ತಿಮ್ಮರಸು ಮಂತ್ರಿ, ರಾಜವರ್ಮನೆಂಬ ನಾಮಧಾರಿಯಾದ ಕೃಷ್ಣದೇವರಾಯನಿಗೆ, ಏನೋ ಹೇಳಬೇಕೆಂದು ಬಾಯಿ ತೆರೆಯುವುದರೊಳಗೆ, ರಾಯನೇ ಸ್ವಲ್ಪ ಸಿಟ್ಟಿನಿಂದ ತಿಮ್ಮರಸನನ್ನು ನೋಡಿ, "ಅಪ್ಪಾಜಿ! ಈ ಯೋಗಿಯ ಮಹಿಮೆಯನ್ನು ಬಣ್ಣಿಸಿ, ನನಗೆ ರಾಜವರ್ಮನೆಂಬ ಅಭಿದಾನವನ್ನು ಕೊಟ್ಟು, ನನ್ನನ್ನು ಇಲ್ಲಿಗೆ ಕರೆತಂದ ನಿಮ್ಮ ಉದ್ದೇಶವೇನೆಂದು ನನಗೀಗ ಸ್ಪಷ್ಟವಾಗಿ ಹೊಳೆಯಿತು. ಅಪ್ಪಾಜಿ! ಎಷ್ಟು ದಿನದಿಂದ ನಿಮ್ಮ ಈ ಒಳಸಂಚು ನಡೆಯುತ್ತಿತ್ತು?" ಎಂದನು.

"ರಾಜೇಂದ್ರಾ! ಕ್ಷಮಿಸು! ಯಾವ ದಿನ ನಿನ್ನಿಂದ ಘೋರ ಪ್ರತಿಜ್ಞೆಯು ಮಾಡೋಣಾಯಿತೋ, ಆ ದಿನದಿಂದಲೂ ನಡೆಯುತ್ತಿತ್ತು. ಆದರೆ ನನ್ನ ಉದ್ದೇಶವು ದುರುದ್ದೇಶಯುಕ್ತವಾದುದಲ್ಲ."

"ಅಲ್ಲ! ಪ್ರತಿಜ್ಞಾಬದ್ಧವಾಗಿರುವ ನನ್ನ ಹೃದಯವನ್ನು ಜಗನ್ಮೋಹಿನಿಯ ಮೋಹದಿಂದ ಇಕ್ಕಟ್ಟಿಗೆ ಸಿಕ್ಕಿಸಿ, ನನ್ನನ್ನು ಮರಣವೇದನೆಗೆ ಗುರಿಪಡಿಸಬೇಕೆಂಬ ಉದ್ದೇಶದಿಂದ! ಆದರೆ ಅಪ್ಪಾಜೀ! ಈ ಕೃಷ್ಣದೇವರಾಯನು ಕ್ಷುದ್ರವಾದ ಮೋಹವನ್ನು ಹರಿದೊಗೆಯಲು ಸಮರ್ಥನಾದ ಧೀರನೆಂದು ತಿಳಿಯೋಣಾಗಲಿ!"

"ರಾಜವರೇಣ್ಯಾ! ಅಷ್ಟು ಕಠಿಣಮನಸ್ಕನಾಗಬೇಡ. ರಹಸ್ಯದಲ್ಲಿ ಮಾಡಿದ ಆ ಘೋರಪ್ರತಿಜ್ಞೆಯನ್ನು ಉಪಸಂಹರಿಸಿಬಿಡು. ಆ ಪ್ರತಿಜ್ಞೆ ಮಹಾದೋಷಕರವಾಗಿದೆ. ವಿಚಾರಿಸು! ಪಾಪಕಾರಕ! ಕುಲೀನ ಕನ್ಯೆಯೊಬ್ಬಳನ್ನು ಯಾವನೋ ಒಬ್ಬ ಸರದಾರನಿಗೆ ವಿವಾಹಮಾಡಿಕೊಟ್ಟರೆ, ಕುಲಸ್ತ್ರೀ ಮಾನಭಂಗಮಾಡಿದ ಮಹಾಪಾಪಕ್ಕೆ ಗುರಿಯಾಗಬೇಕಾಗುವುದು. ಅದಲ್ಲದೆ, ರಾಜಕುಮಾರಿಗೊದಗಿದ ಭಯಂಕರ ಅಪಮಾನವನ್ನು ಸಹಿಸದೆ ಇಡೀ ಉತ್ಕಲ ದೇಶವೇ ಒಂಬಾಗಿ, ದಂಗೆ ಎದ್ದು, ನಮ್ಮ ಮೇಲೆ ತಿರುಗಿ ಬೀಳಲಿಕ್ಕೂ ಸಂ

ಶಯವಿಲ್ಲ. ನಿನ್ನ ಸತ್ಕೀರ್ತಿಫಲಕದಮೇಲೆ ಕರ್ರಗಿನ ಮಸಿ ಬಳಿದಹಾಗೆ! ಇದನ್ನೆಲ್ಲಾ ಪರ್ಯಾಲೋಚಿಸಿ, ನಿನಗೂ ತಿರುಮಲಾದೇವಿಗೂ ಪರಸ್ಪರ ದರ್ಶನ ಮಾಡಿಸಿ, ಪ್ರೇಮವನ್ನು ನೆಲೆಗೊಳಿಸಬೇಕೆಂದು ನಾವು ಈ ಬಗೆಯ ಸಂಘಟನೆಯನ್ನು ಹೂಡಿದೆವು........ಕ್ಷಮಿಸು........" ಎನ್ನುವಷ್ಟರಲ್ಲಿ ಮೊದಲಿನಂತೆಯೇ ಗಡ್ಡಮೀಸೆಗಳನ್ನಿಟ್ಟುಕೊಂಡು ಹೊರಗೆಬಂದ ರಾಮಕೃಷ್ಣಯೋಗಿಯು ತಿಮ್ಮರಸನ ಮಾತನ್ನು ಪೂರಯಿಸಲಾರಂಭಿಸಿದನು. "ಈ ಸಂಘಟನಾ ತಂತ್ರವು ಫಲಿಸದೇ ಹೋದೀತೇ? ಫಲಿಸಿತು! ನೋಡು ರಾಜೇಂದ್ರಾ! ಕೃಷ್ಣದೇವರಾಯನನ್ನು ನಿಂದಿಸುತ್ತಲೇ ಇರುವ ತಿರುಮಲಾದೇವಿ, ಪಾಪ! ರಾಜವರ್ಮನ ಮನ್ಮಥಾಕಾರಕ್ಕೆ ಮನಸೋತು, ಪ್ರೇಮದ ಸೆರೆಯಲ್ಲಿ ಸಿಕ್ಕಿಬಿದ್ದೇ ಬಿಟ್ಟಳು."

ಕೃಷ್ಣದೇವರಾಯ, "ಶ್ಯ್! ಕಳ್ಳ ಬ್ರಾಹ್ಮಣಾ! ಸಾಕು ನಿನ್ನ ಅಧಿಕಪ್ರಸಂಗ! ನಿಲ್ಲಿಸು" ಎಂದು ಗದರಿಸಿದನು.

ಆದರೆ, ರಾಮಕೃಷ್ಣನು ನಿಲ್ಲಿಸಲೇ ಇಲ್ಲ. ಮತ್ತೂ ಹೇಳಿದನು, "ಪ್ರಭೂ! ಸಾವಿರ ಸುಳ್ಳಾದರೂ ಹೇಳಿ, ಒಂದು ಮದುವೆಮಾಡಬೇಕೆಂದು ಹಿರಿಯರ ಮಾತುಂಟು. ಹಾಗಿರಲು, ಆ ಗುಟ್ಟಿನ ಪ್ರತಿಜ್ಞೆಯೊಂದನ್ನು ಸುಳ್ಳುಮಾಡಿ, ಸದ್ಯಃ ರಾಜವರ್ಮನೆಂದು ಒಂದು ಸಣ್ಣ ಸುಳ್ಳು ಹೇಳಿಕೊಂಡು, ಮದುವೆಯೊಂದು ಮಾಡಿಕೊಂಡರೆ, ತಪ್ಪೇನು? ಅದು ಮುಗಿದ ತತ್‌ಕ್ಷಣವೇ, ಕೃಷ್ಣದೇವರಾಯರಾಗಿ ಬೆಳಗಿದರೆ, ತಿರುಮಲಾದೇವಿ ಅರಿವಿಗೆ ಬಂದು, ತಾನು ಹಿಂದೆ ತಿಳಿಯದೆ ತನ್ನ ಪ್ರೇಮದೇವನನ್ನು ನಿಂದಿಸಿದುದಕ್ಕಾಗಿ ಪಶ್ಚಾತ್ತಾಪಪಟ್ಟು, ಕ್ಷಮೆಬೇಡಿ, ಸಪ್ಪಗಾಗುವಳು! ಅವಳ ಗರ್ವವನ್ನು ಕರಪೀಡನದಿಂದ ಮುರಿದಂತಾಯಿತು! ಅವಳು ಸಪ್ಪಗಾದರೆ, ಪ್ರತಾಪರುದ್ರನೂ ತಣ್ಣಗಾಗುವನು; ಅವನು ತಣ್ಣಗಾದಾಗ, ದೇಶವೂ ಶಾಂತವಾಗುವುದು! ಮತ್ತೇನು? ಕರ್ನಾಟಕಾಂಧ್ರೈಕ್ಯಮತ್ಯವು ನಿಕ್ಷೇಪ ನಿಧಿ! ಈ ನಿಧಿಯನ್ನು ವರದಕ್ಷಿಣೆಯಾಗಿ ನಾನೇ ವಸೂಲು ಮಾಡುವೆನು. ಬೇಕಾದರೆ, 'ಶುಭಸ್ಯ ಶೀಘ್ರಂ!' ಎಂದು ಗೆಲುವಿಂದ ತಿಮ್ಮರಸನ ಮುಖವನ್ನು ನೋಡಿದನು.

ಕೃಷ್ಣದೇವ, "ಸಾಕು, ಬಿಡು! ರಾಮಕೃಷ್ಣಾ! ಸುಮ್ಮನೆ ಬಾಯಿ ಹರಟಿ ಯಾಕೆ ಹರಟುತ್ತೀ?"

ತಿಮ್ಮರಸು, "ಏಕೆ ರಾಜೇಂದ್ರಾ! ರಾಮಕೃಷ್ಣನ ಮಾತು ಯಥಾರ್ಥ ವಾಗಿಯೇ ಇದೆ........"

ರಾಮಕೃಷ್ಣ, "ಅಲ್ಲವೇ, ಮತ್ತೆ ಗುರುದೇವಾ?"

ಕೃಷ್ಣದೇವ, "ಸರಿ, ಒಳ್ಳೇ ಗುರುಶಿಷ್ಯರು! ಅಪ್ಪಾಜಿ! ನನ್ನೀ ವಿಷಯ ದಲ್ಲಿ ನೀವು ವೃಥಾಶ್ರಮವಹಿಸುವುದನ್ನು ನೋಡಿ, ನನಗೆ ವ್ಯಸನವಾಗುತ್ತಿದೆ. ನೀವೇನು ಹೇಳಿದರೂ, ಅಂತರಾತ್ಮಕ್ಕೆ ವಿರೋಧವಾಗಿ, ನಾನು ಮಾಡಿದ ಪ್ರತಿಜ್ಞೆಯನ್ನು ಉಪಸಂಹರಿಸಕೊಳ್ಳಲಾರೆನು. ನೀವು ಹೇಳುವಂತೆ ಕುಲ ಸ್ತ್ರೀಯ ಮಾನಭಂಗದ ದೋಷವೇನೂ ಇದರಲ್ಲಿ ಕಾಣುವುದಿಲ್ಲ. ಕ್ಷತ್ರಿಯ ಕುಲ ಸಂಭೂತನಾದ, ರೂಪಸಿಂಗನು ತಿರುಮಲಾದೇವಿಗೆ ತಕ್ಕವರನೇ ಆಗಿ ದ್ದಾನೆ. ನೀವು ಹೆದರಿಸುವಂತೆ, ಉತ್ಕಲಲೋಕವೇ ದಂಗೆ ಎದ್ದರೆ ಏಳಲಿ. ಕ್ಷತ್ರಿಯ ವೀರನು ಅದಕ್ಕೆಲ್ಲಾ ಹೆದರಿ, ಹಿಂಜರಿಯುವುದಿಲ್ಲ."

ತಿಮ್ಮರಸನು ಚಿಂತೆಯಿಂದ ಹೇಳುತ್ತಿದ್ದನು, "ರಾಜಾ! ಒಂದುವೇಳೆ ಆ ಘೋರ ಪ್ರತಿಜ್ಞೆಯನ್ನು ಹಿಂದೆಗೆಯಲಿಕ್ಕೆ, ನೀನು ರೂಪಸಿಂಗನಿಗೆ ಕೊಟ್ಟ ವಾಗ್ದಾನವು ಅಡ್ಡನಿಲ್ಲುವುದಾದರೆ........" ಎಂದನು.

ರಾಯನು ಬೇಸರದಿಂದ, "ಅಪ್ಪಾಜಿ! ಈ ಬಗೆಯ ಒಣಹರಟೆಯಿಂದ ಏನೇನೂ ಪ್ರಯೋಜನವಿಲ್ಲ. ಅಪ್ಪಾಜಿ! ಹಾಗೂ ರಾಮಕೃಷ್ಣಾ! ನಾನು ದೃಢವಾಗಿ ಹೇಳುತ್ತೇನೆ; ನೀವಿಬ್ಬರೂ ನನ್ನ ಹಿತಚಿಂತಕರಾಗಿದ್ದರೆ, ನನ್ನ ಪ್ರತಿಜ್ಞಾಪೂರ್ಣಕ್ಕೆ ಸಹಾಯಮಾಡೋಣಾಗಲಿ, ಅದು ಸಾಧ್ಯವಿಲ್ಲದಿದ್ದರೆ, ಸುಮ್ಮನೆ ಕುಳಿತುಬಿಡಿರಿ. ನಾನು ಈವರೆಗೂ ಮೆಟ್ಟುತ್ತಾಬಂದ ಕ್ಷಾತ್ರಮಾರ್ಗ ದಲ್ಲಿಯೇ, ನನ್ನ ಪ್ರತಿಜ್ಞೆಯನ್ನು ಪೂರ್ಣಮಾಡಿಕೊಳ್ಳುವೆನು" ಎಂದು ನುಡಿ ದು, ಆ ಸ್ಥಳವನ್ನು ಬಿಟ್ಟು, ಹೊರಟುಹೋದನು.

ರಾಮಕೃಷ್ಣಯೋಗಿಯು, ಇಳಿಮೊಗದಿಂದ ತಿಮ್ಮರಸನ ಮೊಗ ನೋಡಿ,"ಉಪಾಯವಿಲ್ಲ" ಎನ್ನುತ್ತಾ ಕೃಷ್ಣಾಜಿನದ ಬುಡದಿಂದ ಸಣ್ಣಪುಡಿ ಬುರುಡೆಯನ್ನು ಹೊರಕ್ಕೆ ತೆಗೆದನು.

ತಿಮ್ಮರಸನೂ ಇಳಿಮೊಗದಿಂದ, "ಉಪಾಯವಿಲ್ಲ. ನಾವು ರಾಜ್ಯ ಭೃತ್ಯರಾದಮೇಲೆ, ನಮ್ಮ ರಾಜನ ಕಾರ್ಯವನ್ನು ನೆರವೇರಿಸಲೇ ಬೇಕು" ಎಂದನು.

"ಹೌದು;" ಎಂದು ರಾಮಕೃಷ್ಣಯೋಗಿ, ನಸ್ಯವನ್ನು ಅಂಗಯ್ಯ ಮೇಲೆ ಸುರಿಸುತ್ತಾ, "ಉಪಾಯವೇ ಇಲ್ಲ. ಯಾವುದಾದರೊಂದು ಹೆಣ್ಣಿಗೆ, ಗಂಡುವೇಷಹಾಕಿ, ರಾಯನ ಪ್ರತಿಜ್ಞೆಯನ್ನು ತೀರಿಸಿದ ಶಾಸ್ತ್ರ ಮಾಡಿಬಿಡಬೇಕೆಂದು ಯೋಚಿಸಿದ ನಮ್ಮ ಎರಡನೆಯ ಯುಕ್ತಿಗೂ ಈ ರೂಪಸಿಂಗನಿಂದಾಗಿ ಉಪಾಯವಿಲ್ಲ" ಎಂದು ಸರಭರನೆ ನಸ್ಯವನ್ನು ಏರಿಸಿದರು.

"ಏಕೆ ಸೇದುತ್ತೀಯೋ ಈ ಹಾಳುಪುಡಿಯನ್ನು? ವಿಜ್ಞಾನಚೂರ್ಣವೆಂದು ನೀನು ಹೊಗಳಿ ಹೊಗಳಿ, ಸೇದಿದ ಈ ಪುಡಿಯಿಂದ ಹುಟ್ಟಿದ ಯುಕ್ತಿಯೆಲ್ಲಾ ವ್ಯರ್ಥವಾಯಿತಲ್ಲ?"

"ಪೂರಾ ಎಲ್ಲಿ ವ್ಯರ್ಥವಾಯಿತು, ಗುರುವರಾ? ಪ್ರೇಮವು ನೆಲೆಯೂರಿತೋ ಇಲ್ಲವೋ? ಈಗ ಸಾಕು, ಇನ್ನು ಮುಂದೆಯೂ ಈ ವಿಜ್ಞಾನಚೂರ್ಣವು ಏನಾದರೊಂದು ಹೊಸಯುಕ್ತಿಯನ್ನು ತೋರಿಸಕೊಡದೇಹೋದೀತೆ? ನೋಡೋಣ! ಅದಕ್ಕಾಗಿಯೇ ಇನ್ನೂ ಇನ್ನೂ ಸೇದುತ್ತಿದ್ದೇನೆ"

"ಏನೋ ಹುಡುಕಿನೋಡಪ್ಪಾ! ರೂಪಸಿಂಗನು ತಿರುಮಲಾದೇವಿಯ ಮೇಲೆ ಆಸಹ್ಯಪಟ್ಟು ಒಲ್ಲೆನೆನ್ನುವಹಾಗೆ ನಾನು ಒಂದು ಪತ್ರಬರೆದು ಅವನಿಗೆ ಕಳುಹಿಸುತ್ತೇನೆ. ನೀನು ಹೀಗೆಯೇ ಯೋಗೀಶ್ವರನಾಗಿದ್ದು, ತಿರುಮಲಾದೇವಿಯನ್ನು ರಾಜವರ್ಮನ ಕೈಗೆ ಸಿಕ್ಕಿಸುವ ಪ್ರಯತ್ನಮಾಡುತ್ತಾ ಇಲ್ಲಿರು. ನಾನು ಹೋಗಿಬರುತ್ತೇನೆ."

## ೪೧

# ಪ್ರತಾಪರುದ್ರ

ಐದಾರು ದಿನಗಳು ಕಳೆದುಹೋದುವು. ಏನೂ ವಿಶೇಷ ಉಂಟಾಗಲಿಲ್ಲ. ಕೃಷ್ಣದೇವರಾಯನು ಮಹಾ ಚಮೂಸಮೂಹದೊಂದಿಗೆ, ಮಹಾನದಿಯ ದಕ್ಷಿಣತೀರದಲ್ಲಿ ಬೀಡುಬಿಟ್ಟುಕೊಂಡು, ನದೀತರಣಮಾಡುವ

ಉದ್ಯೋಗದಲ್ಲಿದ್ದನು. ಇತ್ತ ತಿರುಮಲಾದೇವಿಯು ರಾಜವರ್ಮನ ಸೌಂದರ್ಯದ ಸುಳಿವಿನಲ್ಲಿ ಸಿಕ್ಕಿಬಿದ್ದು ನಷ್ಟಮನಸ್ಸುಳ್ಳವಳಾಗಿ ದಿನಂಪ್ರತಿಯೂ, ಯೋಗೀಶ್ವರನ ಸನ್ನಿಧಿಗೆ ಬಂದು, ಒಂದೊಂದು ನೆವನದಿಂದ, ರಾಜವರ್ಮನನ್ನು ವಿಚಾರಿಸುತ್ತಿದ್ದಳು. ಕಳ್ಳಯೋಗೀಶ್ವರನು ಅವಳಿಗೆ ಏನು ಸಮಾಧಾನ ಹೇಳುವನು? ಹೇಗೋ ತಿರುಮಲಾದೇವಿಯನ್ನು ರಾಯನ ಕಣ್ಣಿಗೆ ಸಿಕ್ಕಿಸಿಬಿಡಬೇಕಾದುದೀಗ ಅವನ ಕರ್ತವ್ಯ. ಆಮೇಲೆ, ಅವಳನ್ನು ರಾಯನೇ ಮದುವೆಮಾಡಿಕೊಂಡರೂ ಸರಿ, ಬೇರೆ ಯಾರಿಗಾದರೂ ಮದುವೆಮಾಡಿಸಿದರೂ ಸರಿ. ರಾಯನಂತೂ ಅವಳನ್ನು ವರಿಸಲಾರೆನೆಂದು ಹೇಳುತ್ತಾನೆ. ಅವನು ಆವಳನ್ನು ವರಿಸಿಕೊಳ್ಳುವಂತೆ ಹೂಡಿದ ಯುಕ್ತಿಯೂ ಭಗ್ನವಾದಂತೆ ತೋರಿತು. ಇನ್ನು ರಾಯನ ಪ್ರತಿಜ್ಞಾಪೂರ್ಣಕ್ಕಾದರೂ ಸಹಾಯಮಾಡಲೇ ಬೇಕಾಗಿದೆ. ಇದನ್ನೆಲ್ಲಾ ಯೋಚಿಸಿ ಅವನು ತಿರುಮಲಾದೇವಿಯನ್ನು ಕುರಿತು, "ತಾಯಿ! ಹೆದರಬೇಡ. ರಾಜವರ್ಮನಿಗೂ ನಿನ್ನ ಮೇಲೆ ತುಂಬಾ ಪ್ರೇಮವಿದೆ. ಅವನು ನಿಮ್ಮನ್ನು ಸಂಕಟದಿಂದ ಪಾರುಮಾಡುವುದಾಗಿ ಒಪ್ಪಿದ್ದಾನೆ. ಕೃಷ್ಣದೇವನು ನಿಮ್ಮ ರಾಜಧಾನಿಯನ್ನು ಮುತ್ತುವಾಗ ರಾಜವರ್ಮನು ಪಕ್ಕೇಶೂಲದ ಹಾಗೆ ಪಾರ್ಶ್ವಭಾಗದಿಂದ ಫಕ್ಕನೆ ಬಂದು, ಉಪಾಯದಿಂದ ಆ ತೌಳವರಾಜನನ್ನು ಸೆರೆಹಿಡಿದು ವಿಜಯವನ್ನು ಸಾಧಿಸುವನು. ಆಮೇಲೆ ನಿನ್ನ ಪಾಣಿಗ್ರಹಣ ತಾಯಿ! 'ಅತ್ಯುತ್ಕರ್ಷಃ ಪತನ ಹೇತುಃ!' ಎಂಬಂತೆ ಇನ್ನೆರಡು ಮೂರು ದಿನಗಳೊಳಗೆ ಗರ್ವಾಂಧನಾದ ಕೃಷ್ಣದೇವನು ಅಧೋಗತಿಗೆ ಬೀಳುತ್ತಾನೆ. ಆಮೇಲೆ ಆ ಹೇಡಿ ತನ್ನ ತುಳುನಾಡ ಕಾಡಿನಲ್ಲಿ ಅವಿತಿರಬೇಕು. ಅದವರೆಗೆ ಸಾವಧಾನದಿಂದಿರು! ಮಹಾದೇವನು ಎಲ್ಲವನ್ನೂ ಸರಿಗೊಳಿಸುವನು. ಮಹಾದೇವ! ಮಹಾದೇವ!" ಎಂದು ವಿವಿಧೋಪಾಯಗಳಿಂದ ಸಮದಾಯಿಸುತ್ತಿದ್ದನು. ಒಂದಾದಿನ ಪ್ರತಾಪರುದ್ರನು ರಾಜವರ್ಮನನ್ನು ನೋಡಿ, ಮಾತನಾಡಬೇಕೆಂದು ಬಯಸಿ, ಯೋಗೀಶ್ವರನೊಡನೆ ಕೇಳಲು, ರಾಜವರ್ಮನೀಗ ಬಹು ತೀವ್ರವಾದ ಕೆಲಸದಲ್ಲಿ ನಿರತನಾಗಿರುವನೆಂದೂ ಕೃಷ್ಣದೇವನನ್ನು ಸೆರೆಹಿಡಿದಮೇಲೆಯೇ ಎಲ್ಲರ ಕಣ್ಣೆದುರಿಗೆ ಬೀಳುವನೆಂದೂ, ಬೇಕಾದರೆ ಒಂದು ವಿಜ್ಞಾಪನಾಪತ್ರವನ್ನು ಬರೆದರೆ, ಅದನ್ನು ತಾನು ಗುಪ್ತವಾಗಿ ರಾಜವರ್ಮನಿಗೆ ಕಳುಹಿಸಿಕೊಡುವೆನೆಂದೂ ಯೋಗೀಶ್ವರನು ಹೇಳುತ್ತಿದ್ದನು. ಯೋಗೀ

ಶ್ವರನ ಆ ವಚನದಲ್ಲಿ ವಿಶ್ವಾಸವಿಟ್ಟು ಪ್ರತಾಪರುದ್ರನು ಸ್ವಲ್ಪ ಧೈರ್ಯದಿಂದ ಇದ್ದನು. ಆದರಮೇಲೆ ಸ್ವಂತ ಮಗಳೇ ರಾಜವರ್ಮನನ್ನು ಕಣ್ಣಾರೆಕಂಡು ಮನಸಾ ಪ್ರೇಮಿಸಿರುವುದನ್ನು ತಿಳಿದು ಅವನ ಧೈರ್ಯವು ಇನ್ನಷ್ಟು ಬಲವಾಯಿತು. ಯೋಗೀಶ್ವರನು ಹಿಂದೆ ಹೇಳುತ್ತಲೇ ಇದ್ದ, ಭವಿಷ್ಯದ್ವಾಕ್ಯದಂತೆಯೇ, ಈಗ ಪ್ರಸಂಗವು ಸಂಘಟಿತವಾದುದರಿಂದ, ಯೋಗೀಶ್ವರನಮೇಲೆ ವಿಶ್ವಾಸವು ಇನ್ನಷ್ಟು ಬೆಳೆಯಿತು. ಪಾಪ! ಮುಳುಗಿಹೋಗುತ್ತಿರುವವನಿಗೆ ಕೈಗೆ ಸಿಕ್ಕಿದ ಹುಲ್ಲುಕಡ್ಡಿಯೇ ಹೇಗೆ ಆಧಾರವೃಕ್ಷದಷ್ಟು ಮಹತ್ವಾಗಿ ಕಾಣುವುದೋ, ಹಾಗೆ ಪ್ರತಾಪರುದ್ರನಿಗೆ ಈಗ ಯೋಗೀಶ್ವರನ ಮಾತೊಂದೇ ಆಧಾರಸ್ವರೂಪವಾಗಿದೆ. ಯೋಗೀಶ್ವರನ ಮಾತಿನಂತೆ ನಡೆಯುವುದೇ ಅವನ ಕರ್ತವ್ಯವಾಗಿದೆ. ಕೃಷ್ಣದೇವರಾಯನನ್ನು ತಡೆಯಲು ಸೇನೆಯನ್ನು ಕಳುಹಿಸಿ ಕಳುಹಿಸಿ, ಎಲ್ಲಾ ಕೃಷ್ಣಾರ್ಪಣಮಾಡಿಬಿಟ್ಟುದರಿಂದ ಈಗ ಅವನಲ್ಲಿರುವುದು ಬರಿಯ ಐದುಸಾವಿರ ಮೂಲಬಲ ಮಾತ್ರ. ಅತ್ತ ಕೃಷ್ಣದೇವರಾಯನ ಬಳಿಯಲ್ಲಾದರೋ ಇಪ್ಪತ್ತುಸಾವಿರ ಯೋಧರಿದ್ದಾರೆ. ಇಂತಹ ಸ್ಥಿತಿಯಲ್ಲಿ, ಪ್ರತಾಪರುದ್ರನು ಉಳಿಯುವುದೆಂದರೇನು? ಆದರೂ ಅವನು ತನ್ನ ಹಟವನ್ನು ಮಾತ್ರ ಬಿಡುವವನಾಗಿದ್ದಿಲ್ಲ. ರಾಯನ ಸೇನಾಜಲಧಿಯಲ್ಲಿ ತಾನು ಮುಳುಗಿಹೋದರೂ ಸರಿ. ಅವನ ಅಭಿಪ್ರಾಯಕ್ಕೆ ಮಾತ್ರ ಒಳಗಾಗಲಾರನೆಂದೇ ಮನಸ್ಸು ಗಟ್ಟಿಮಾಡಿಕೊಂಡಿದ್ದನು. ಯೋಗೀಂದ್ರನ ವಚನದಿಂದಂತೂ ಅವನ ಹಟವು ಇನ್ನಷ್ಟು ಗಟ್ಟಿಯಾಯಿತು. ಒಣಗಿಹೋದ ಆಶಾತರು ಮತ್ತೆ ಚಿಗುರಲಾರಂಭಿಸಿತು. ಹೀಗಿರುವಾಗ ಕೃಷ್ಣದೇವರಾಯನ ಕಡೆಯಿಂದ ಕಟ್ಟಕಡೆಯ ರಾಯಭಾರಿಯೊಬ್ಬನು ಪ್ರತಾಪರುದ್ರನ ಬಳಿಗೆ ಬಂದು, "ತಿರುಮಲಾದೇವಿಯನ್ನು ರಾಯನಿಗೊಪ್ಪಿಸುವಿರೋ ಅಥವಾ ಯುದ್ಧಮುಖವಾಗಿಯೇ ನಾವು ಕಾರ್ಯಸಾಧನೆಮಾಡಿಕೊಳ್ಳಬೇಕೋ?" ಎಂದು ರಾಯನ ಸಂದೇಶವನ್ನು ನಿವೇದಿಸಿದನು.

ಮಹಾಭಿಮಾನಿಯಾದ ಪ್ರತಾಪರುದ್ರನು, ಮೊದಲಿನಂತೆಯೇ, 'ನಿಮ್ಮಿಷ್ಟಬಂದಂತೆ ಮುಂದುವರಿಸಬಹುದು' ಎಂದು ಉತ್ತರವನ್ನಿತ್ತು, ರಾಯಭಾರಿಯನ್ನು ಕಳುಹಿಸಿಕೊಟ್ಟನು. ಐದಾರುದಿನಗಳಲ್ಲಿ ನಡೆದ ಪ್ರಸಂಗವು ಇಷ್ಟೇ ಸರಿ.

## ೪೨
## "ಎಲಾ! ಅವಳೆ!"

ಘೋಷಾ ಹೆಂಗುಸಿನಂತೆ ಮುಸುಗುಹಾಕಿಕೊಂಡಿದ್ದ ಹೆಂಗುಸೊಬ್ಬಳು ಎಲ್ಲಿಂದಲೋ ಕಳಿಂಗರಾಜ ಮಂದಿರದ ಪ್ರಥಮದ್ವಾರದಲ್ಲಿ ಬಂದು ನಿಂತು, ದ್ವಾರರಕ್ಷಕರನ್ನು ಕುರಿತು "ಅಣ್ಣಾ! ಒಳಗೆ ಹೋಗಬಹುದೇ?" ಎಂದು ಪ್ರಶ್ನಿಸಿದಳು. ದ್ವಾರರಕ್ಷಕರಲ್ಲೊಬ್ಬನು, ದರ್ಪಯುಕ್ತಸ್ವರದಿಂದ, "ಯಾರು ನೀನು? ಎಲ್ಲಿಗೆ ಹೋಗುತ್ತೀ?" ಎಂದು ಪ್ರಶ್ನಿಸಿದನು.

"ರಾಜಪುತ್ರಿಯನ್ನು ಅಗತ್ಯವಾಗಿ ಕಾಣಬೇಕು."

"ಏಕೆ?"

"ಒಂದು ಮುಖ್ಯವಾದ ರಾಜಕಾರ್ಯವಿದೆ."

"ನಿನ್ನ ಅವಸರವನ್ನು ನೋಡಿದರೆ, ನಿನಗೆ ಈಗಲೇ ರಾಜಪುತ್ರಿಯ ದರ್ಶನವಾಗಬೇಕೆಂದಿರುವ ಹಾಗೆ ಕಾಣುತ್ತದಲ್ಲ?"

"ಹೌದು"

"ಆದರೆ, ನಿನಗೆ ಈಗಲೇ ರಾಜಪುತ್ರಿಯ ದರ್ಶನವಾಗಲಾರದು."

"ಅದೇಕೆ?"

"ಈಗ ಅವಳು ಯೋಗೀಶ್ವರರ ಸನ್ನಿಧಾನಕ್ಕೆ ಹೊರಡುವ ಸಮಯ! ಒಂದುವೇಳೆ ಹೊರಟಿದ್ದರೂ ಇರಬಹುದು."

ಯೋಗೀಶ್ವರನ ಮಹಿಮೆಯನ್ನು ಆ ಹೆಂಗುಸೂ ಕೇಳಿದ್ದಳು. ಅವಳಿಗೂ ಯೋಗೀಶ್ವರನ ದರ್ಶನಮಾಡಿ, ಆಶೀರ್ವಾದವನ್ನು ಪಡೆಯಬೇಕೆಂಬ ಅಭಿಲಾಷೆ ಹುಟ್ಟಿತ್ತು. ಆದರೆ, ಕಾರ್ಯಾತುರವು ಅವಳನ್ನು ಮೊದಲು ರಾಜಕುಮಾರಿಯ ಕಡೆಗೆ ಎಳೆದುದರಿಂದ, 'ಯೋಗೀಶ್ವರನ ದರ್ಶನಕ್ಕೇನು, ಮುಂದೆ ಮಾಡಿದರಾಯಿತು,' ಎಂದುಕೊಂಡು, ಇಲ್ಲಿಗೆ ಬಂದಿದ್ದಳು. ಈಗ ರಾಜಕುಮಾರಿ ಅಲ್ಲಿಗೇ ಹೊರಟಿರಬಹುದೆಂದು ತಿಳಿಯುತ್ತಲೇ, ತಾನೂ ಅಲ್ಲಿಗೆ ಹೋಗುವುದು ಸರಿ ಎಂದು ಬಗೆದು, ರಕ್ಷಕಭಟನನ್ನು ಕುರಿತು, "ಹಾಗಾದರೆ, ನಾನೂ ಈಗ ಯೋಗೀಶ್ವರರ ಸನ್ನಿಧಿಗೇ ಹೋಗುತ್ತೇನೆ. ಆ ಮಹಾತ್ಮರ ಆಶ್ರಮವು ಎಲ್ಲಿದೆ?" ಎಂದು ಕೇಳಿದಳು.

ರಕ್ಷಕಭಟನು, ಸ್ವಲ್ಪ ದೂರದಲ್ಲೇ ಕಾಣುವ ಉಪವನದ ಕಡೆಗೆ ತರ್ಜನೀನಿರ್ದೇಶಗೈಯುತ್ತಾ, "ಅಗೋ! ಅಲ್ಲಿ ಕಾಣುವ ಆ ತೋಟದ ಕಡೆಗೆ ಹೋಗು. ಅಲ್ಲಿಯೇ ನಿನಗೆ ಯೋಗೀಶ್ವರರ ದರ್ಶನವಾಗುವುದು'' ಎಂದನು.

ಆ ಘೋಷಾಹೆಂಗುಸು ರಕ್ಷಕಭಟನು ತೋರಿಸಿದ ಆ ತೋಟದ ಕಡೆಗೆ ಹೋದಳು. ಅಲ್ಲಿಯ ಕಾವಲುಗಾರನೊಂದಿಗೆ ವಿಚಾರಿಸಲಾಗಿ, ರಾಜ ಕುಮಾರಿ ಇನ್ನೂ ಅಲ್ಲಿಗೆ ಬಂದಿಲ್ಲವೆಂದೂ, ಅದೇ ಬರುವ ಸಮಯವೆಂದೂ ಗೊತ್ತಾಯಿತು. ಅವಳೊಬ್ಬಳೇ ಯೋಗೀಶ್ವರನ ದರ್ಶನಕ್ಕಾಗಿ ತೋಟದೊ ಳಕ್ಕೆ ಹೋದಳು.

ಯಾರಾದರೂ ದರ್ಶನಕ್ಕೆ ಬರುವುದನ್ನು ಕೇಳಿದಾಗ, ನಮ್ಮ ಕಳ್ಳ ಯೋಗೀಶ್ವರನು ಕಣ್ಣುಮುಚ್ಚಿ ಕುಳಿತುಬಿಡುತ್ತಿದ್ದನು. ಅದರಂತೆ, ಕಣ್ಣು ಮುಚ್ಚಿ ಧ್ಯಾನಸ್ಥನಾಗಿದ್ದ ಆ ಯೋಗೀಶ್ವರನಬಳಿಗೆ ಆ ಹೆಂಗಸು ಹೋದಳು.

ಸಮೀಪದಲ್ಲಿದ್ದ ಗೌರಾಂಬೆ, "ಯಾರಮ್ಮ ನೀನು?" ಎಂದು ಕೇಳಿ ದಳು. ಹೆಂಗುಸು ಮುಖಪರದೆಯನ್ನು ಸರಿಸಿಕೊಂಡು, "ಅಮ್ಮಾ! ನಾನೊ ಬ್ಬಳು ನಿರ್ಭಾಗ್ಯ ನಾರಿ; ಯೋಗೀಶ್ವರರ ಪಾದದರ್ಶನಕ್ಕಾಗಿ ಬಂದಿದ್ದೇನೆ" ಎಂದಳು.

"ಹಾಗಾದರೆ, ನಿನ್ನ ಹೆಸರನ್ನು ಹೇಳುತ್ತಾ ಯೋಗೀಶ್ವರರಿಗೆ ವಂದಿಸು. ಕಣ್ಣುತೆರೆಯುತ್ತಾರೆ" ಎಂದು ತಿಳಿಸಿದಳು ಗೌರಾಂಬೆ.

ಆ ನಾರಿ ಯೋಗೀಶ್ವರನ ಪಾದಸೀಮೆಯನ್ನು ನೋಡುತ್ತಾ, ತನ್ನೊ ಳಗೆ, "ಈ ಮಹಾತ್ಮರು ತ್ರಿಕಾಲಜ್ಞಾನಿಗಳೆಂದು ಕೇಳಿದ್ದೇನೆ. ಆದುದರಿಂದ, ಇವರ ಮುಂದೆ ಸುಳ್ಳಾಡಬಾರದು'' ಎಂದುಕೊಂಡು, ಯೋಗೀಶ್ವರನ ಮುಂದೆ ಮೊಣಕಾಲೂರಿ, "ಯೋಗಿವರ್ಯಾ! ಮಹಾತ್ಮಾ ವೀರರುದ್ರ ಗಜ ಪತೀ ಸುತೆಯಾದ ನಿರ್ಭಾಗ್ಯ ಚಿನ್ನಾದೇವಿ ಪ್ರಣಾಮಮಾಡುತ್ತಾಳೆ!" ಎಂದು ಕುಂಬಿಟ್ಟಳು.

"ಚಿನ್ನಾದೇವಿ" ಎಂಬ ಹೆಸರನ್ನು ಕೇಳುತ್ತಲೇ, ಯೋಗೀಶ್ವರನು ಚಕಿ ತನಾಗಿ ಗಕ್ಕನೆ ಕಣ್ಣುತೆರೆದು ನೋಡಿದನು. ಅವನಿಗೆ ಅದು ಚಿರಪರಿಚಿತ

ವಾದ ಹೆಸರು. ರಾಮಕೃಷ್ಣನು ಚಿನ್ನಾದೇವಿಯನ್ನು ಬಾಲ್ಯದಿಂದಲೇ ಬಲ್ಲನು. ಚಿನ್ನಾ—ಕೃಷ್ಣದೇವರಾಯರು ಪರಸ್ಪರ ಪ್ರೇಮವಶರಾಗಿರುವುದೂ ಅದಕ್ಕೆ ತಿಮ್ಮರಸು ಆತಂಕಪಡಿಸಿದುದೂ, ಮೊದಲಾದ ಅವಳ ಹಿಂದಿನ ವೃತ್ತಾಂತವೆಲ್ಲವೂ ಅವನಿಗೆ ಚೆನ್ನಾಗಿ ಗೊತ್ತಿತ್ತು. ಆದರೆ ಇಂದು ಈಗ ಕಿವಿಗೆಬಿದ್ದ 'ಚಿನ್ನಾದೇವಿ' ಎಂಬ ಹೆಸರಿನೊಂದಿಗೆ 'ವೀರರುದ್ರ ಗಜಪತೀಸುತೆ' ಎಂಬ ನೂತನ ಪರಿಧಿಯೊಂದು ಮಿಳಿತವಾಗಿರುವುದನ್ನು ಕೇಳಿ ಅವನು ಸಂಭ್ರಾಂತನಾಗಿಹೋದನು. ತಾನು ಯೋಗೀಶ್ವರನಾಗಿದ್ದೇನೆ, ನಮಸ್ಕರಿಸಿದವರಿಗೆ ಆಶೀರ್ವಾದಮಾಡಬೇಕು, ಎಂಬ ಅರಿವೇ ಅವನ ಮನಸ್ಸಿನಿಂದ ಜಾರಿಬಿತ್ತು. ಕೆಲವು ಕ್ಷಣಗಳ ತನಕ, ಅವನ ಬಾಯಿಂದ ಯಾವ ಮಾತೂ ಹೊರಡಲಿಲ್ಲ. ಯೋಗೀಶ್ವರನ ಬಾಯಿಂದ ಸದ್ದೇ ಹೊರಡದಿರುವುದನ್ನು ನೋಡಿ, ಚಿನ್ನಾದೇವಿ ಎದ್ದು, ಕೈಜೋಡಿಸಿಕೊಂಡುನಿಂತಳು. ಯೋಗಿ 'ಚಿನ್ನಾದೇವಿ' ಎಂದು ಮೆಲ್ಲಗೆ ಉಚ್ಚರಿಸಿಕೊಳ್ಳುತ್ತಾ, ಚಿನ್ನಾದೇವಿಯ ಮುಖವನ್ನು ನೋಡಿದನು. ದೃಷ್ಟಿಯಮೇಲೆ ದೃಷ್ಟಿಯಿಟ್ಟು ನೋಡಿದನು. ''ಎಲ! ನಾಲ್ಕೈದು ವರ್ಷಗಳ ಹಿಂದೆ ಕಾಣೆಯಾಗಿಹೋದ, ಆ ಅಜ್ಞಾತ ವೃತ್ತಾಂತದ ಚಿನ್ನಾದೇವಿ ಇವಳೇ ಏನು?' ಎಂದು ತನಗೆತಾನೇ ಕೇಳಿಕೊಳ್ಳುತ್ತಾ ಅವಳನ್ನು ಆಪಾದಮಸ್ತಕವಾಗಿ ಪರೀಕ್ಷಿಸಿ, ನಿರೀಕ್ಷಿಸಿದನು. ಯೋಗಿಯು, ಆ ಬಗೆಯ ವಿಚಿತ್ರ ವಿಮರ್ಶಕದೃಷ್ಟಿಯನ್ನು ನೋಡಿ, ಚಿನ್ನಾದೇವಿ ತುಸು ಸಂಕೋಚದಿಂದ, ''ಯೋಗೀಶ್ವರರಲ್ಲವೇ? ತನ್ನ ಮುಖಲಕ್ಷಣವನ್ನು ಪರೀಕ್ಷೆಮಾಡುತ್ತಿರಬಹುದು" ಎಂದು ಮನಸ್ಸಮಾಧಾನಮಾಡಿಕೊಂಡು ಭಕ್ತಿಭಾವದಿಂದ ಶಾಂತಳಾಗಿಯೇ ಇದ್ದಳು. ರಾಮಕೃಷ್ಣಯೋಗಿ, "ತಾಯಿ! ನಿನ್ನ ವಾಮಹಸ್ತವನ್ನು ಈಕಡೆ ನೀಡು'' ಎಂದನು. ಕೂಡಲೇ ಚಿನ್ನಾದೇವಿ ತನ್ನ ವಾಮಹಸ್ತಪಲ್ಲವವನ್ನು ಯೋಗೀಶ್ವರನ ಇದಿರಿಗೆ ಚಾಚಿ ತೋರಿಸಿದಳು. ಚಕ್ರವರ್ತಿನೀ ರೇಖಾಸಂಯುಕ್ತವಾದ ಆ ಕರಪಲ್ಲವವನ್ನು ನೋಡುತ್ತಲೇ, ಯೋಗಿಯಸಂದೇಹವು ಸಂಪೂರ್ಣವಾಗಿ ನಿವೃತ್ತಿಯಾಯಿತು. ಅತ್ಯಾಶ್ಚರ್ಯದಿಂದ " ಎಲಾ! ಅವಳೇ! ಅದೇ ಚಿನ್ನಾದೇವಿ! ಅದೇ ಚಿನ್ನಾದೇವಿಯ ಹಸ್ತವಿದು " ಎಂದು ಬಾಯಿಬಿಟ್ಟು ಹೇಳಿದನು.

ಚಿನ್ನಾದೇವಿ ಸಂಭ್ರಾಂತಳಾಗಿ "ಯಾವ ಚಿನ್ನಾದೇವಿ?" ಎಂದು ಪ್ರಶ್ನಿಸಿದಳು.

"'ಅದೇ 'ತಾಯಿ'ಯ ಮಗಳು, ಚಿನ್ನಾದೇವಿ! ನೀನು 'ವೀರರುದ್ರ ಗಜಪತೀಸುತೆ' ಎಂಬುದನ್ನು ಕೇಳಿ ಬೇರೆ ಚಿನ್ನಾದೇವಿಯೋ ಎಂದು ಭಾವಿಸಿದೆ. ಅಲ್ಲಲ್ಲ ಚಕ್ರವರ್ತಿನಿಯ ಲಕ್ಷಣರೇಖೆಯುಳ್ಳ ನಿನ್ನ ಹಸ್ತವು ನನಗೆ ಚೆನ್ನಾಗಿ ಜ್ಞಾಪಕವಿದೆ. ನೀನು ಅದೇ 'ತಾಯಿ'ಯ ಮಗಳು ಚಿನ್ನಾದೇವಿ"

ಚಿನ್ನಾದೇವಿಗೂ ಯೋಗಿ ಯಾರೆಂಬುದು ತಿಳಿದುಹೋಯಿತು.

## ೪೩
## ಅದೆಂತಹ ಚಾಣಕ್ಯ ತಂತ್ರ!

ಯೋಗೀಶ್ವರನು ಯಾರೆಂದು ತಿಳಿದುಹೋದರೂ, ಅದನ್ನು ಪ್ರಕಾಶಪಡಿಸಿದರೆ, ಅವನ ಮನಸ್ಸಿಗೆ ಏನು ನೋವಾಗುವುದೋ ಎಂದು ಭಾವಿಸಿ, ಅದನ್ನು ತಿಳಿಯದವಳಂತೆಯೇ ನಟಿಸಿ, ಚಿನ್ನಾದೇವಿ ಹೇಳಿದಳು, "ಮಹಾತ್ಮಾ! ತ್ರಿಕಾಲಜ್ಞಾನಿಗಳಾದ ತಮಗೆ ನನ್ನ ವೃತ್ತಾಂತವೆಲ್ಲವೂ ತಿಳಿದುಹೋದುದರಲ್ಲಿ ಏನೂ ಆಶ್ಚರ್ಯವಿಲ್ಲ. ಮಹಾಮಹಿಮಾ! ನನ್ನ ಮನೋಬಯಕೆ ಕೈಗೂಡುವಂತೆ ಆಶೀರ್ವಾದ ಮಾಡೋಣಾಗಲಿ!'' ಎಂದು ಪುನಃ ಪ್ರಣಾಮ ಮಾಡಿದಳು.

"ಸೌಭಾಗ್ಯವತೀ ಭವ!'' ಎಂದು ಉಚ್ಚರಿಸಿ, ಯೋಗೀಶ್ವರನು, 'ಚಿನ್ನಾದೇವಿ! ನಾನೆಲ್ಲಿಯ ತ್ರಿಕಾಲಜ್ಞಾನಿ? ನಿನಗೆ ಇನ್ನೂ ನನ್ನ ಗುರುತು ಹತ್ತಲಿಲ್ಲವೇ? ನಾನು ತೆನ್ನಾಲಿ ರಾಮಕೃಷ್ಣ!'' ಎಂದನು.

ಚಿನ್ನಾದೇವಿ ಆಶ್ಚರ್ಯವನ್ನು ತೋರಿಸಿ, "ಓಹೋ! ನಮ್ಮ ಕವೀಶ್ವರನೇನು? ಪಕ್ಕಾ ಕಳ್ಳಜೋಗಿ, ಹಾಗಾದರೆ?'' ಎಂದಳು.

"ಹಾಗೆಯೇ ಸರಿ!''

"ಶತ್ರುರಾಜಧಾನಿಯೊಳಗೆ ಇದೇನು ವೇಷ? ಯಾವನಲ್ಲ ವಸ್ತುವನ್ನು ಕದಿಯಲಿಕ್ಕಿದು?"

"ಇದು ರಾವಣಾರ್ಜುನರಂತೆ ಕೇವಲ ಸ್ವಾರ್ಥಕ್ಕಾಗಿ ಕೈಕೊಂಡ ಸನ್ಯಾಸವಲ್ಲ."

"ಓಹೋ! ಪರಾರ್ಥಕ್ಕಾಗಿ, ಈ ಸ್ವಾರ್ಥತ್ಯಾಗವೋ ?"

"ಹೌದು—'ಪರೋಪಕಾರಾರ್ಥಮಿದಂ ಶರೀರಂ' ಎಂದು............"

"ಶಾಭಾಸ್ ! ಆ ಶ್ಲೋಕ ಹಾಗಿರಲಿ. ಇದು ಈಗ ಯಾರ ಹಿತಾರ್ಥ ವಾಗಿ ಎಂದು ಹೇಳಲಾಗುವುದಿಲ್ಲವೇ ?"

"ಮತ್ತಾರ ಹಿತಾರ್ಥವಾಗಿಯವ್ಮಾ–ನಮ್ಮ ರಾಜಹಿತಾರ್ಥವಲ್ಲವೆ?"

"ಅಂದರೆ, ಅದರ ವಿವರ ?"

ರಾಮಕೃಷ್ಣಯೋಗಿ ಚಿಂತೆಯಿಂದ, "ವಿ....ವ....ರ....ವೆಲ್ಲಾ ಬಿಡಿಸಿ ........ಹೇಳಿ........ಬಿಟ್ಟರೆ, ಪಾಪ! ನಿನ್ನ ಹೃದಯವು ಸವತಿ ಮತ್ಸರದಿಂದ ಉರಿದುಹೋದೀತೋ ಏನೋ ?"

"ಓಹೋ! ತಿಳಿಯಿತು! ತಿಳಿಯಿತು !! ತಿರುಮಲಾದೇವಿಗೂ, ನಮ್ಮ ರಾಯನಿಗೂ, ಮದುವೆ ಮಾಡಿಸುವ ಉಪಾಯವೇ, ಇದೆಲ್ಲಾ!"

"ಅಬ್ಬಾ! ನಿನ್ನ ಬುದ್ಧಿ, ದರ್ಭೆಯ ಮೊನೆಯೋ ಸರಿ !"

"ಅಯ್ಯೋ! ರಾಮಕೃಷ್ಣಯ್ಯ! ನಿನ್ನ ಈ ತಂತ್ರ ಸಂನ್ಯಾಸವೊಂದು ಹೊರ ತು, ಉಳಿದ ಕಥೆ ಎಲ್ಲಾ ನನಗೆ ಗೊತ್ತಿದೆ. ನನ್ನ ಹೃದಯವು ಸವತಿ ಮತ್ಸರ ದಿಂದ ಉರಿದುಹೋದೀತು ಎಂದಿರಲ್ಲವೇ? ಅದು ತಪ್ಪಾಯಿತೆಂದು ತಿಳಿಯೋ ಣಾಗಲಿ! ಅಯ್ಯಾ! ನನ್ನ ತಂಗಿಯಾದ ತಿರುಮಲಾದೇವಿ, ನಮ್ಮ ರಾಯನ ಪಾಣಿಗ್ರಹಣಮಾಡುವುದನ್ನು, ಕಣ್ಣಿಗೆ ಹಬ್ಬವಾಗುವಂತೆ ನೋಡಿ, ಸಂ ತೋಷಪಡಬೇಕೆಂಬ ಕುತೂಹಲದಿಂದಲೇ ನಾನಿಲ್ಲಿಗೆ ಬಂದಿದ್ದೇನೆ."

"ಎಲ್ಲಿಂದ ಬಂದೆ, ಚಿನ್ನಾದೇವಿ! ನೀನು ಅಂದು ಒಮ್ಮೆಗೆ ವಿದ್ಯಾನಗರ ದಲ್ಲಿ ಕಾಣೆಯಾದೆಯಲ್ಲಾ? ಎಲ್ಲಿದ್ದೆ ಇಷ್ಟುದಿನ ?"

ಚಿನ್ನಾದೇವಿ ಕುಳಿತುಕೊಂಡು, ತಾನು ತಿಮ್ಮರಸನ ತಂತ್ರದಿಂದ ಗುತ್ತೀದುರ್ಗವನ್ನು ಸೇರಿದುದು, ಸೈಯದ್ ಮರ್ಕಾರನಿಂದ ಗೋವಿಂದ ರಾಜನು ಕೊಲೆಯಾದುದು, ತಾನು ಮರ್ಕಾರನ ಕೈಗೆ ಸಿಕ್ಕಿ, ಕೃಷ್ಣದೇವ ರಾಯನಿಂದ ಬಿಡುಗಡೆಹೊಂದಿದುದು, ರಾಯನ ಇಚ್ಛೆಗೆ ವಿರುದ್ಧಳಾಗಿ,

ತಾನು ಅಡವಿಪಾಲಾಗಿ ಹೋದುದು, ಜನನೀ ಜನಕರನ್ನು ದರ್ಶನಮಾಡಿದುದು, ಮೊದಲಾದ ಸಮಾಚಾರಗಳನ್ನು ಸಂಕ್ಷೇಪವಾಗಿ ಹೇಳಿದಳು. ಹಾಗೂ ತಾಯಿತಂದೆಗಳನ್ನು ಸಮೀಪದೊಂದು ಗ್ರಾಮದಲ್ಲಿ ಸುರಕ್ಷಿತವಾಗಿರಿಸಿ, ತಾನು ತಿರುಮಲಾದೇವೀ—ಕೃಷ್ಣದೇವರಾಯರ ವಿವಾಹವೈಭವವನ್ನು ನೋಡುವ ಕುತೂಹಲದಿಂದ ಇಲ್ಲಿಗೆ ಬಂದುದಾಗಿಯೂ ಹೇಳಿದಳು.

ರಾಮಕೃಷ್ಣಯೋಗಿ, ಅದೆಲ್ಲವನ್ನೂ ಕೇಳಿ, ಚಿಂತಾವದನದಿಂದ, "ಆದರೆ ಚಿನ್ನಾದೇವಿ! ಇದು ಬಹಳ ತೊಡಕಾದ ಕಾರ್ಯವಾಗಿದೆ. ತಿರುಮಲಾದೇವಿ ನಮ್ಮ ರಾಯನನ್ನು ಒಲ್ಲೆನೆಂದು ಅಸಹ್ಯವಾಗಿ ನಿಂದಿಸುತ್ತಿರುವ ಸಂಗತಿ ನಿನಗೆ ಗೊತ್ತಿದೆಯಲ್ಲವೇ? ಅದನ್ನು ಸಹಿಸಲಾರದೆ, ನಮ್ಮ ರಾಯನು, ಅವಳನ್ನು ಹಿಡಿದುತರಿಸಿ ಒಬ್ಬ ಸಾಮಾನ್ಯನಾದವನಿಗೆ ವಿವಾಹಮಾಡಿಸಿಬಿಡುತ್ತೇನೆಂದೂ, ಇಲ್ಲದಿದ್ದರೆ ತಾನು ವಿದ್ಯಾನಗರವನ್ನೇ ಪ್ರವೇಶಿಸುವುದಿಲ್ಲವೆಂದೂ, ರಹಸ್ಯದಲ್ಲಿ ಒಂದು ಅಸಾಧ್ಯವಾದ ಪ್ರತಿಜ್ಞೆಯನ್ನು ಮಾಡಿಕೊಂಡಿದ್ದಾನೆ!"

"ಓಹೋ! ಅದಕ್ಕೆ ನೀವೆಲ್ಲರೂ ಸುಮ್ಮನಿದ್ದಿರಾ?"

"ಸುಮ್ಮನಿರುವುದೇ? ಕೇಳು. ನಾನೂ ತಿಮ್ಮರಸು ಮಂತ್ರಿವರ್ಯರೂ ಯೋಚಿಸಿ, ಹೇಗಾದರೂ ಈ ಘೋರ ಪ್ರತಿಜ್ಞೆಯನ್ನು ರಾಯನಿಂದ ಮಾಣಿಸಿಬಿಡಬೇಕೆಂದೂ, ಅದಕ್ಕಾಗಿ ರಾಯನಿಗೆ ತಿರುಮಲಾದೇವಿಯ ಪ್ರತ್ಯಕ್ಷ ದರ್ಶನಮಾಡಿಸಿ, ಅವಳ ಜಗನ್ಮೋಹನ ರೂಪಕ್ಕಾದರೂ ಅವನ ಮನಸ್ಸು ವಿಕಲವಾಗುವಂತೆ ಪ್ರಯತ್ನಿಸಿ, ಅದೂ ಸಾಧ್ಯವಾಗದೆ ಹೋದರೆ, ತಿರುಮಲಾದೇವಿಯನ್ನು ಉಪಾಯದಿಂದ ಹಿಡಿದು, ಯಾವಳಾದರೂ ಹೆಂಗುಸೊಬ್ಬಳಿಗೆ ಪುರುಷ ವೇಷವನ್ನು ಹಾಕಿಸಿ, ರಾಯನ ಪ್ರತಿಜ್ಞೆಯನ್ನೊಂದು ಬಾರಿ ಪೂರಯಿಸಿಬಿಟ್ಟು, ಪುನಃ ಅವನಿಗೇ ಅವಳನ್ನು ವಿವಾಹಮಾಡಿಸಬಹುದೆಂದೂ, ಹೀಗೆ ಎರಡು ಉಪಾಯಗಳನ್ನು ಯೋಚಿಸಿ, ಪ್ರಥಮೋಪಾಯ ಸಾಧನೆಗಾಗಿ, ನಾನು ಈ ಕಳ್ಳ ಜೋಗಿಯಾಗಿ ಇಲ್ಲಿ ನೆಲೆಸಿದ್ದೇನೆ".

"ರಾಯನಿಗೂ, ತಿರುಮಲಾದೇವಿಗೂ, ಸಂದರ್ಶನವಾಯಿತೇ?"

"ಆಯಿತು"

"ಫಲ?"

"ಅದೂ ಆಯಿತು. ನಾವು ಯೋಚಿಸಿದಂತೆಯೇ; ಒಬ್ಬರ ಮನಸ್ಸೊಬ್ಬರೊಳಗೆ ಸೇರಿಯೂ ಆಯಿತು"

"ಪಾಪ! ರಾಯನು ಕಳ್ಳ ಸೋಗಿನಿಂದಿದ್ದನೇನೋ?"

"ಹೌದು ಮತ್ತೆ! ಇಲ್ಲದೇ—ಅವನು ಕೃಷ್ಣದೇವರಾಯನೆಂದು ತಿಳಿದರೆ, ಅವಳು ಅವನನ್ನು ಕಣ್ಣೆತ್ತಿಯೂ ನೋಡುತ್ತಿದ್ದಿಲ್ಲ!"

"ಕೃಷ್ಣದೇವರಾಯನನ್ನು ಆವಳು ಹುಟ್ಟಿದಮೇಲೆ ನೋಡಿಲ್ಲವಷ್ಟೆ?"

ರಾಮಕೃಷ್ಣಯೋಗಿ ನಗುತ್ತಾ "ಹೌದು ಅದು ಹೇಗೂ ಇರಲಿ, ಅಂತೂ ಒಬ್ಬರ ರೂಪಕ್ಕೆ ಒಬ್ಬರು ಮರುಳಾಗಿಹೋದರು. ಮೋಹಕ್ಕೆ ಕಣ್ಣುಂಟೆ, ಚಿನ್ನಾದೇವಿ? ನಿನಗೆ ಗೊತ್ತಿಲ್ಲವೇ?"

"ನಿಜ ನಿಜ; ಇನ್ನೇನೂ ಹೆಚ್ಚಿನ ತಡೆಯಿಲ್ಲ ಹಾಗಾದರೆ, ಸಂಯುಕ್ತಾಪಹರಣಕ್ಕೆ ?"

ರಾಮಕೃಷ್ಣನು ಚಿಂತೆಗೊಳಗಾದನು. "ಅಯ್ಯೋ! ಅಂತಹ ಸುಸಂಧಿ ಇದ್ದರೆ ಇನ್ನೇನು ಚಿಂತೆ? ಅದೀಗ ಮಹಾ ಅಸಾಧ್ಯಕ್ಕಿದೆ?"

"ಅದೇನು ಮತ್ತೆ?"

"ರಾಯನು ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡದೆ ವಿಶ್ರಮಿಸುವುದಿಲ್ಲವೆಂದೇ ಹಠಹಿಡಿದಿದ್ದಾನೆ."

"ಅವಳ ಮೇಲೆ ಅವನ ಮನಸ್ಸು ಸಿಕ್ಕಿಬಿತ್ತು ಎಂದೆಯಲ್ಲಾ?"

"ಹೌದು ಮನಸ್ಸು ಸಿಕ್ಕಿಬಿದ್ದರೂ, ಹಠವನ್ನು ಮಾತ್ರ ಬಿಡಲಿಲ್ಲ. ಮನಸ್ಸು ಹಠದ ಅಧೀನವಲ್ಲಿದೆ"

"ಓ! ವಿಚಿತ್ರವಾಗಿದೆ. ಹಾಗಾದರೆ ಇನ್ನು ಯಾವುದಾದರೊಂದು ಹೆಣ್ಣನ್ನು ಗಂಡುಮಾಡಿ ಪ್ರತಿಜ್ಞೆಯನ್ನು ಪೂರ್ಣಗೊಳಿಸುವ ಎರಡನೆಯ ಉಪಾಯವೆಂದು ತೋರುತ್ತದೆ?"

"ಅದಕ್ಕೂ ಮಾರ್ಗವಿಲ್ಲದಂತಾಗಿದೆ. ಹಿಂದೆ ಮುದಗಲ್ ವಿಜಯಕ್ಕೆ ಸಹಾಯಮಾಡಿದ ರೂಪಸಿಂಗನೆಂಬ ಯಾವನೋ ಒಬ್ಬನಿಗೆ ತಿರುಮಲಾದೇವಿ ಯನ್ನು ಒಪ್ಪಿಸುವುದಾಗಿ ವಾಗ್ದಾನಮಾಡಿಬಿಟ್ಟನಂತೆ, ನಮ್ಮ ಮಹಾರಾಯ!"

"ಅಯ್ಯೋ! ಕೆಟ್ಟುಹೋಯಿತು ಕೆಲಸವೆಲ್ಲ, ಹಾಗಾದರೆ!"

"ಏನೋ! ಇನ್ನು ಸುಸಂದಿಗ್ಧ ಸ್ಥಿತಿಯಲ್ಲೇ ಉಂಟು; ಸುಸಂಧಿ ಬರ ಲಿಲ್ಲ. ರೂಪಸಿಂಗನು ತಿರುಮಲಾದೇವಿಯಮೇಲೆ ಮನಮುರಿಯುವಂತೆ, ಅವನಿಗೊಂದು ಪತ್ರವನ್ನು ಬರೆದು, ನಮ್ಮ ಮಂತ್ರಿಯವರು ಕಳುಹಿಸಿಕೊಟ್ಟಿ ದ್ದಾರೆ. ಅದು ಫಲಿಸುವುದೋ ಇಲ್ಲವೋ ನಿಶ್ಚಯವಿಲ್ಲ. ಅದು ಫಲಿಸಿ, ರೂಪ ಸಿಂಗನು ತಿರುಮಲಾದೇವಿಯನ್ನು ಒಲ್ಲೆನೆಂದು ಹೇಳಿದರೆ, ರಾಯನು ಪ್ರತಿಜ್ಞೆ ಯನ್ನು ಹಿಂದೆಗೆಯುವನೋ ಇಲ್ಲವೋ ಅದೂ ತಿಳಿಯದು. ರಾಯನು ಈ ರಾಜಧಾನಿಯೊಳಗೆ ನುಗ್ಗಿಯೇ ಬಿಡುತ್ತಾನೆ. ಅದಕ್ಕೆ ಏನೂ ತಡವಿಲ್ಲ. ಆದು ದರಿಂದ, ನಮ್ಮ ಎರಡನೇ ಉಪಾಯವನ್ನು ಸಮಾವೇಶಗೊಳಿಸಲು, ಆಗು ವುದೋ ಇಲ್ಲವೋ ಅದೂ ತಿಳಿಯದು. ಒಟ್ಟಾರೆ, ಚಿನ್ನಾದೇವಿ! ಈಗ ಮಹಾ ಸಂದಿಗ್ಧಸ್ಥಿತಿಯೇ ಪ್ರಾಪ್ತವಾಗಿದೆ!"

"ಸಂದಿಗ್ಧವಲ್ಲ, ರಾಮಕೃಷ್ಣಯ್ಯಾ! ನಿಶ್ಚಯವೆಂದೇ ನನಗೆ ಕಾಣು ತ್ತಿದೆ. ರೂಪಸಿಂಗನು ತಿರುಮಲಾದೇವಿಯನ್ನು ಒಲ್ಲೆನೆಂದರೂ, ರಾಯನೇ ನೋ ತನ್ನ ಪ್ರತಿಜ್ಞೆಯನ್ನು ಪೂರ್ಣಮಾಡದೆ ಎಂದೂ ಬಿಡುವುದಿಲ್ಲ. ಇದು ನಿಶ್ಚಯ! ಇದಕ್ಕೆ ಈಗ ಬೇರೊಂದು ಉಪಾಯವನ್ನೇ ಹೂಡಬೇಕು" ಎಂದು ಆಲೋಚನೆಯಲ್ಲಿ ಮುಳುಗಿದಳು.

ರಾಮಕೃಷ್ಣನು ಆತ್ಯಾಶ್ಚರ್ಯದಿಂದ ಚಿನ್ನಾದೇವಿಯ ಮುಖದಮೇಲೆ ದೃಷ್ಟಿಪ್ರಸರಣೆಮಾಡಿದನು, "ಎಂತಹ ಉಪಾಯ?"

"ರಾಮಕೃಷ್ಣಯ್ಯ! ಈ ರೂಪಸಿಂಗನಿಗೆ ತಿರುಮಲಾದೇವಿಯ ಪಾಣಿ ಗ್ರಹಣವಾಗಲೂಬೇಕು. ಆಮೇಲೆ ತಿರುಮಲಾದೇವಿ, ನಮ್ಮ ರಾಯನ ರಾಣಿ ಯಾಗಲೂಬೇಕು. ಅಲ್ಲದೆ, ರಾಮಕೃಷ್ಣಯ್ಯ! ನನ್ನ ಕಳಂಕವೆಲ್ಲವೂ ಈಗ ಕಳೆದುಹೋಗಿದೆ. ನಾನು ವೀರರುದ್ರ ಗಜಪತಿಕುಮಾರಿ ಎಂಬುದು, ಇನ್ನು ಬೇಗದಲ್ಲಿಯೇ ಜಗತ್ಪ್ರತ್ಯಕ್ಷವಾಗಿ ಬಿಡುತ್ತದೆ. ದೇವನ ಕೃಪೆಯಿಂದ ನಾನು

ರಾಯನ ಮಡದಿಯಾಗಲು ಪಾತ್ರಳಾಗಿದ್ದೇನೆ. ಇದು ಈ ಸುಸಂಧಿಯಲ್ಲೇ ನೆರವೇರಬೇಕು. ತಿರುಮಲಾದೇವಿಯ ಅಕ್ಕನಾದ ನನ್ನ ವಿವಾಹವೇ ಮೊದಲು ಮುಗಿಯಬೇಕು.''

ರಾಮಕೃಷ್ಣನು ತಲೆಯಾಡಿಸುತ್ತಾ, ''ಶಾಭಾಸ್! ಶಾಭಾಸ್! ಈ ಬೇಕುಗಳ ಸಂತೆ ಬಹಳವಾಗಿದೆ. ಎಲ್ಲಾ ಆಗಬೇಕು. ಒಂದೇಬಾರಿ. ಗಜಿ–ಬಿಜಿ.''

"ಗಜಿ – ಬಿಜಿ ಏಕೆ ರಾಮಕೃಷ್ಣಯ್ಯಾ! ತೊಂದರೆಗಳೇನೂ ಇಲ್ಲದೇ ಕಾರ್ಯವು ಒಂದರ ಮೇಲೊಂದಾಗಿ ಮುಗಿಯುವಂತೆ, ನಾನೊಂದು ತಂತ್ರ ಹೂಡುತ್ತೇನೆ—ನೋಡು!"

ರಾಮಕೃಷ್ಣಯೋಗಿ ವಿಸ್ಮಿತನಾದನು. "ನೀನು! ತಂತ್ರ........?''

"ಹೌದು, ನಾನೇ–ತಂತ್ರಹೂಡುತ್ತೇನೆ ನೋಡು! ರಾಮಕೃಷ್ಣಯ್ಯ! ನನಗೆ ಈ ಸಿಕ್ಕುಸಿಕ್ಕಾದ ಪರಿಸ್ಥಿತಿ ಎಲ್ಲವೂ ಮೊದಲೇ ಗೊತ್ತಾಗಿತ್ತು. ಅದನ್ನು ತಿಳಿದೇ, ಈ ಸಿಕ್ಕನ್ನು ಬಿಡಿಸಿಬಿಡಬೇಕೆಂದು, ನಾನು ಈ ರಾಜಧಾನಿಗೆ ಬಂದೆನೆಂದು ತಿಳಿ. ಇಲ್ಲಿ ನನಗೆ ತಿಳಿಯದೆಯೋ, ನನ್ನ ಹಿತಚಿಂತಕನಾದ ನಿನ್ನ ದರ್ಶನವಾದುದರಿಂದ, ನನಗೆ ತುಂಬಾ ಅನುಕೂಲವೇ ಆಯಿತು. ನನ್ನ ತಂತ್ರಕ್ಕೆ ಒಳ್ಳೇ ಆಧಾರವೂ ದೊರಕಿತು. ಇನ್ನು ಈ ಸಿಕ್ಕನ್ನು ಬಿಡಿಸಲಿಕ್ಕೆ ಏನೂ ಅಡ್ಡಿಯಿಲ್ಲ!''

''ನಿಜವಾಗಿಯೂ ಈ ಸಿಕ್ಕನ್ನು ಬಿಡಿಸಿ, ಕಾರ್ಯವನ್ನು ಸುಸೂತ್ರಗೊಳಿಸುವೆಯಾ? ಹಾಸ್ಯಮಾಡುವೆಯಾ?"

''ಹಾಸ್ಯವೋ ನೈಜವೋ, ನೋಡು ನನ್ನ ತಂತ್ರದ ಫಲ – ವಿಧಾನವನ್ನು!"

''ಅದೆಂತಹ ಚಾಣಕ್ಯತಂತ್ರವಮ್ಮಾ?"

''ಅದೆಲ್ಲಾ ಒಂದೇಬಾರಿಗೆ ಬಾಯಿಬಿಟ್ಟು ಹೇಳುವಂತಹುದೇ ಅಲ್ಲ.''

''ಅಬ್ಬಾ! ಅಷ್ಟು ದೊಡ್ಡ ನಿಗೂಢ ತಂತ್ರವೋ?"

"ಒಂದೊಂದಾಗಿ, ಆ ಸಮಯಕ್ಕೆ ತಾನಾಗಿಯೇ ತೆರೆಯುತ್ತಾ ಬರುವುದು. ಈ ಯೋಗೀಶ್ವರನಾಗಿದ್ದುಕೊಂಡೇ ನೀನು ನನಗೆ ಸಹಾಯವನ್ನೆಸಗುತ್ತಿರಬೇಕು. ಈಗ ತಿರುಮಲಾದೇವಿ ಇಲ್ಲಿಗೆ ಬರುವಳಲ್ಲವೇ?"

"ಬರುತ್ತಾಳೆ, ಬರುವ ಸಮಯವೇ ಇದು."

"ಸರಿ, ಈಗಲೇ ನಿನ್ನಿಂದ ಸಹಾಯವಾಗಬೇಕು. ನನ್ನ ತಂತ್ರದ ಒಂದು ತುಂಡನ್ನು ಈಗ ನಿನ್ನ ಕಿವಿಗೆ ಹಾಕುತ್ತೇನೆ ಕೇಳು."

ರಾಮಕೃಷ್ಣಯೋಗಿ ಕಿವಿಯನ್ನು ಚಿನ್ನಾದೇವಿಯ ಕಡೆಗೆ ಚಾಚಿದನು. ಇಬ್ಬರೂ ಸ್ವಲ್ಪಹೊತ್ತು ಮೆಲ್ದನಿಯಿಂದ, ರಹಸ್ಯಸಂಭಾಷಣೆಯನ್ನು ಮಾಡಿಕೊಂಡರು. ನಮಗೆ ಕೇಳಿಸಲಿಲ್ಲ!

## ೪೪
## ಆಲೋಚನೆ

ಶಯ್ಯಾಗಾರದಲ್ಲಿ ಅನೇಕ ದೀಪಗಳು ದೇದೀಪ್ಯಮಾನವಾಗಿ ಪ್ರಕಾಶಿಸುತ್ತಿದ್ದವು. ಪ್ರತಾಪರುದ್ರನು ಸೊಗಸಾದ ಶಯ್ಯಾತಲದಲ್ಲಿ ಅರ್ಧಶಾಯಿತನಾಗಿ ಮಲಗಿದ್ದನು. ತಿರುಮಲಾದೇವಿ ಪಕ್ಕದಲ್ಲೇ ಕುಳಿತುಕೊಂಡು, ತಂದೆಯೊಡನೆ ಏನೇನೋ ಪಿಸುಮಾತಾಡುತ್ತಿದ್ದಳು. ಅವಳು ಹೇಳಿದುದನ್ನು ಕೇಳಿ ಸಚಿಂತನಾಗಿದ್ದ ಪ್ರತಾಪರುದ್ರನು ಸ್ವಲ್ಪ ಉಲ್ಲಾಸಹೊಂದಿ, "ಮಗಳೇ! ಉಪಾಯವೇನೋ ಚೆನ್ನಾಗಿಯೇ ಇದೆ. ಮೋಸಗಾರನಾದ ಕೃಷ್ಣದೇವರಾಯನನ್ನು ಮೋಸದಿಂದಲೇ ಗೆಲ್ಲಬೇಕು. ಇದು ದೋಷವಲ್ಲ. ಆದರೆ ರಾಜವರ್ಮನೆಂದರೆ ಯಾರಾಗಿರಬಹುದೋ ಅವನನ್ನು ನಾನು ಒಮ್ಮೆ ಕಂಡಿದ್ದರೆ ಚೆನ್ನಾಗಿತ್ತು ಮಗೂ!" ಎಂದನು.

"ಅಪ್ಪಾ! ಈಗ ಕೆಲಸವು ಬಹಳವಾಗಿ ಅವಸರಕ್ಕೆ ಮುಟ್ಟಿರುವುದರಿಂದ ಆ ಮಹಾನುಭಾವನು ತೀವ್ರೋದ್ಯೋಗದಲ್ಲಿ ನಿರತನಾಗಿರುವ ಕಾರಣ, ನಿಮ್ಮನ್ನು ಈ ಮಧ್ಯೆ ಕಾಣಲು ಅವನಿಗೆ ಅವಕಾಶವೇ ಇಲ್ಲವೆಂದು, ಯೋಗೀಶ್ವರರು ಅಪ್ಪಣೆ ಕೊಡಿಸಿದ್ದಾರೆ. ಅಪ್ಪಾ! ಆ ವಿಷಯದಲ್ಲಿ ನಿಮಗೆ ಯಾವ ಸಂದೇಹವೂ ಬೇಡ. ನಾನು ಆತನನ್ನು ಒಂದೇಬಾರಿ ನೋಡಿರುವೆನಾದರೂ

ಅಪ್ಪಾ! ತಾಯಿಯೂ ತಂಪೆಯೂ ನೀವೆ—ನಿನ್ನೊಡನೆ ನನಗೆ ತುಂಬಾಸಲಿಗೆ ಆದುದರಿಂದ ಲಜ್ಜೆಬಿಟ್ಟು ಮಾತನಾಡುತ್ತೇನೆ—ಅಪ್ಪಾ!........"

ಪ್ರತಾಪರುದ್ರನು ಕಂಬನಿದುಂಬಿದ ಕಣ್ಣೀರಿನಿಂದ ಮಗಳ ಬೆನ್ನನ್ನು ತಡವುತ್ತಾ ಹೇಳಿದನು, "ಹೇಳು ತಾಯಿ! ಮಗೂ! ನಿನ್ನ ಹೃದಯವನ್ನು ಬಿಚ್ಚಿ ಹೇಳಮ್ಮಾ!"

ತಿರುಮಲಾದೇವಿ ತುಂಬಿದ ನಯನಬಾಷ್ಪವನ್ನು ಒರೆಸಿಕೊಂಡು, "ಹೇಳುತ್ತೇನೆ ಅಪ್ಪಾ! ಅಪ್ಪಾ! ಆತನ ಆ ಮೂರ್ತಿ—ಆ ಗಂಭೀರಮೂರ್ತಿ ನನ್ನ ಹೃತ್ಫಲಕದಲ್ಲಿ ಅಚ್ಚೊತ್ತಿ ಹೋಗಿದೆ! ಅಪ್ಪಾ! ಆ ಪುರುಷೋತ್ತಮನು ಕಾರ್ಯಸಾಧನೆಗಾಗಿ ಗುಪ್ತನಾಮಧೇಯದಿಂದ ವೇಷ ಬದಲಾಯಿಸಿಕೊಂಡಿರುವನಾದರೂ, ಅವನ ಮಹಾಪುರುಷಲಕ್ಷಣದ ದೇಹಸೌಷ್ಟವವನ್ನೂ, ರಾಜತೇಜದಿಂದ ಮಿನುಗುತ್ತಿರುವ ವದನಮಂಡಲವನ್ನೂ, ಅದರೆಡೆಯಲ್ಲಿ ಸೂಸುತ್ತಿರುವ ದಯಾರಸಭಾವವನ್ನೂ ನೋಡಿನೋಡಿದಂತೆ, ಅವನು ಉತ್ತಮ ಕ್ಷತ್ರಿಯ ವೀರಶಿರೋಮಣಿ ಎಂದೇ ನನ್ನ ಮನಸ್ಸಿಗೆ ಹೊಳೆಯುವುದಲ್ಲದೆ, ಅನ್ಯಥಾ ಬೋಧೆಯಾಗದು. ಅಪ್ಪಾ! ಹೆಚ್ಚಿಗೆ ಹೇಳಿ ಪ್ರಯೋಜನವಿಲ್ಲ. ನಮಗೀಗ ಆ ಪುರುಷೋತ್ತಮನೊಬ್ಬನೇ ಆಧಾರಸ್ತಂಭನಾಗಿದ್ದಾನೆ, ಅಪ್ಪಾ! ಕಾರ್ಯಬಾಹುಲ್ಯದಿಂದಾಗಿ, ಅವನಿಗೆ ಇಲ್ಲಿಗೆ ಬಂದು ಮುಖತಃ ಮಾತನಾಡಲು ಅವಕಾಶವಿಲ್ಲದಿರುವುದರಿಂದ, ನಮ್ಮ ತಂತ್ರದ ಕ್ರಮವೆಲ್ಲವನ್ನೂ ಪತ್ರಮೂಲಕವಾಗಿ ಅವನಿಗೆ ತಿಳುಹಿಸಬೇಕೆಂದು, ಯೋಗೀಶ್ವರರು ಅಪ್ಪಣೆ ಕೊಡಿಸಿದ್ದಾರೆ. ಪತ್ರಸಂಚಾಲನೆಯನ್ನು ಗುಪ್ತವಾಗಿ ನಡೆಸಿ, ಪ್ರತ್ಯುತ್ತರವನ್ನು ತರಿಸಿಕೊಳ್ಳುವ ಭಾರವೊಂದು ತಮ್ಮಮೇಲೆಯೇ ಇರಲೆಂದು ಯೋಗೀಶ್ವರರ ಕೃಪೆಯಾಗಿದೆ" ಎಂದಳು.

ಪ್ರತಾಪರುದ್ರನಿಗೆ ಫಕ್ಕನೆ ಅವನ ಬಲಗೈಯಾಗಿದ್ದ ರಾಮಯಾಮಾತ್ಯನ ನೆನಪಾಯಿತು, "ಮಗಳೇ! ಇಂತಹ ಸಮಯದಲ್ಲಿ ನಮ್ಮ ಸಚಿವಪ್ರವರನಾದ ರಾಮಯಾಮಾತ್ಯನಿರುತ್ತಿದ್ದರೆ ಎಷ್ಟೋ ಮೇಲಾಗಿತ್ತು..........." ಎಂದು ನುಡಿದನು.

''ಅಪ್ಪಾ! ಆ ಮಂತ್ರಿಶ್ರೇಷ್ಠನ ತೀಕ್ಷ್ಣವಾದ ಮಂತ್ರಾಲೋಚನೆ ಶಸ್ತ್ರವೊಂದಿರುತ್ತಿದ್ದರೆ, ಇಂತಹ ದಾರುಣಪ್ರಸಂಗವೇ ಒದಗುತ್ತಿದ್ದಿಲ್ಲ!''

''ನಿಜ, ನಿಜ ಮಗಳೇ!" ಎಂದು ಪ್ರತಾಪರುದ್ರನು ಮಗಳ ಮುಂಗುರಳನ್ನು ನೀವುತ್ತಾ, ''ಮಗೂ! ಈಗ ನನಗೆ ನೀನು ಒಬ್ಬಳೇ ಆಧಾರಸ್ವರೂಗಳಾಗಿರುವಿ; ಚತುರಮತಿಯಾದ ನಿನ್ನ ಪ್ರೇಮವು ಈವರೆಗೆ ಯಾವ ಪಾತ್ರದಲ್ಲಿಯೂ ಸುರಿದುದನ್ನು ಅರಿಯೆನು. ಅಂತಹ ನಿನ್ನ ನಿಶ್ಚಲವಾದ ಪವಿತ್ರವಾದ ಮನವು ಈಗಲೂ ಅಪಾತ್ರದಲ್ಲಿ ಎಂದಿಗೂ ಬಿದ್ದಿರಲಾರದೆಂದೇ ನಂಬುತ್ತೇನೆ. ಈ ನಂಬುಗೆಯಿಂದಲೂ, ಯೋಗೀಶ್ವರರ ಮೇಲಣ ವಿಶ್ವಾಸದಿಂದಲೂ, ಮಗೂ ನಿನ್ನಿಷ್ಟದಂತೆಯೇ ನಡೆಸುವೆನು; ತಿರುಮಲಾ! ವಿವಾಹವಮಾಡಿಕೊಡುತ್ತೇನೆ. ಮುಳುಗಿ ಸಾಯುವಾಗ ಮೇಲಕ್ಕೆತ್ತಿ ಕಾಪಾಡಿದ ಪುಣ್ಯಾತ್ಮನಿಗಿಂತಲೂ, ಹೆಚ್ಚಾದ ಉಪಕಾರಿ ಬೇರೊಬ್ಬನುಂಟೆ? ತಾಯೀ ನಿನ್ನ ಪ್ರೇಮವು ಸಿದ್ಧಿಯನ್ನು ಹೊಂದಲಿ'' ಎಂದು ಹೇಳಿದನು.

ತಿರುಮಲಾದೇವಿಯ ಹೃದಯವು ಆನಂದದಿಂದ ಉಬ್ಬಿತು. ''ಅಪ್ಪಾ! ಕೃಷ್ಣದೇವನು ನಾಳೆಯೇ ನದೀತರಣಮಾಡುವನೆಂದು ಸುದ್ದಿ ಬಂದಿದೆಯಲ್ಲವೇ? ನಾವು ನಾಳೆ ಮುಂಜಾನೆಯೇ ರಾಜವರ್ಮನ ಕಡೆಗೆ ಸಹಾಯಾರ್ಥಿ ಪತ್ರವನ್ನು ಕಳುಹಿಸಬೇಕು. ಅಂದರೆ ಸಂಜೆಗೇ ಪ್ರತ್ಯುತ್ತರವು ಬಂದುಬಿಡುವುದು. ಅದನ್ನು ನೋಡಿಕೊಂಡು ಕೃಷ್ಣದೇವನ ಕಡೆಗೆ ರಾಯಭಾರಿಯನ್ನು ಕಳುಹಿಸೋಣ" ಎಂದು ಪ್ರಕೃತಕಾರ್ಯವನ್ನು ಕುರಿತು ಎಚ್ಚರಿಸಿದಳು.

''ಸರಿ ಹಾಗೆಯೇ ಮಾಡೋಣ. ನಮ್ಮ ಸರ್ವನಾಶಮಾಡಿದ ಕೃಷ್ಣದೇವನು ಈ ತಂತ್ರಜಾಲದಲ್ಲಿ ನಿಶ್ಚಯವಾಗಿ ಸಿಕ್ಕಿಬೀಳುವನು.''

''ಅಪ್ಪಾ! ಸಿಕ್ಕಿಬಿದ್ದಮೇಲೆ, ಕೃಷ್ಣದೇವರಾಯನನ್ನು ಏನುಮಾಡಬೇಕೆಂದಿರುವಿರಿ?''

"ಮಾಡುವುದೇನು? – ಆ ದುಷ್ಟನನ್ನು ಕಾರಾಗೃಹಕ್ಕೆ ದೂಡುವುದಲ್ಲವೇ?"

"ಬೇಡ. ಅಪ್ಪಾ! ಹಾಗೆಮಾಡಕೂಡದು!"

''ಅದೇಕೆ ಮಗೂ?''

"ಹಾಗೆ ಮಾಡಿದರೆ—ಪಾಪಾ! ಚಿನ್ನಾದೇವಿ ಪ್ರಾಣವನ್ನೇ ಬಿಟ್ಟುಬಿಡು ವಳು. ನಮಗೆ ಮುಖ್ಯ ಸಹಕಾರಿಣಿಯಾದ ಚಿನ್ನಾದೇವಿಯನ್ನು ನಿರಂತರ ಶೋಕಸಾಗರದಲ್ಲಿ ಮುಳುಗಾಡಿಸುವುದು ನ್ಯಾಯವೇ? ಅಪ್ಪಾ? ಪಾಪ! ಬಾಲ್ಯದಿಂದಲೇ ಕೃಷ್ಣದೇವನನ್ನು ಪ್ರೇಮಿಸಿದ್ದಾಳಂತೆ. ಹೆತ್ತ ತಂದೆಯನ್ನರಿಯದವಳಾದುದರಿಂದ, ಕಳಂಕದೂಷಿತೆಯಾಗಿ, ದುಃಖಭಾಜನಳಾದಳಂತೆ. ತಿಮ್ಮರಸನು ಇವಳನ್ನು ಕೃಷ್ಣದೇವರಾಯನ ಕಣ್ಮರೆಮಾಡಿ ಬಿಟ್ಟುದರಿಂದ, ಉಪಾಯದಲ್ಲಿ ಕೃಷ್ಣದೇವನ ಪಾಣಿಗ್ರಹಣಮಾಡಲಿಕ್ಕಾಗಿ, ಈಗ ನಮ್ಮ ಮರೆಹೊಕ್ಕಿದ್ದಾಳೆ. ಇದು ನಮಗೊಂದು ದೊಡ್ಡ ಸಹಾಯವಾಯಿತು. ಅವಳಿಗೂ ಅವಳ ಪ್ರಿಯನೊಂದಿಗೆ ವಿವಾಹವಾಗುವುದು! ಪಾಪ! ಅವಳನ್ನು ನೋಡಿದರೆ, ನನಗೇನೋ ಸೋದರೀ ಭಾವನೆಯೇ ಉತ್ಪನ್ನವಾಗುತ್ತಿದೆ. ಅಲ್ಲದೆ ಪ್ರೇಮವೆಂಬುದು ಎಲ್ಲರಿಗೂ ಸಮಾನವಲ್ಲವೇ? ಅಪ್ಪಾ! ಆದುದರಿಂದ ಅವಳ ಮುಖವನ್ನು ನೋಡಿಯಾದರೂ ಆ ರಾಯನನ್ನು ಬಿಟ್ಟುಬಿಡೋಣ. ಎಲ್ಲಾದರೂ ಬದುಕಿಕೊಂಡಿರಲಿ."

ಪುತ್ರಿಯ ಸಹೃದಯತೆಗಾಗಿ, ಪ್ರತಾಪರುದ್ರನ ಹೃದಯವೂ ಕನಿಕರದಿಂದ ತುಂಬಿತು. ಅವನು ಮಗಳ ಬೆನ್ನನ್ನು ತಟ್ಟುತ್ತಾ, "ನಿನ್ನ ಮನಸ್ಸು ಬಹಳ ಕೋಮಲವಾಗಿದೆ. ಹಾಗೇ ಆಗಲಿ ತಾಯೀ! ಮೊದಲು ರಾಜವರ್ಮನಿಗೆ ಪತ್ರವನ್ನು ಬರೆದು, ಯೋಗೀಶ್ವರರ ಕಡೆಗೆ ಕಳುಹಿಸು" ಎಂದನು.

"ಇದನ್ನು ನಾನೇ ಬರೆಯಬೇಕೇನು, ಅಪ್ಪಾ? ನೀವು ಬರೆದರೆ........"

"ಬೇಡವಮ್ಮ, ನೀನೇ ಬರೆಯಬೇಕು. ಅದೇ ಚೆನ್ನಾಗಿ ಒಪ್ಪುತ್ತಿದೆ. ಕ್ಷತ್ರಿಯ ಪುರುಷನು ಹೆಂಗುಸಿನ ಮೊರೆಗೆ ಮನಮರುಗುವಷ್ಟು ತೀವ್ರವಾಗಿ, ಗಂಡಸಿನ ವಿಜ್ಞಾಪನೆಗೆ ಕರಗುವುದಿಲ್ಲ. ಆದುದರಿಂದ, ನಿನ್ನ ಮನೋವಲ್ಲಭನಿಗೆ ನೀನೇ ಪ್ರಾರ್ಥಿಸಿ ಬರೆಯಬೇಕು."

## ೪೫

# ಪ್ರಿಯನಿಗೆ ಪತ್ರ

"ಸ್ವಸ್ತಿ ಶ್ರೀಮದ್ರಾಜವರ್ಮರೆಂದು ಪರಿಚಿತರಾಗಿರುವ ನನ್ನ ಸ್ವಾಮಿಯವರ ಪಾದಾರವಿಂದಕ್ಕೆ. ವಿಪತ್ತಿನಲ್ಲಿ ಸಿಕ್ಕಿಬಿದ್ದಿರುವ ಅನಾಥ ಕನ್ಯೆಯಾದ

ತಿರುಮಲಾದೇವಿ ಮಾಡುವ ಸಾಷ್ಟಾಂಗ ನಮಸ್ಕಾರ. ಸ್ವಾಮಿಾ! ಮಹಾತ್ಮರಾದ ಯೋಗೀಶ್ವರರ ಮುಖದಿಂದ ತಮಗೆ ನಮ್ಮ ಸಂಗತಿ ಎಲ್ಲವೂ ಗೊತ್ತಾಗಿದೆಯೆಂದು ನಂಬುತ್ತೇನೆ. ಆದುದರಿಂದ ಹೆಚ್ಚಿಗೆ ಬರೆಯುವುದೇನು? ಕ್ಷತ್ರಿಯ ಕುಲಕಳಂಕನಾದ ಕೃಷ್ಣದೇವರಾಯನು ನನ್ನನ್ನು ವರಿಸುವ ದುರುದ್ದೇಶದಿಂದ ನಮ್ಮ ರಾಜ್ಯವನ್ನು ಕೊರೆಯುತ್ತಾ, ನಮ್ಮ ರಾಜಧಾನಿಯನ್ನೇ ಈಗ ಮುತ್ತಿದ್ದಾನೆ. ಕಾಲಮಹಿಮೆಯಿಂದ, ನಾವು ತೀರ ನಿರ್ಬಲರಾಗಿ ಇಳಿದಿದ್ದೇವೆ. ಅವನೊಡನೆ ಹೋರಾಡಿ ಜಯಿಸುವೆವೆಂಬ ಆಶೆ, ಇನ್ನು ನಮಗಿಲ್ಲ. ಆದರೆ ಈ ದೇಹವನ್ನು ಆ ಮಂಗಳೂರ ತೌಳವ ರಾಯನಿಗೊಪ್ಪಿಸಿ, ಈ ಉತ್ಕಲದ ಗಜಪತೀವಂಶವನ್ನು ಕೆಡಿಸಿಕೊಳ್ಳುವುದಕ್ಕಿಂತಲೂ, ರಣರಂಗದ್ವಾರ, ವೀರಸ್ವರ್ಗವನ್ನು ಸೇರಬೇಕೆಂದು ನಾನೂ ನನ್ನ ತಂದೆಯೂ ನಿಶ್ಚಯಿಸಿಕೊಂಡಿದ್ದೇವೆ. ಹೀಗೆ ನಾವು ನಿರಾಶೆಯಿಂದ ಅಂತ್ಯನಿಶ್ಚಯವನ್ನು ಮಾಡಿಕೊಂಡಿದ್ದಾಗಲೇ, ಇದೇ ಮೊನ್ನೆಮೊನ್ನೆ ಸುಮುಹೂರ್ತದಲ್ಲಿ, ಯೋಗೀಶ್ವರರ ಆಶ್ರಮದಲ್ಲಿ ತಮ್ಮ ದರ್ಶನಭಾಗ್ಯವು ನನಗೆ ದೊರೆಯಿತು. ಯೋಗೀಶ್ವರರ ಮುಖೇನ ತಮ್ಮ ವೃತ್ತಾಂತವೂ ತಿಳಿಯಿತು. ಕೃಷ್ಣದೇವನ ವಿರುದ್ಧವಾಗಿ ತಾವು ಸಿದ್ಧಮಾಡುವ ರಹಸ್ಯೋದ್ಯಮವನ್ನು ಕೇಳಿ, ತುಂಬಾ ಸಂತೋಷಗೊಂಡೆವು. ಇನ್ನು ನಮ್ಮ ವಂಶೋದ್ಧಾರವು ತಮ್ಮಿಂದಲೇ ಆಗಬೇಕಾಗಿದೆ. ತ್ರಿಕಾಲಜ್ಞಾನಿಗಳಾದ ಯೋಗೀಶ್ವರರೂ, ನಿಶ್ಚಯವಾಗಿ ನಮ್ಮನ್ನು ತಾವು ಕಾಪಾಡುವಿರೆಂದು ಭರವಸೆಕೊಟ್ಟಿದ್ದಾರೆ. ಹಾಗೂ ಅವರ ಆಜ್ಞಾಪನೆಯಂತೆ ಒಂದು ಸುತಂತ್ರವು ಹೂಡಲ್ಪಟ್ಟಿದೆ. ಏನೆಂದರೆ, ಕೃಷ್ಣದೇವನು ಈಗ ನದೀ ತರಣಮಾಡಿ, ನಮ್ಮ ರಾಜಧಾನಿಯನ್ನು ಮುತ್ತಲು ಸಿದ್ಧನಾಗಿ ಮುಂದೊತ್ತಿ ಬರುತ್ತಲೇ ಇರುವನಷ್ಟೆ? ಈ ಎಡೆಯಲ್ಲಿ ನನ್ನ ತಂದೆ ನನ್ನನ್ನು ಕೃಷ್ಣದೇವರಾಯನಿಗೆ ಒಪ್ಪಿಸಿಕೊಡುವುದಾಗಿ ಅವನಿಗೆ ಹೇಳಿಕಳುಹಿಸುತ್ತಾರೆ. ಅದು ನಿಜವೆಂದು ನಂಬಿ, ಆ ರಾಯನು ನನ್ನ ತಂದೆಯೊಂದಿಗೆ ಸ್ನೇಹಮಾಡಿಕೊಂಡು ಅರಮನೆಯೊಳಗೆ ಬರುವನು. ವಿವಾಹಕ್ಕೆ ಒಂದು ಶುಭ ಮುಹೂರ್ತವೂ ಗೊತ್ತುಮಾಡಲ್ಪಡುವುದು. ಅದೂ ರಾತ್ರಿಯಲ್ಲೇ ಇಡಲ್ಪಡುವ ಮುಹೂರ್ತ. ಆ ಮುಹೂರ್ತದಲ್ಲಿ ಇನ್ನೊಬ್ಬಳು ಕನ್ಯೆಯನ್ನು ಘೋಷಾದಿಂದ ತಂದು, ಕೃಷ್ಣದೇವನಿಗೆ ಪಾಣಿಗ್ರಹಣಮಾಡಿಸಲ್ಪಡುವುದು. ಅವನು

ಎಂದೂ ನನ್ನನ್ನು ಕಂಡವನಲ್ಲನಾದುದರಿಂದ, ಆ ಕನ್ಯೆಯ ಮುಖದರ್ಶನವಾದರೂ, ಅವನು ಗುರುತುಹಿಡಿಯಲಿಕ್ಕಿಲ್ಲ. ಒಂದುವೇಳೆ ಸಂದೇಹದಿಂದ ಗದ್ದಲಕ್ಕೆ ಹಚ್ಚಿಯಾನು. ಆಗಲೇ, ತಾವು ಸೈನ್ಯಸಮೇತ ಸನ್ನಿಹಿತರಾಗಿ, ಆ ರಾಯನನ್ನು ಸೆರೆಹಿಡಿಯಬೇಕು. ಈ ಕಾರ್ಯಕ್ಕೆ ನಮ್ಮ ಸೈನ್ಯವೂ ಸಿದ್ಧವಾಗಿದೆ. ಹೀಗೆ ರಕ್ತಪಾತವಿಲ್ಲದೇ ಸೊಕ್ಕಿದ ಮದಗಜವು ಗೂಡಿನೊಳಗೆ ಸಿಕ್ಕಿಬೀಳುವುದು. ಹೀಗಾದರೆ, ತಮ್ಮ ಪ್ರತೀಕಾರವಾಂಛೆಯೂ ತೀರುವುದು. ನಮ್ಮ ಸಂರಕ್ಷಣೆಯೂ ಆಗುವುದು. ದೇಶಕ್ಕೂ ಶಾಂತಿ! ಈ ರೀತಿ ನಮ್ಮ ಕಾರ್ಯಕ್ರಮಕ್ಕೆ ತಮ್ಮ ಸಮಯಾಸಮಯ, ಅನುಕೂಲತೆ ಪ್ರತಿಕೂಲತೆ, ಮೊದಲಾದ ಎಲ್ಲಾ ವಿವರಗಳಿಗೂ ಅಪ್ಪಣೆಕೊಡಿಸಬೇಕಾಗಿ ವಿನಯದಿಂದ ಪ್ರಾರ್ಥಿಸುವ

ಸಹಾಯ ಸಂಪ್ರಾರ್ಥಿನಿ -- ತಮ್ಮ ಚರಣ ದಾಸಿ,

ತಿರುಮಲಾದೇವಿ"

ತಿರುಮಲಾದೇವಿ ಬರೆದುಕಳುಹಿಸಿದ ಈ ಮೇಲಣ ಪತ್ರವನ್ನು ರಾಮ ಕೃಷ್ಣಯೋಗೀಶ್ವರನು ಓದಿನೋಡಿ, ನಸುನಗುತ್ತಾ ತನ್ನೊಳಗೆತಾನೇ "ಶಹ ಭಾಸ್! ಚೆನ್ನಾಗಿದೆ! ಶುಭಲಕ್ಷಣವೇನೋ ಕಾಣುವಂತಿದೆ. ಆದರೆ, ರಾಯನ ಪ್ರತಿಜ್ಞೆ ಮಾತ್ರ ಯಾವ ರೀತಿಯಲ್ಲಿ ಕೊನೆಮುಟ್ಟುವುದೊ? ಎಲ್ಲವನ್ನೂ ಸರಿಗೊಳಿಸಿಬಿಡುವೆನೆಂದು ಚಿನ್ನಾದೇವಿ ಏನೋ ಭರವಸೆಕೊಟ್ಟಿದ್ದಾಳೆ! ಅದು ಹೇಗಿರಬಹುದು? ಅದೆಂತಹ ವಿಚಿತ್ರ ತಂತ್ರವಾಗಿರಬಹುದು?........ಅಂತೂ ಚಿನ್ನಾದೇವಿ ನುಡಿದಂತೆ ನಡೆಸದೆ ಹಾಗೆಯೇ ಬಿಡಲಾರಳು. ಅವಳು ಮಹಾ ಚತುರೆ. ಹೂಂ! ನೋಡೋಣ, ಈ ಕಣ್ಣುಮುಚ್ಚಾಟವು ಹೇಗೆ ಕೊನೆಗಾಣುವುದೆಂದು? ಒಟ್ಟಾರೆ ತಿರುಮಲಾದೇವಿ ರಾಯನಸೆರೆಗೆ ಸಿಕ್ಕಿಬೀಳುವುದೇನೋ ನಿಜ. ಪ್ರತಾಪರುದ್ರನ ಗತಿ ಅಷ್ಟೇಸರಿ. ಪಾಪ! ಚಿನ್ನಾದೇವಿ ರಾಯನಕೊರಳಿಗೆ ಮಾಲೆಹಾಕುವಳು. ಪ್ರೇಮವು ಪ್ರೇಮವನ್ನು ಸೇರುವಕಾಲವು ಬಂತು. ಭಲೆ! ಇದೊಂದು ಪುಣ್ಯಕಾಲವಾದರೂ ನಡೆಯಲಿ. ನಮ್ಮ ರಾಯನಿಗೆ ಚಿನ್ನಾದೇವಿಯೆಂದರೆ ಪಂಚಪ್ರಾಣ. ಚಿನ್ನಾದೇವಿಗೂ ಹಾಗೆಯೇ! ಇಬ್ಬರೂ ಬಾಲ್ಯದಿಂದಲೇ ಒಬ್ಬರ ಹೃದಯದೊಳಗೆ ಒಬ್ಬರು ಪ್ರವೇಶಿಸಿದರು. ಆದರೆ ಚಿನ್ನಾದೇವಿಗೆ ದುಷ್ಕುಳಂಕದ ಜನ್ಮಗ್ರಹಣವೊಂದು ಸಂಭವಿಸಿದುದರಿಂದ, ನಮ್ಮ

ತಿಮ್ಮರಸು ಮಂತ್ರಿ ಅವರ ವಿವಾಹಕ್ಕೆ ಕಲ್ಲುಹಾಕಿದನು. ಈಗಲಂತೂ ಆ ಗ್ರಹಣವು ಸಂದುಹೋಯಿತು. ಇವಳೂ ತಂದೆತಾಯಿಗಳೊಂದಿಗೆ ಸುಖವಾಗಿರುವಳು. ಇವಳು ವೀರರುದ್ರ ಗಜಪತಿಯ ಮಗಳಂತೆ; ಶಹಭಾಸ್! ಇನ್ನು ಕೇಳಬೇಕೇ ಕುಲದ ಪವಿತ್ರತೆಯನ್ನು? ಸರಿ ಸರಿ, ಚಿನ್ನಾದೇವಿಯ ಸುಲಕ್ಷಣದ ವದನಕಮಲದಲ್ಲಿ ಮಿನುಗುವ ಸತ್ಕಳೆಯನ್ನು ನೋಡಿನೋಡಿ ನಾನು ಇವಳನ್ನು ಸತ್ಕುಲೀನೆಯೆಂದೇ ತಿಳಿದುಕೊಂಡಿದ್ದೆ. ಅಂತೆಯೇ ರಾಯನ ಪ್ರೇಮವು ಇವಳಮೇಲೆ ಬಿತ್ತು. ಭಲೆ! ಅವಳ ಹಸ್ತರೇಖೆಯನ್ನು ನೋಡಿ ನಾನು ಮೊದಲೇ ಬಾಯಿಬಿಟ್ಟು ಹೇಳಿದ್ದೆ, ಇವಳು ಚಕ್ರವರ್ತಿಗಾಗಿ ಕಾದಿಟ್ಟ ವಸ್ತು ಎಂದು; ಈಗಂತೂ ಎಲ್ಲಾ ಸರಿಹೋಯಿತು........ಆದರೆ ಚಿನ್ನಾದೇವಿಯ ವೃತ್ತಾಂತವನ್ನು ನಮ್ಮ ತಿಮ್ಮರಸನಿಗೆ ಈಗಲೇ ತಿಳಿಸಕೂಡದು. ವಿವಾಹಕಾಲದಲ್ಲಿ ತನ್ನಿಂದ ತಾನೇ ಕಣ್ಣಿಗೆಕಟ್ಟಬೇಕು, ಆಶ್ಚರ್ಯದನೋಟ! ಆಗ ಬೋಧೆಯಾಗುವುದು, ವಿಧಿಲಿಖಿತ ವಥುವನ್ನು ತಪ್ಪಿಸಲು ಸಾಧ್ಯವಿಲ್ಲವೆಂದು! ಈ ಪತ್ರದಲ್ಲಿ ಚಿನ್ನಾದೇವಿಯ ನಾಮ ನಿರ್ದೇಶವಿಲ್ಲದಿರುವುದೊಂದು ಒಳ್ಳೇದೇ ಆಯಿತು........" ಎಂದು ಆನಂದದಿಂದ ಯೋಚನೆಯನ್ನು ಸರಿಮಾಡಿಕೊಂಡು, ಆ ಪತ್ರವನ್ನು ಮಡಿಚಿ, ಒಂದು ಸಂಚಿಯೊಳಗಿಟ್ಟು, ಗೌರಾಂಬೆಯ ಕೈಯಲ್ಲಿಕೊಟ್ಟು "ಈ ಪತ್ರವನ್ನು ಗುಟ್ಟಿನಿಂದ ಒಯ್ದು, ಆ ಭಿಕ್ಷುಕನಿಗೆ ಕೊಟ್ಟುಬಾ, ರಹಸ್ಯ! ಎಚ್ಚರಿಕೆ!" ಎಂದು ಪತ್ರವನ್ನು ಕೊಟ್ಟುಕಳುಹಿಸಿ, ನಸ್ಯಶಾಸ್ತ್ರವನ್ನು ಪಾರಾಯಣಮಾಡಲಾರಂಭಿಸಿದನು.

## ೪೭

# ತಂತ್ರದ ಸಂಧಿ

ಅಂದು ಕೃಷ್ಣದೇವರಾಯನು ಸಸೈನ್ಯನಾಗಿ ಮಹಾನದೀ ತರಣಮಾಡಿ ಈ ಕಡೆಯಲ್ಲಿ ಬೀಡುಬಿಟ್ಟಿದ್ದನು. ಅಲ್ಲಿರುವಾಗಲೇ ಗುಪ್ತಪತ್ರ ವಾಹಕನಾದ ಭಿಕ್ಷುಕ ವೇಷಧಾರಿಯ ದ್ವಾರ ತಿರುಮಲಾದೇವಿ ರಾಜವರ್ಮನಿಗೆ ಬರೆದ ಪತ್ರವು ಕೃಷ್ಣದೇವರಾಯನ ಕೈಗೆ ಸಿಕ್ಕಿತು. ರಾಯನು ಆ ಪತ್ರವನ್ನು ನೋಡಿ, ಮುಗುಳ್ನಗೆನಗುತ್ತ ತಿಮ್ಮರಸನಮುಂದೆ ಹೀಗೆಂದನು, "ಅಪ್ಪಾಜೀ!

ಯಾವಳೋ ದಾಸಿಯನ್ನು ನನ್ನಿದಿರಿಗೆ ನಿಲ್ಲಿಸಿ, ಪಾಣಿಗ್ರಹಣಮಾಡುವ ನೆಂದೇ ಕಾಣುತ್ತದೆ. ಶಹಭಾಸ್! ಆಗಲಿ. ಪ್ರತಿಜ್ಞಾಪೂರಣಕ್ಕೆ ಒಂದು ಸುಲಭವಾದ ದಾರಿ ಸಿಕ್ಕಿತು. ಅಪ್ಪಾಜೀ, ನೀವಿಬ್ಬರೂ ಸೇರಿ ನನ್ನ ಮೇಲ್ಮೆ ಗಾಗಿ ಏನೋ ಒಂದು ಬಗೆಯಿಂದ ಯುಕ್ತಿ ಹೂಡಿದುದು ನನಗೆ ಇನ್ನೊಂದು ಬಗೆಯಿಂದ ಮಹೋಪಕಾರವಾಗಿಯೇ ಪರಿಣಮಿಸಿದುದನ್ನು ನೋಡಿ ಸಂತೋಷಪಡುತ್ತೇನೆ''.

ತಿಮ್ಮರಸನಿಗಾದರೋ ಸಂತೋಷವಿಲ್ಲ. ಯೋಚನೆ: ತಿರುಮಲಾದೇವಿ ರಾಯನಿಗೆ ರಾಣಿಯಾಗಬೇಕೆಂದು ಅವನು ಇಲ್ಲದ ಪಾಡೆಲ್ಲಾಪಟ್ಟಿದ್ದನು. ಇದರೆಡೆಯಲ್ಲಿ ಮೊನ್ನೆ ರಾಮಕೃಷ್ಣ ಯೋಗೀಶ್ವರನು, ''ಚಿಂತೆಬೇಡ, ಗುರು ವರಾ! ಎಲ್ಲವೂ ಸುಗಮವಾಗಿ ಪರಿಣಮಿಸುವ ಒಂದಾನೊಂದು ಮಹತ್ಸಾಧ ನವು ನನಗೆ ದೊರೆತಿವೆ. ತಾವೇನು ಚಿಂತೆಮಾಡಬೇಕಾಗಿಲ್ಲ'' ಎಂದು ಸಮಾ ಧಾನ ವಾಕ್ಯವನ್ನು ಬರೆದು ಕಳುಹಿಸಿದ್ದನು. ಅವನಿಗೆ ದೊರೆತ ಆ ಸಾಧ ನವು ಯಾವುದಿರಬಹುದು? ಅದನ್ನು ಅವನು ವಿವರವಾಗಿ ಒಡೆದು ವ್ಯಕ್ತ ಪಡಿಸಲಿಲ್ಲವೇಕೆ? ಆದರೆ, ರಾಮಕೃಷ್ಣನು ವ್ಯರ್ಥ ವಾಚಾಳಿಯಲ್ಲ. ಏನೋ ಒಂದು ತಂತ್ರವಿರಬಹುದು. ಫಲಿಸುವಾಗ ಹೊರಗೆಡಹಬೇಕೆಂದು ಈಗ ಗುಪ್ತವಾಗಟ್ಟುಕೊಂಡಿದ್ದಾನೆ. ಆದರೆ, ನನಗೆ ತಿಳಿಸದೆ ಮರೆಸಿಡತ ಕ್ಕಂತಹ ತಂತ್ರವೆಂತಹುದೋ?........ಎಷ್ಟು ಯೋಚಿಸಿದರೂ ಆ ತಿಮ್ಮರಸ ನಿಗೆ ಅದು ಯಾವ ತಂತ್ರವೆಂದು ತಿಳಿಯಲೇ ಇಲ್ಲ. ಹೇಗೆ ತಿಳಿದೀತು? ಎಲ್ಲವೂ ಸುಗಮವಾಗಿ ಪರಿಣಮಿಸುವುದೆಂದರೆ........ತಿರುಮಲಾದೇವಿ ರೂಪ ಸಿಂಗರ ಮದುವೆಯಿಂದ, ರಾಯನ ಪ್ರತಿಜ್ಞಾಪೂರಣವಾಗಿ, ಅದೇ ತಿರುಮ ಲಾದೇವಿ ರಾಯನಿಗೆ ರಾಣಿಯಾಗಬೇಕು. ಹೀಗಾದರೆ ಮಾತ್ರವೇ ಎಲ್ಲವೂ ಸುಗಮವಾಗಿ ಪರಿಣಮಿಸಿದಂತಾಗುವುದು. ಇದರ ಬಗೆ ಹೇಗೆ? ಒಂದ ಕ್ಕೊಂದಕ್ಕೆ ದಿವಾರಾತ್ರಿಗಿಂತಲೂ ಮಿಗಿಲಾದ ಅಂತರವಿದೆಯಲ್ಲಾ? ಪಾಪ! ಅದು ಹೇಗೆಂಬುದು, ಮುಖ್ಯವಾಗಿ ರಾಮಕೃಷ್ಣನಿಗೇ–ತಿಳಿಯದು. ಇನ್ನು ತಿಮ್ಮರಸನಿಗೆ ಹೇಗೆ ತಿಳಿಯಬೇಕು? ಅಂದರೆ ಅವನು ಹಾಗೂ ಹೀಗೂ ಯೋಚನಾಂದೋಳಿತ ಮಾನಸನಾಗಿದ್ದನು. ಅವನು ಹಾಗಿರಲಿ.

ಮುದಗಲ್ ದುರ್ಗಾಧೀಶನಾದ ರೂಪಸಿಂಗನಿಗೆ ಕೃಷ್ಣದೇವರಾಯನ ಆಗಮನಾಜ್ಞಾಪತ್ರವು ಹೋಯಿತು. ದುರ್ಗಾಧ್ಯಕ್ಷತೆಯನ್ನು ಯೋಗ್ಯಸೇನಾ ನಾಯಕನಿಗೆ ಒಪ್ಪಿಸಿಕೊಟ್ಟು, ತಿರುಮಲಾದೇವಿಯನ್ನು ವಿವಾಹಮಾಡಿಕೊಳ್ಳಲು ಕೂಡಲೇ ಹೊರಟುಬರಬೇಕೆಂಬುದೇ ಆ ಪತ್ರಾಭಿಪ್ರಾಯ.

ಇನ್ನು ತಿರುಮಲಾದೇವಿಗೆ ಒಂದು ಪ್ರತ್ಯುತ್ತರವನ್ನು ಬರೆಯಲೇಬೇಕಲ್ಲವೇ? ಹೌದು. ಅದು ಈ ರೀತಿಯಾಗಿ ಬರೆಯಲಾಯಿತು.

"ಪ್ರಿಯೆ ಕುಂಕುಮ ಸೌಭಾಗ್ಯವತೀ ತಿರುಮಲಾದೇವಿಗೆ—

ದೇವಿ! ನೀನು ಕಳುಹಿಸಿದ ಪತ್ರವು ಸಿಕ್ಕಿತು. ಸರ್ವಾಭಿಪ್ರಾಯವೂ ಗೊತ್ತಾಯಿತು. ಅದರಂತೆ ಸಂಕೇತಕಾಲಕ್ಕೆ ಸಂಸಿದ್ಧನಾಗಿ ಕಾರ್ಯಪೂರಣಮಾಡುವ ಭಾರವು ನನಗಿರಲಿ. ನೀವು ನಿರ್ಯೋಚನೆಯಿಂದ ನಿಮ್ಮ ತಂತ್ರವನ್ನು ಹೂಡಿರಿ. ಇದೇ ಬರುವ ಆಶ್ವೀಜಶುದ್ಧ ಪಂಚಮಿ ಮಧ್ಯರಾತ್ರಿಯಲ್ಲಿ ಹದಿನಾರು ಘಳಿಗೆಯ ಸುಮುಹೂರ್ತವು ಸಂಕೇತಮುಹೂರ್ತವಾಗಿರಲಿ. ಆ ಸುಮುಹೂರ್ತದಲ್ಲಿ ಕಾಲಸರ್ಪಚಿಹ್ನದ ಕೃಷ್ಣವರ್ಣದ ಕವಚವನ್ನು ಧರಿಸಿ, ಖಡ್ಗಪಾಣಿಯಾದೊಬ್ಬ ಮನುಷ್ಯನು ನಿನ್ನ ಬಳಿಗೆ ಬರುವನು. ಅವನೇ ನಾನೆಂದು ತಿಳಿದು, ಅಂದರೆ ಅಷ್ಟು ದೃಢನಂಬುಗೆಯಿಂದ ನೀನು ಅವನೊಂದಿಗೆ ಹೊರಡಬೇಕು. ಏಕೆಂದರೆ ಆ ಸಂದಿಗ್ಧಸಮಯದಲ್ಲಿ ಸ್ತ್ರೀಯಾದ ನೀನು ಅಲ್ಲಿರುವುದು ಸರಿಯಲ್ಲವಾದುದರಿಂದ, ನಿನ್ನನ್ನು ಮೊದಲು ತಪ್ಪಿಸಬೇಕಾದುದು ನನ್ನ ಕರ್ತವ್ಯವಾಗಿದೆ. ಆದುದರಿಂದ ನೀನು ಆಗಲೇ ಹೊರಟುಬರಬೇಕು. ನನ್ನ ಪರಮ ವಿಶ್ವಾಸ ಸೇವಕನಾದ ಆತನು ನಿನ್ನನ್ನೊಂದು ಸುರಕ್ಷಿತವಾದ ಸ್ಥಳಕ್ಕೆ ಕೊಂಡೊಯ್ಯುವನು. ಆಮೇಲೆ ಉಳಿದುದೆಲ್ಲಾ ನಿನ್ನ ಮನಸ್ಸಿನಂತೆಯೇ ಕೊನೆಮುಟ್ಟುವುದು, ಯೋಚಿಸಬೇಡ. ನಿನ್ನ ತಂದೆಗೆ ಈ ವಿವರವನ್ನೆಲ್ಲಾ ತಿಳಿಸು. ಇತಿ ಗುಪ್ತರಾಜ,

ರಾಜವರ್ಮ."

ಈ ಪತ್ರವು ಗುಪ್ತವಾಹಕನ ಮೂಲಕವಾಗಿ ರಾಮಕೃಷ್ಣಯೋಗಿಗೆ ತಲುಪಿಸಲ್ಪಟ್ಟಿತು. ಅಲ್ಲಿಂದ ತಿರುಮಲಾದೇವಿಗೂ ಸಿಕ್ಕಿತೆಂದು ಹೇಳುವುದೇನು?

ಮರುದಿನ ಕೃಷ್ಣದೇವರಾಯನೂ, ತಿಮ್ಮರಸನೂ ಇದಿರುನೋಡುತ್ತಿದ್ದಂತೆಯೇ ಗಜಪತಿರಾಜನು ಕಳುಹಿಸಲ್ಪಟ್ಟ ರಾಯಭಾರಿಯೊಬ್ಬನು ಸನ್ನಿಹಿತನಾಗಿ ಕ್ರಮಪ್ರಕಾರ ಮರ್ಯಾದಾಪೂರ್ವಕವಾಗಿ ಪತ್ರವೊಂದನ್ನು ರಾಯನ ಕೈಗೆ ಕೊಟ್ಟನು. ಅದರಲ್ಲಿ ಹೀಗೆ ಬರೆದಿತ್ತು—

"ಸ್ವಸ್ತಿ ಶ್ರೀಮತ್, ಕರ್ಣಾಟಕ ಸಾರ್ವಭೌಮ ಶ್ರೀಕೃಷ್ಣದೇವರಾಯ ಮಹಾರಾಜನಿಗೆ! ಉತ್ಕಲ ದೇಶಾಧೀಶ ಪ್ರತಾಪರುದ್ರ ಗಜಪತಿ ವಿಜ್ಞಾಪಿಸುವುದೇನೆಂದರೆ:—ನೀವು ಯಾವ ಉದ್ದೇಶದಿಂದ ನಮ್ಮ ದೇಶದಮೇಲೆ ದಂಡಯಾತ್ರೆ ಹೊರಡೋಣಾಯಿತೋ, ಆ ಉದ್ದೇಶವು ನೆರವೇರುವ ಕಾಲವೀಗ ಸನ್ನಿಹಿತವಾಯಿತು. ಇನ್ನು ನಿಮ್ಮೊಡನೆ ಹೋರಾಡುವುದರಿಂದ ಯಾವ ಪ್ರಯೋಜನವೂ ಕಾಣುವುದಿಲ್ಲ! ಬದಲಿಗೆ ನಮ್ಮ ಸರ್ವನಾಶವೆಂದೇ ತಿಳಿಯುತ್ತೇವೆ. ಕಾಲಮಹಿಮೆಯಿಂದ ವಿಜಯಲಕ್ಷ್ಮಿ ನಿಮ್ಮ ಕಡೆಗೆ ಒಲಿದಿರುವಳು. ನನ್ನ ಮಗಳು ನಿಮ್ಮನ್ನು ನಿಂದಿಸಿದುದಕ್ಕಾಗಿ ಪಶ್ಚಾತ್ತಾಪ ಪಡುತ್ತಾಳೆ. ಹೆಚ್ಚಿಗೆ ಹೇಳುವುದೇನು? ಇನ್ನು ಯುದ್ಧ ಸಾಕು. ನನ್ನ ಪುತ್ರೀರತ್ನವನ್ನು ವಿಜಯಧಾರಿಯಾದ ನಿಮ್ಮ ಹಸ್ತಕ್ಕೆ ಒಪ್ಪಿಸುವುದೆಂದು ನಿಶ್ಚಯಿಸಿದ್ದೇನೆ. ವಿವಾಹಬಂಧನದಿಂದ ಪರಸ್ಪರ ರಾಜಿಯಾಗಿ ಸ್ನೇಹಿತರಾಗೋಣ. ನಾನು ಮಂಗಳದ್ರವ್ಯದೊಂದಿಗೆ ನಿಮ್ಮನ್ನು ಇದಿರುಗೊಳ್ಳಲು ಕಾದುಕೊಂಡಿದ್ದೇನೆ. ಕೂಡಲೇ ದಯಮಾಡಿಸೋಣಾಗಲಿ, ಇತಿ —

ಪ್ರತಾಪರುದ್ರ ಗಜಪತಿ"

ಯುದ್ಧೋಲ್ಲಾಸದಿಂದ ಪರಿಪೂರ್ಣವಾಗಿದ್ದ ರಾಯನ ಸೇನಾಸಾಗರವು ಜಯಧ್ವನಿಯಿಂದ ಮೊರೆಮುಕ್ಕಿತು. ಪ್ರಚಂಡ ವಿಜಯಕಾರ್ಯ ನಿಸ್ವನದಿಂದ ಭೂ ನಭೋಂತರಾಳವೇ ಶಬ್ದಮಯವಾಯಿತು. ಮಧ್ಯಾಹ್ನ ಹನ್ನೆರಡು ಗಂಟೆಯ ಅಭಿಜಿನ್ಮುಹೂರ್ತದಲ್ಲಿ ಕೃಷ್ಣದೇವರಾಯನು ಕಟಕಪುರಿಯ ರಾಜದ್ವಾರವನ್ನು ಪ್ರವೇಶಿಸಿದನು. ದ್ವಾರಪ್ರದೇಶದಲ್ಲಿ, ಸರ್ವವೈಭವ ಸಮೇತನಾಗಿ ಇದಿರುನೋಡಿಕೊಂಡಿದ್ದ ಪ್ರತಾಪರುದ್ರನು ರಾಯನನ್ನು ಆಲಂಗಿಸಿ, ಹಸ್ತಲಾಘವವನ್ನಿತ್ತು, ಸಂಭ್ರಮವಾಗಿ ಪಟ್ಟಣದೊಳಗೆ ಕರೆದುಕೊಂಡುಹೋದನು. ಮೃಗರಾಜ ಗಜರಾಜಗಳೆರಡೂ ಸ್ನೇಹಿಸಿಕೊಂಡಂತಾಯಿತು. ಮೊದಲೇ ಸೌಂದರ್ಯಪುಂಜರಂಜಿತವಾಗಿದ್ದ ಕಟಕಪುರಿ ಇಂದು ತಳಿರುತೋರಣಾದ್ಯ

ಲಂಕಾರಗಳಿಂದ ಇನ್ನಷ್ಟು ಸೌಂದರ್ಯದಿಂದಲೂ, ಸೌರಭ್ಯದಿಂದಲೂ ಕ
ನಗಳಿಗೆ ಹಬ್ಬವನ್ನೇ ಸವಿಸುವಂತೆ ದೇದೀಪ್ಯಮಾನವಾಗಿತ್ತು. ಉತ್ತು
ಶೈಲಸಮಾನವಾದ ಬೇರೆಬೇರೆ ಪಟ್ಟದಾನೆಗಳ ಅಂಬಾರಿಗಳೊಳಗೆ ರಾಯ
ಗಜಪತಿಯೂ ಸಾಗುತ್ತಿರಲು, ಅಡಿಗಡಿಗೆ ಅವರಮೇಲೆ ಅರಳಮಳೆ ಸೂ
ತ್ತಿರಲು, ಜಯಧ್ವನಿ, ವಾದ್ಯನಾದ, ಭೇರೀರವ, ಮೃದಂಗನಿಸ್ವನ, ಮಂಜ
ಗೀತಾರವ ಇತ್ಯಾದಿ ಮನೋಹರಸಂಯೋಗದಿಂದ ಗಗನಮಂಡಲವು ಸಾಂ
ವಾಗಿಹೋಗುತ್ತಿರಲು, ಕೃಷ್ಣದೇವರಾಯನು ತನಗಾಗಿ ಏರ್ಪಡಿಸಿದ್ದ ನೂತ
ಶೃಂಗಾರಿತವಾದ ಭವ್ಯವಾದೊಂದು ಅರಮನೆಯೊಳಗೆ ಪ್ರವೇಶಮಾಡಿದ

## ೪೭

## "ಹಾ! ಯಾರಿವಳು"

ಈದಿನ ಆಶ್ವೀಜ ಶುದ್ಧ ಪಂಚಮಿ. ರಾತ್ರಿ ಹನ್ನೊಂದೂವರೆ ಗಂಟೆ
ವಿವಾಹ ಮುಹೂರ್ತ. ಪ್ರತಾಪರುದ್ರನ ಅರಮನೆ ಇಂದು ರಾಜಾರ್ಹವಾ
ವೈವಾಹಿಕ ಶೃಂಗಾರದಿಂದ ಶೋಭಾಯಮಾನವಾಗಿ ಬೆಳಗುತ್ತಿತ್ತು. ಆದ
ಇದನ್ನು ಬೇರೆಬೇರೆಯಾಗಿ ಬಣ್ಣಿಸಿ ಹೇಳುವಗೊಡವೆಗೆ ನಾವು ಹೋಗು
ದಿಲ್ಲ. ಏಕೆಂದರೆ ಇಂತಹ ವಿವಾಹವರ್ಣನೆಯನ್ನು ಎಷ್ಟೋ ವಿವಾಹವ
ಟಪಗಳಲ್ಲಿ ನೋಡಿ--ಕೇಳಿ ಅನುಭವಿಸಿರಬಹುದಾದ ವಾಚಕರಿಗೆ, ಇದನ್ನ
ತುಕೊಳ್ಳುವ ಸಾಮರ್ಥ್ಯವುಂಟಾಗಿರಬಹುದೆಂದು ನಮ್ಮ ನಂಬುಗೆ. ಆ
ಹವರಿಗೆ ಪುನಃ ಚರ್ವಿತಚರ್ವಣವನ್ನೇ ಸವಿಯಲೀಯುವುದು ಬೇಸರವನ್ನು
ಟುಮಾಡಬಹುದೆಂಬ ಭಯದಿಂದ ಆ ರಾಜವಿವಾಹವೈಭವದ ಮಹಾವರ್ಣ
ನೆಯನ್ನು ವಾಚಕರ ಊಹೆಯಪಾಲಿಗೇ ಬಿಟ್ಟಿದ್ದೇವೆ.

ರಾತ್ರಿಯಾಯಿತು. ಸಮಯವು ಸನ್ನಿಹಿತವಾಗುತ್ತಾ ಬಂದಿತು. ಕೃ
ದೇವರಾಯನು ವರಪುಷ್ಪಮಾಲಾ ಭೂಷಣಧಾರಿ—ಸುಂದರನಾಗಿ ಮ
ವಿಜೃಂಭಿತ ವೈಭವದಿಂದ, ದಿಬ್ಬಣ ತೆಗೆದುಕೊಂಡು ವಿವಾಹಮಂಟ
ಪ್ರವೇಶಗೈದನು. ಪುರೋಹಿತರು ವೇದಘೋಷ ಮಾಡುತ್ತಿದ್ದರು. ಅ
ದಿರು ಹೋಮಧೂಮವು ಪ್ರಜ್ವಲಿಸುತ್ತಿದ್ದಿತು. ಮಹಾಸಂತನೆಂದು ಭಾವಿ
ಲ್ಪಡುವ ನಮ್ಮ ಆ ಯೋಗೀಶ್ವರನು ಒಂದು ಭಾಗದಲ್ಲಿ ಅಚಲವಿಗ್ರಹನಾ

ಕುಳಿತಿದ್ದಾನೆ. ಪ್ರತಾಪರುದ್ರನು ಕರ್ಣಾಟಕಸಾರ್ವಭೌಮನನ್ನು ಕರೆತಂದು, ವರಪೀಠದಮೇಲೆ ಕುಳ್ಳಿರಿಸಿದನು. ಏತತ್ಪೂರ್ವದ ಯಥಾವಿಧಿಸಮಯಗಳು ಮುಗಿದಮೇಲೆ, ವಧುವಿನ ಆಗಮನದ ಸಮಯವು ಸನ್ನಿಹಿತವಾಯಿತು....

ಆಹಾ, ನಾನಾಬಣ್ಣಗಳ ಸಾವಿರಾರು ದೀಪಮಾಲೆಗಳಿಂದ, ಆ ಮಹಾ ಮಂಟಪವು ದೇದೀಪ್ಯಮಾನವಾಗಿ ಬೆಳಗಿ ತೊಳಗುತ್ತಿದೆ. ಒಂದು ಭಾಗದಲ್ಲಿ ಗಾಂಭೀರ್ಯದಿಂದ ಆಸನಾಸೀನರಾಗಿ ಒಪ್ಪುತ್ತಿದ್ದಾರೆ ರಾಯನ ಕಡೆಯ ಸರದಾರರು. ಅವರ ಹಿಂದೆ ಗುಂಪುಕೂಡಿಕೊಂಡಿತ್ತು ಮಹಾ ಸೈನ್ಯ. ಹಾಗೆಯೇ ಇನ್ನೊಂದು ಭಾಗದಲ್ಲಿ ಪ್ರತಾಪರುದ್ರನ ಕಡೆಯ ಸೈನ್ಯಸಮೇತ ರಾದ ಸರದಾರರೂ ಮಂಡಿತರಾಗಿದ್ದಾರೆ. ವಿವಾಹವೇದಿಕೆಯ ಬಳಿ ಒಂದು ಭಾಗದಲ್ಲಿ ಬಗೆಬಗೆಯ ಬಣ್ಣದ ವಿಚಿತ್ರವಾದ ಸಾಗರದಂತೆ ವಿವಿಧ ವರ್ಣದ ವಸ್ತ್ರಭೂಷಣಾಲಂಕೃತವಾಗಿ ಸ್ತ್ರೀವೃಂದವು ಶೋಭಿಸುತ್ತಿತ್ತು.

ಅಗೋ! ಆ ಸ್ತ್ರೀವೃಂದದ ಮಧ್ಯದಲ್ಲಿ ವಿವಾಹಭೂಷಣಾದ್ಯಲಂಕಾರಗ ಳಿಂದ ಶೃಂಗರಿಸಲ್ಪಟ್ಟ ವಧು ಪ್ರತ್ಯಕ್ಷಳಾಗಿದ್ದಾಳೆ. ವಧುವಿನ ಕೈಯಲ್ಲಿ ನವ ವಿಕಸಿತ ಪುಷ್ಪಮಾಲೆಯೊಂದು ಶೋಭಿಸುತ್ತಿದೆ. ಅವಳ ಮುಖಚಂದ್ರವು ನೀಲಮೇಘಾವೃತವಾದಂತೆ 'ಘೋಷಾ'ದಲ್ಲಿ ಇದೆ. ಸುತ್ತಲೂ ನಾಲ್ವರು ಸಖಿ ಯರನ್ನು ಕೂಡಿಕೊಂಡು, ಮಂದಗಮನದಿಂದ ವಿವಾಹವೇದಿಕೆಯನ್ನು ಹೊಕ್ಕಳವಳು. ಸ್ವಲ್ಪ ಹೊತ್ತಿನಲ್ಲಿಯೇ ಪ್ರತಾಪರುದ್ರನು ಅವಳನ್ನು ಎತ್ತಿ, ಕೃಷ್ಣದೇವರಾಯನ ನಟ್ಟೆದಿರಿನಲ್ಲಿ ನಿಲ್ಲಿಸಿ, "ವಧೂ ವರನ ಕೊರಳಿಗೆ ಮಾಲೆ ಯನ್ನು ಸಮರ್ಪಿಸು" ಎಂದನು. ಸ್ತ್ರೀಯರು ಮಂಗಳ ಗೀತವನ್ನು ಹಾಡು ತ್ತಿರಲು, ತಾಳಮೇಳಗಳು ಮೊಳಗುತ್ತಿರಲು,—ಹಾ! ಆ ವಧು ಕಯ್ಯನ್ನೆತ್ತಿ, ವರನ ಕೊರಳಿಗೆ ಪುಷ್ಪಮಾಲೆಯನ್ನು ಅಲಂಕರಿಸುವ ತವಕದಿಂದ ಮಾಲೆ ಯನ್ನೆತ್ತಿದಳು........ಆ!........

ಕೃಷ್ಣದೇವರಾಯನು ಸರಕ್ಕನೆ ವಧುವಿನ ಮುಖದ ಪರದೆಯನ್ನು ಕಿತ್ತೆ ಸೆದನು. ಅವನ ಮುಖದಲ್ಲಿ ಮೂಡುತ್ತಿದ್ದ ಕೋಪವು ಫಕ್ಕನೆ, ಕಣ್ಣೀ ರಾಗಿ ಇಳಿದುಹೋಯಿತು. ಭ್ರಾಂತನಾಗಿಹೋದನು. "ಹಾ! ಯಾರಿವಳು?" ಎಂಬ ಉದ್ಗಾರವು ಅವನ ಬಾಯಿಂದ ತನ್ನಂತೆ ತಾನೆ ಹೊರಟಿತು. ಮರು ಕ್ಷಣವೇ ನಿಶ್ಶಬ್ದ! ಭೂವ್ಯಾಕಾಶವೆಲ್ಲಾ ಶಬ್ದಮಯವಾಗಿದ್ದ ಆ ಸಭಾಂಗ

ಣವು ನಿಶ್ಯಬ್ದವಾಗಿಹೋಯಿತು. "ಏನಾಯಿತು? ಎಂದು ಕ್ಷಣಕ್ಕೆ ನೂರು ಬಾರಿ ಕೇಳುವುದೋ ಎಂಬಹಾಗಿತ್ತು, ಆ ನಿಶ್ಯಬ್ದದ ವಾತಾವರಣ!

ತಿರುಮಲಾದೇವಿಯ ಸ್ಥಾನದಲ್ಲಿ, ಯಾವಳೋ ದಾಸಿಯನ್ನು ನಿಲ್ಲಿಸಿ, ಉತ್ಕಲೇಶನು ತನಗೆ ಅವಮಾನಗೊಳಿಸುವನೆಂದು ಬಗೆದಿದ್ದರಾಯನಕಣ್ಣಿಗೆ ಗೋಚರಿಸಿದ ಆ ವಧುವಿನ ಮುಖವು ಯಾರದು? ಉಜ್ವಲವಾಗಿ ಪ್ರೇಮ ಸುಧಾರಸವನ್ನು ಕರೆಯುತ್ತಿರುವ ಈ ಮುಖಚಂದ್ರವು ಯಾರುದು? ಚಿನ್ನಾದೇವಿ—ಚಿನ್ನಾದೇವಿಯ ಮುಖಚಂದ್ರವಿದು! ರಾಯನ ಹೃದ್ಗತ ಪ್ರೇಮಮೂರ್ತಿಯ ವದನಾರವಿಂದ!

ಆಶ್ಚರ್ಯದಿಂದ ಆ ತಿಮ್ಮರಸು ಭ್ರಾಂತನಾಗಿ ನಿಂತಿದ್ದಾನೆ. ರಾಮ ಕೃಷ್ಣಯೋಗಿ ತನ್ನ ಕಣ್ಣನೋಟವನ್ನು ರಾಯನ ಮೇಲೆಯೂ, ತಿಮ್ಮರಸನ ಮೇಲೆಯೂ, ಪ್ರತಾಪರುದ್ರನಮೇಲೆಯೂ ಪ್ರಸರಿಸುತ್ತಾ ಮುಗುಳ್ನಗೆ ನಗು ತ್ತಿದ್ದಾನೆ. ಪಾಪ! ಪ್ರತಾಪರುದ್ರನಾದರೋ ಸಂಪೂರ್ಣದೇಹವನ್ನು ಕಣ್ಣಾ ಗಿವಿಗಳಾಗಿಮಾಡಿಕೊಂಡು ರಾಜವರ್ಮನ ಸಹಾಯವನ್ನು ಪ್ರತೀಕ್ಷಿಸುತ್ತಿ ದ್ದಾನೆ. "ಹಾ! ಬರಲಿಲ್ಲವಲ್ಲ! ರಾಜವರ್ಮ! ಬರಲಿಲ್ಲವಲ್ಲ!" ಎಂಬ ತವಕ ದಿಂದ ಅವನ ಹೃದಯವು ಕ್ಷಣೇಕ್ಷಣೇ ತವಕಿಸುತ್ತಿದೆ. ಮುಳ್ಳಿನಮೇಲೆ ನಿಂತಂತೇ ನಿಂತಿದ್ದಾನೆ. ಅವನ ಅವಸ್ಥೆಯನ್ನು ಕಂಡು ರಾಮಕೃಷ್ಣಯೋಗಿ ನಗುವುದನ್ನು ತಡೆಯಲಾರದಂತೆ ಇದ್ದಾನೆ. ಅದು ಹೊಟ್ಟೆಯೊಳಗೆ ಅಡಗಿ ರಲಾರದೆ ಮೇಲೆದ್ದು ಬಾಯಿಗೆ ಬರುತ್ತಿದೆ. ಹೊಟ್ಟೆಯೊಳಗೆ ಹಿಂದೊತ್ತಿ ಒತ್ತಿ ಅವನಿಗೆ ಸಾಕಾಗಿಹೋಯಿತು. ಕಡೆಗೆ ಗಟ್ಟಿಯಾಗಿ ಕೆಮ್ಮಿ ತಡೆಯಲಾರದ ನಗುವನ್ನು ಹೊರಕ್ಕೆ ಝಾಡಿಸಿದನು. ಆ ಕೆಮ್ಮಿನಿಂದ ನಿಶ್ಯಬ್ದತೆಗೊಂದು ಭಂಗವುಂಟಾಯಿತು.

## ೪೮

## ಇದೇನು?

"ಇದೇನು? ಇಲ್ಲಿ ಚಿನ್ನಾದೇವಿಯಮೂರ್ತಿ! ಇದು ಸ್ವಪ್ನವೋ, ದೃಷ್ಟಾಂತವೋ!" ಎಂದು ರಾಯನು ಬಾಯಿಬಿಟ್ಟು ಹೇಳುತ್ತಾ, ತನ್ನ ಕಣ್ಣು ಗಳನ್ನು ಉಜ್ಜಿಕೊಂಡನು.

ಚಿನ್ನಾದೇವಿ ತನ್ನ ಸೀರೆಯಮರೆಯಿಂದ ಸುದೀರ್ಘವಾದ ಕರವಾಲ ವೊಂದನ್ನು ಹೊರಕ್ಕೆ ತೆಗೆದು, "ಸ್ವಪ್ನವಲ್ಲ; ದೃಷ್ಟಾಂತವೇನೆಂಬೆಯಾ? ರಾಜೇಂದ್ರಾ! ನೋಡು ನೀನಿತ್ತ ಈ ಪ್ರಸಾದವನ್ನು" ಎಂದು ಆ ಕರವಾಲ ವನ್ನು ರಾಯನಮುಂದೆ ಹಿಡಿದಳು.

ರಾಯನು ನೋಡಿದನು. ಅದು ಅಂದು ಆ ಗೊಂಡಾರಣ್ಯದಲ್ಲಿ ಅವ ಳನ್ನು ಸಂಧಿಸಿದಾಗ, ಅವನು ಕೊಟ್ಟಿದ್ದ ಭುವನೇಶ್ವರೀ ಖಡ್ಗವೇ! ಚಿನ್ನಾ ದೇವಿ ಪುನಃ ಅದನ್ನು ಸೀರೆಯ ಮರೆಯಲ್ಲಿ ಮರೆಸಿಕೊಂಡಳು. ರಾಯನು ಅವಾಕ್ಕಾಗಿ ಅವಳ ಮುಖವನ್ನು ನೋಡುತ್ತಿದ್ದನು. ಆಶ್ಚರ್ಯ, ಆನಂದ, ಪೂಜ್ಯಭಾವ! ತಿಮ್ಮರಸನು ರಾಮಕೃಷ್ಣ ಯೋಗಿಯ ಮುಖವನ್ನು ನೋಡಿ ದನು. ಆ ನೋಟದಲ್ಲಿ "ಇದೇನು ಮಾಯೆ?" ಎಂಬ ಪ್ರಶ್ನೆ ತುಂಬಿ ಕೊಂಡಿತ್ತು. ಅದನ್ನರಿತು, ರಾಮಕೃಷ್ಣಯೋಗಿ ಅರೆನಗುವಿನೊಂದಿಗೆ, "ಗುರು ದೇವಾ! ತಮ್ಮ ಭ್ರಮೆ ಇನ್ನೂ ಅಳಿದಿಲ್ಲವೇ? ಈ ದೇವಿಯೇ ಚಿನ್ನಾದೇವಿ! ಸತ್ಕುಲಪ್ರಸೂತೆಯಲ್ಲವೆಂಬ ಶಂಕೆಯಿಂದ ದೇವಿಯನ್ನು ತಾವು ರಾಯನ ಕಣ್ಮರೆ ಮಾಡಿದಿರಿ. ಇವಳೀಗ ಮಾತಾಪಿತರೊಂದಿಗೆ, ನಿಷ್ಕಳಂಕಳಾಗಿ ಬೆಳಗುತ್ತಿದ್ದಾಳೆ. ರಾಯನನ್ನು ಉಪಾಯದಿಂದ ವರಿಸಬೇಕೆಂದು, ಈ ರೀತಿ ಯಾಗಿ ವರಮಾಲಿಕಾಪಾಣಿಯಾಗಿ ರಾಯನಿದಿರಿನಲ್ಲಿ ನಿಂತಿದ್ದಾಳೆ. ಇವಳೀಗ ಹಿಂದಿನ ಅಜ್ಞಾತವೃತ್ತಾಂತದ ಚಿನ್ನಾದೇವಿಯಲ್ಲ. ಉದಯಗಿರಿ ರಾಜ್ಯಾಧೀಶ ರಾಜಾ ವೀರರುದ್ರ ಗಜಪತಿಯ ಪಟ್ಟಮಹಿಷಿ ಸುಭದ್ರಾದೇವಿಯ ಪುಣ್ಯ ಪುತ್ರಿಯಾದ ಚಿನ್ನಾದೇವಿ—ದೇವಿ ಇವಳು!" ಎಂದು ಬರಬರುತ್ತಾ ಗಂಭೀರ ಕಂಠದಿಂದ ಹೇಳಿದನು.

ರಾಯನೂ, ತಿಮ್ಮರಸನೂ, ಪ್ರತಾಪರುದ್ರನೂ ಏಕಪ್ರಕಾರವಾಗಿ ಬೆಕ್ಕ ಸಬೆರಗಾಗಿ ಹೋಗಿದ್ದಾರೆ! "ವೀರರುದ್ರ ನನ್ನ ಅಣ್ಣಾ! ಎಲ್ಲಿರುವನು?" ಎಂಬ ಶಬ್ದಗಳು ಪ್ರತಾಪರುದ್ರನ ಬಾಯಿಂದ ತನ್ನಿಂದತಾನೆ ಹೊರಟುಹೋದುವು.

ಕೂಡಲೇ ಚಿನ್ನಾದೇವಿ ಪ್ರತಾಪರುದ್ರನ ಕಡೆಗೆ ಮುಖವನ್ನು ತಿರು ಗಿಸಿ, "ಇಲ್ಲಿಯೇ ಇರುವರು! ಆದರೆ ಅಪ್ಪಾ, ಚಿಕ್ಕಪ್ಪಾ, ಈಗೊಂದು ವಿಷ ಮಸಮಸ್ಯೆ ಉಂಟು. ಈ ಸಮಸ್ಯೆ ಸುಸೂತ್ರವಾಗಿ ಪರಿಣಮಿಸಿದ ಹೊರತು,

ಅವರೆಂದಿಗೂ ಪ್ರತ್ಯಕ್ಷರಾಗಲಾರರು" ಎಂದು ನುಡಿದು ಮುಖವನ್ನು ಮತ್ತೆ ಕೃಷ್ಣದೇವರಾಯನ ಮುಖದಕಡೆಗೆ ತಿರುಗಿಸಿದಳು. ಎಲ್ಲರೂ ಶಬ್ದಶೂನ್ಯರಾಗಿದ್ದರು. ಮಹಾಸಭೆಯೇ ನೀರವವಾಗಿ ಏಕದೃಷ್ಟಿಯಿಂದ ಆ ವಧೂವರರನ್ನೇ ದಿಟ್ಟಿಸುತ್ತಿತ್ತು. ರಾಮಕೃಷ್ಣ ತಿಮ್ಮರಸರೂ ಅರ್ಥಗರ್ಭಿತನೇತ್ರದಿಂದ ಪರಸ್ಪರವಾಗಿ ನೋಡಿಕೊಂಡು ಬಳಿಕ ತಮ್ಮ ದೃಷ್ಟಿಗಳನ್ನು ಕೃಷ್ಣದೇವರಾಯನ ಮುಖದಮೇಲಿಯೇ ನೆಟ್ಟರು.

ಆಗ ಚಿನ್ನಾದೇವಿ, ರಾಯನನ್ನು ಕುರಿತು ಎಂದಳು., "ರಾಜೇಂದ್ರ ಚೂಡಾಮಣಿ! ಮನ್ನಿಸು, ನಿನ್ನ ಕೆಟ್ಟ ಪ್ರತಿಜ್ಞೆಯನ್ನು ಮನ್ನಿಸು. ನನ್ನ ತಂಗಿಯಾದ ತಿರುಮಲಾದೇವಿಯ ಮರ್ಯಾದೆಯನ್ನು ಕೆಡಿಸಬೇಡ. ರಾಜೇಂದ್ರಾ! ಈಗಲಾದರೂ ನಿನ್ನ ಮನಸ್ಸು ಕರಗಲಿ. ಅವಳನ್ನು ರೂಪಸಿಂಗನಿಗೆ ಮದುವೆಮಾಡಿಸಿ, ಪವಿತ್ರವಾದ ಗಜಪತಿ ವಂಶವನ್ನು ಕಳಂಕಗೊಳಿಸುವುದು ಸುಚರಿತ್ರನಾದ ನಿನಗೆ ಸರಿಯೇ?"

ರಾಯನು ಗಾಂಭೀರ್ಯದಿಂದ, "ಹಾಗಾದರೆ, ಅವಳನ್ನು ಏನು ಮಾಡಬೇಕೆನ್ನುವೆ?" ಎಂದು ನುಡಿದನು.

ಚಿನ್ನಾ, "ವಿವಾಹ!"

ರಾಯ, "ವಿವಾಹವೇ, ಚಿನ್ನಾ........ನನ್ನನ್ನು ತುಚ್ಛೀಕಾರವಾಗಿ ನಿಂದಿಸುತ್ತಿರುವ ಅವಳು ನನ್ನನ್ನೇ ವಿವಾಹಮಾಡಿಕೊಳ್ಳಲು ಒಪ್ಪುವಳೇ? ಚಿನ್ನಾ! ಅವಳ ಪ್ರೇಮಪಾತ್ರನು ರಾಜವರ್ಮ. ಅವಳೀಗ ರಾಜವರ್ಮನ ಪ್ರೇಮಜಾಲದ ಮಧ್ಯದಲ್ಲಿ ಸಿಕ್ಕಿಬಿದ್ದಿದ್ದಾಳೆ. ಅಲ್ಲಿಂದ ಅವಳನ್ನು ಸೆಳೆದು ಪ್ರತಿಜ್ಞಾಪಾಲನೆಮಾಡಿಬಿಡುವುದು ನನ್ನ ಕರ್ತವ್ಯ. ಕ್ಷತ್ರಿಯನಿಗೆ ಪ್ರತಿಜ್ಞಾಪಾಲನೆಯೇ ಮುಖ್ಯ ಕರ್ತವ್ಯ.

ಪ್ರತಾಪರುದ್ರನಿಗೆ ದಿಕ್ಕೇ ತೋಚದಂತಾಯಿತು. ಮುಗ್ಧನಾಗಿ ನಿಂತಿದ್ದಾನೆ.

ಚಿನ್ನಾ, ರಾಜೇಂದ್ರಾ! ಹಿಂದುಮುಂದು ನೋಡದೆ ಕ್ಷಣಿಕವಾದ ಕ್ರೋಧವಶದಿಂದಮಾಡಿದ ಅಂಥಾ ಪ್ರತಿಜ್ಞೆಯನ್ನು ಪಾಲಿಸತಕ್ಕುದಿಲ್ಲದೆಂದು ಬಲ್ಲವರು ಹೇಳದೇಹೋಗರು. ಅಲ್ಪಳಾದ ನಾನು ಆ ವಿಷಯವಾಗಿ ನಿನಗೇನು ಹೇಳಹೋಗುವುದಿಲ್ಲ. ಆದರೆ, ರಾಜೇಂದ್ರಾ ಪರಿಹಾಸವೇಕೆ? ತಿರು

ಮಲಾದೇವಿ ರಾಜವರ್ಮನನ್ನು ಪ್ರೇಮಿಸಿದಂತೆಯೇ ರಾಜವರ್ಮನು ತಿರುಮಲಾದೇವಿಯನ್ನು ಪ್ರೇಮಿಸಿರುವನಲ್ಲವೇ? ಆ ರಾಜವರ್ಮನು ನೀನಲ್ಲವೆಂಬುದನ್ನು ನನಗೆ ಸ್ವಲ್ಪಬಿಡಿಸಿ ಹೇಳುವೆಯಾ?''

ಪ್ರತಾಪರುದ್ರನು ಬೆಚ್ಚಿಬಿದ್ದು ಕಣ್ಣರಳಿಸಿ, ''ಹಾ! ಇವನೇ ರಾಜವರ್ಮನೋ! ಹಾ! ಮಗಳೆ! ಸರ್ವನಾಶ!" ಎಂದು ಕೂಗುತ್ತಾ ಧೊಪ್ಪನೆ ಕುಳಿತು, ತಲೆಯಮೇಲೆ ಕೈ ಇಟ್ಟುಕೊಂಡನು. ಹಿಮ್ಮಾಲಿ ಬೀಳದಂತೆ ತಿಮ್ಮರಸನು ಅವನನ್ನು ಹಿಡಿದುಕೊಂಡನು.

ಕೃಷ್ಣದೇವರಾಯನು, ಪ್ರತಾಪರುದ್ರನನ್ನು ಕುರಿತು, ಗಂಭೀರಭಾವದಿಂದ, "ಗಜಪತಿರಾಜೇಂದ್ರಾ! ನಿಮ್ಮ ಮಗಳು ನನ್ನ ಬಳಿಯಲ್ಲಿ ಸುರಕ್ಷಿತಳಾಗಿಯೇ ಇದ್ದಾಳೆ. ಅವಳಿಗಾಗಿ ತಾವು ಇಷ್ಟು ಪ್ರಲಾಪಿಸುವ ಕಾರಣವಿಲ್ಲ. ಅವಳನ್ನು ಯೋಗ್ಯವರನಿಗೆ ಕೊಟ್ಟು ನಾನೇ ವಿವಾಹಮಾಡಿಸುತ್ತೇನೆ. ತಾವು ನಿಶ್ಚಿಂತರಾಗಿ ಇರೋಣಾಗಲಿ. ಹೇಗೋ ತಾವು ನನಗೆ ಚಿನ್ನಾದೇವಿಯನ್ನು ವಧುವನ್ನಾಗಿಸಿದಿರಿ. ಹಾಗೆಯೇ ತಮ್ಮ ಕುಮಾರಿಗೆ ನಾನು ಬೇರೆ ವರನನ್ನು ನಿಶ್ಚಯಿಸುವುದು ತಪ್ಪಾಗಲಾರದು." ಎಂದನು.

ಪ್ರತಾಪರುದ್ರನು ಗಜದಿಂದ ಧೊಪ್ಪನೆ ಕೆಳಕ್ಕೆ ಬಿದ್ದವನಂತೆ ಇದ್ದನು. ರಾಯನ ಅದೊಂದೊಂದು ವಾಕ್ಯವೂ ಅವನ ಮಿದುಳಿನ ಮೇಲೆ ಒಂದೊಂದು ಪ್ರಬಲವಾದ ಏಟಿನಂತೆ ಬಿದ್ದಿತು. ಬಾಯಿಯಿಂದ ಏನೂ ಹೇಳಲಿಲ್ಲ. ಅವನಿಗೀಗ ದಶದಿಕ್ಕುಗಳೂ ಗಾಢಾಂಧಕಾರ!

ಆದರೆ ಚಿನ್ನಾದೇವಿ ಸುಮ್ಮನಿರಲಿಲ್ಲ. ಅದೀಗ ಅವಳ ಸರದಿ. ಅವಳು ರಾಯನನ್ನು ತೀಕ್ಷ್ಣದೃಷ್ಟಿಯಿಂದ ನೋಡುತ್ತಾ, "ಏನೆನ್ನುವೇ, ರಾಜೇಂದ್ರಾ! ಪ್ರತಿಜ್ಞಾಪಾಲನೆಯನ್ನು ತೊರೆಯಲಾರೆಯಾ?'' ಎಂದು ಕೇಳಿದಳು.

ರಾಯ, ''ಇಲ್ಲ, ಬಿಡಲಾರೆ........''

ಚಿನ್ನಾ, ''ಎಂದಿಗೂ........?"

ರಾಯ, ''ಎಂದಿಗೂ ಬಿಡಲಾರೆ........"

ಚಿನ್ನಾ, ''ಮೂರು ಮೂರು ಮಾತಿಗೂ........"

ರಾಯ, ''ಎಂದೆಂದಿಗೂ........"

ಚಿನ್ನಾ, "ಹಾಗಾದರೆ.......ರಾಜೇಂದ್ರಾ! ನನ್ನನ್ನ.......?

ರಾಯನು ಕೈಯಲ್ಲಿರುವ ಕುಸುಮಮಾಲಿಕೆಯನ್ನು ಎತ್ತಿ, "ನಿನ್ನನ್ನು ವರಿಸದೆಬಿಡುವನೇ, ಚಿನ್ನಾ?" ಎಂದು ತಿಮ್ಮರಸನ ಮುಖವನ್ನು ನೋಡಿದನು.

ಕೂಡಲೇ ಚಿನ್ನಾದೇವಿ ದೃಢಸ್ವರದಿಂದ, "ಹಾಗಾದರೆ, ನನ್ನನ್ನೂ ನೀನು ವರಿಸಲಾರೆ!" ಎಂದು ನುಡಿದು ಕೈಯಲ್ಲಿರುವ ಪುಷ್ಪಮಾಲಿಕೆಯನ್ನು ರಾಯನ ಪಾದದಮೇಲೆ ಸಮರ್ಪಿಸಿಬಿಟ್ಟು, ಸರಸರನೆ ಕೆಳಕ್ಕಿಳಿದು, ಆ ಮಹಾಸಭೆಯ ಮಧ್ಯದಲ್ಲಿ ಶರವೇಗದಿಂದ ಹೊರಟುಬಿಟ್ಟಳು. ಅವಳು ಹೊರಟುಹೋದ ವೇಗಕ್ಕೆ ತಟಿತ್ತಾಡಿತವಾದಂತೆ ಆ ಮಹಾ ಸಭಾಸಾಗರವೇ ಸ್ತಬ್ಧವಾಗಿ ಪಿಳಪಿಳನೆ ನೋಡುತ್ತಿತ್ತೇ ಹೊರತು ಚಲಿಸಲೇ ಇಲ್ಲ!

## ೪೯
## ಗಜಪತಿ ಭಂಗ

ಒಂದು ನಿಮಿಷದಮೇಲೆ ಹೃದಯದೊಳಗಿನಿಂದ ಎದ್ದು ಗಂಟಲಿಗೆ ಬಂದ ಯಾವುದೋ ನುಂಗಲಾರದ ಕಷ್ಟವಸ್ತುವೊಂದನ್ನು ಬಹು ಸಂಕಟದಿಂದ ನುಂಗಿಕೊಂಡು, ಕೃಷ್ಣದೇವರಾಯನು ಒಂದು ದೀರ್ಘನಿಶ್ವಾಸವನ್ನು ಬಿಟ್ಟನು. ಅವನ ಕೈಯಲ್ಲಿದ್ದ ಕುಸುಮಮಾಲಿಕೆ ಜಾರಿ ಕೆಳಗೆಬಿದ್ದು ಪಾದದ ಕುಸುಮದೊಡನೆ ಸೇರಿತು. ಹೋದಗಾಂಭೀರ್ಯವು ಮುಖಮಂಡಲದಲ್ಲಿ ಮತ್ತೆ ಮನೆಮಾಡಿಕೊಂಡಿತು. ಆಗ ಅವನು ಇನ್ನೂ ಕುಳಿತುಕೊಂಡು ಬ್ರಹ್ಮಾಂಡವನ್ನೇ ಯೋಚಿಸುತಿದ್ದ ಪ್ರತಾಪರುದ್ರನನ್ನು ಕುರಿತು, "ಅಯ್ಯಾ ಗಜಪತಿರಾಜೇಂದ್ರಾ! ಈಗ ತಮಗೆ ನನ್ನ ಪ್ರತಿಜ್ಞೆಯ ವೃತ್ತಾಂತವು ಬೆಳಗಿರಬಹುದು. ಆದುದರಿಂದ ಹೆಚ್ಚಿಗೆ ಹೇಳಬೇಕಾಗಿಲ್ಲ. ಈಗ ನಿಮ್ಮ ಕುಮಾರಿ ನಮ್ಮ ಕೈವಶಳಾಗಿದ್ದಾಳೆ. ಅವಳು ಗರ್ವಾತಿರೇಕದಿಂದ ನನ್ನನ್ನು ಹೀನನೆಂಬಂತೆ ನಿಂದಿಸಿದುದರ ಫಲವನ್ನು ಇನ್ನು ಬೇಗನೇ ಅನುಭವಿಸುವಳು. ತಮ್ಮ ಮನವು ಈಗ ಸ್ವಸ್ಥವಾಗಿಲ್ಲದಕಾರಣ ತಾವೀಗ ನಮ್ಮ ಆರೈಕೆಯೊಳಗಿರಬೇಕಾಗಿದೆ" ಎಂದು ನುಡಿದು ಕಣ್ಣುಸನ್ನೆಮಾಡಿದನು.

ಕೂಡಲೇ ಏಳೆಂಟು ಮಂದಿ ಸಾಯುಧಭಟರು ಪ್ರತಾಪರುದ್ರನ ಕಡೆಗೆ ವೇಗವಾಗಿ ಬರಲಾರಂಭಿಸಿದರು.

ಪ್ರತಾಪರುದ್ರನಿಗೆ ಈಗ ಗುಟ್ಟೆಲ್ಲವೂ ಗೊತ್ತಾಗಿ ಹೋಯಿತು. ಇನ್ನು ಗೊತ್ತಾಗಬೇಕಾದ ಅಂಶವೊಂದೂ ಇಲ್ಲ. ಈ ರಾಯನೇ ರಾಜವರ್ಮ; ಯೋಗೀಶ್ವರನೂ ಠಕ್ಕ. ಒಟ್ಟು ಕತ್ತರಿಯಲ್ಲಿ ಸಿಕ್ಕಿಬಿದ್ದಿದ್ದಾನೆ. ಪಾಪ! ಆ ಕಾಲ ಸರ್ಪಾಂಕಿತ ವ್ಯಕ್ತಿಯೊಂದಿಗೆ ತಿರುಮಲಾದೇವಿ ಆಗಲೇ ಹೊರಟು ಹೋಗಿ ಈಗ ರಾಯನ ಸೆರೆಯಲ್ಲಿರುವಳೆನ್ನಲು ಸಂದೇಹವಿಲ್ಲ. ಇನ್ನೇನು ಮಾಡುವುದು.... ...? ಎಂದು ಕೆನ್ನೆಗಳಮೇಲೆ ಕೈಯಿಟ್ಟುಕೊಂಡು ಯೋಚಿಸುತ್ತಿದ್ದ ಪ್ರತಾಪರುದ್ರನಿಗೆ ಕೃಷ್ಣದೇವರಾಯನು ನುಡಿದ ಕಠೋರ ವಚನಗಳನ್ನು ಸಹಿಸಲಾಗದೆ ಹೋಯಿತು. ಸರ್ವಾಂಗದಲ್ಲಿಯೂ ಕ್ಷಾತ್ರತೇಜವು ಉಕ್ಕಿತು. ಕೃಷ್ಣದೇವರಾಯನನ್ನು ದುರುಗುಟ್ಟಿ ನೋಡಲಾರಂಭಿಸಿದನು. ನೋಡ ನೋಡುತ್ತಿದ್ದಂತೆ ಅವನ ಕಣ್ಣುಗಳಿಂದ ಕಿಡಿಗಳೇ ಉದುರುವಂತೆ ತೋರಿದುವು. ಅವನು ತಟ್ಟನೆ ಎದ್ದು ನಿಂತು ಕ್ರೋಧಕಂಪಿತ ಸ್ವರದಿಂದ, "ಚೋರಾಧಮಾ! ಎಂದಿಗೂ ಹೀಗಾಗದು! ವೀರಕ್ಷಾತ್ರ ವೃದ್ಧನಾದ ನನ್ನ ಹೃದಯದಲ್ಲಿ ರಕ್ತವು ಹರಿಯುವತನಕ ಎಂದಿಗೂ ಹೀಗಾಗದು" ಎಂದು, ಗರ್ಜಿಸಿ ಟೊಂಕದಿಂದ ಸರಕ್ಕನೆ ಕರಾಳಕರವಾಲವನ್ನು ಸೆಳೆದು, ಝಳಪಿಸುತ್ತಾ, "ಜೈ ಚಂಡಿಕೆ! ಜೈ ಸಿಂಹಾದ್ರೀಶ!" ಎಂದು ಅಬ್ಬರಿಸಿದನು. ಉತ್ತರಕ್ಷಣವೇ ಶತಗಣನೆಯ ಗಜಪತೀ ಸರದಾರ-ಸೇನಾನಾಯಕರು ತಮ್ಮ ತಮ್ಮ ಆಯುಧಗಳನ್ನು ಒಂದೇಬಾರಿಗೆ ಸೆಳೆದು, "ಜೈ ಚಂಡಿಕೆ! ಜೈ ಗಜಪತಿ ಮಹಾರಾಜ್!" ಎಂದು ಮಾರ್ನುಡಿಗೊಡುತ್ತಾ, ಮುಂದಕ್ಕೆ ಧುಮುಕಿದರು. ಅದಕ್ಕಿದಿರಾಗಿ, "ಜೈ ಭುವನೇಶ್ವರಿ! ಜೈ ಶ್ರೀಕೃಷ್ಣಮಹಾರಾಜ್!" ಎಂದು ವಿಜೃಂಭಿಸುತ್ತಾ ರಾಯನ ಸೇನಾಸಾಗರವು, ಗಜಪತೀ ಸೈನ್ಯವನ್ನು ಪ್ರಚಂಡ ಮಂಡಲಾಕಾರವಾಗಿ ಮುತ್ತಿ ಅಪ್ಪಳಿಸಿತು. ಹೇಳುವುದೇನು? ಸಾವಿರಾರು ಮಿಂಚುಗಳು ಒಮ್ಮೆಗೇ ಮಿಂಚಿದಂತಾದುವು. ವಿವಾಹಮಂಟಪದಲ್ಲಿ ಮಹಾ ಅಲ್ಲೋಲಕಲ್ಲೋಲವೆದ್ದಿತು. ಗಜಪತೀ ಸೇನೆಯ ಜಯಜಯರವವು ರಾಯನ ಸೇನೆಯ ಜಯಘೋಷದೊಳಗೆ ಸೇರಿಹೋಗಿದ್ದಿತು. ಸ್ವಲ್ಪಹೊತ್ತಿನಲ್ಲಿಯೇ, ಮಹಾ ನದೀಜಲವು ಸಾಗರದಲ್ಲಿ ಐಕ್ಯವಾಗುವಂತೆ,

ಗಜಪತಿಯ ಅಷ್ಟು ಸೈನ್ಯವೂ ರಾಯನ ಮಹಾಸೇನಾಸಾಗರದ ಮಧ್ಯದಲ್ಲಿ ವಿಲೀನವಾಗಿ ಹೋಯಿತು. ಹತ್ತಿಪ್ಪತ್ತು ಶಿರಗಳು ಧರೆಯಲ್ಲಿ ಉರುಳಾಡುತ್ತಿರಲು, ಪ್ರತಾಪರುದ್ರನು ಬೋನಿನಲ್ಲಿಬಿದ್ದ ಸಿಂಹದಂತೆ, ರಾಯನ ಸೆರೆಸಿಕ್ಕಿ ಬಂಧಿತನಾಗಿ ಹೋದನು.

## ೫೦

# ಮುಹೂರ್ತ ನಿಶ್ಚಯ

ಉತ್ಕಲ ವಿಜಯವು ಕೈಗೂಡಿತು. ಈ ರಾಯನ ಶಾಸನವು ಹೇಗೋ ಏನೋ, ಎಂದು ಭಯಭೀತರಾಗಿದ್ದ ಪ್ರಜೆಗಳೆಲ್ಲರೂ, ರಾಯನ ಅಭಯ ಪ್ರದಾನವನ್ನು ಕೇಳಿ ಸಂತುಷ್ಟರಾದರು. ಆದರೆ, ರಾಯನೇನೋ ಸಂತುಷ್ಟನಾಗಿರಲಿಲ್ಲ. ಎರಡುಮೂರು ವರ್ಷಗಳಿಂದಲೂ, ಹೆಣಗಾಡುತ್ತಿದ್ದ ಉತ್ಕಲ ದೇಶ ವಿಜಯವು ಈಗ ಕೈಗೂಡಿದರೂ, ರಾಯನ ಮನಸ್ಸು ಉಲ್ಲಾಸಪೂರ್ಣವಾಗಲೇ ಇಲ್ಲ. ಅದೇನೋ ತಣ್ಣಗಾಗಿ ಹೋಗಿದೆ; ಏಕೆ? ಚಿನ್ನಾದೇವಿಯೇ ಕಾರಣವಾಗಿರಬಹುದೇ? ಅದೂ ಹೌದು. ಲೋಕವಲ್ಲಿ ಅರಸರ ಉತ್ಸಾಹಕ್ಕೆ ಕಾರಣಗಳು ನಾಲ್ಕು:—ಕಾರ್ಯ, ಕೀರ್ತಿ, ಅಧಿಕಾರ, ಪ್ರೇಮ ಅವೆಲ್ಲವೂ ರಾಯನಿಗೆ ಸಿದ್ಧಿಸಲಿಲ್ಲ. ಮಿಂಚಿನಂತೆ ಹೊಳೆದು ಮಾಯವಾಗಿ ಹೋದ, ಆ ಪ್ರೇಮವಿದ್ಯುಲ್ಲತೆಯಾದ ಚಿನ್ನಾದೇವಿ, ರಾಯನ ಹೃದಯದಲ್ಲೊಮ್ಮೆ ಆಣಗಿದ ವಿರಹಾಗ್ನಿಗೆ ಹುಲ್ಲುಹಾಕಿ ಹೋಗಿದ್ದಾಳೆ. ಎಂತಹ ವಿಚಿತ್ರ! ಎಂತಹ ಆಶ್ಚರ್ಯದ ರಮಣಿ! ಮೇಘದ ಮರೆಯಿಂದ ಹೊರಗೆ ಮಿಂಚಿದ ಮಿಂಚಿನಂತೆ, ಮೊಗದೋರಿದಳು. ಸತ್ಕುಲೀನೆ! ವೀರರುದ್ರ ಗಜಪತಿಯ ಮಗಳು! ತಂದೆತಾಯಿಗಳು ಇಲ್ಲಿಯೇ ಇರುವರೆಂದು ಹೇಳಿದಳು. ತನ್ನನ್ನು ವರಿಸುವುದಾಗಿ ಮಾಲಿಕೆಯನ್ನು ಹಿಡಿದುಕೊಂಡೇ ನಿಂತಳು; ಆದರೆ - ಆದರೆ ........ಏನೇನೋ ಹೇಳಿ, ತನ್ನ ಒಣಗಿಹೋದ ಆಶೆಗೆ ಒಮ್ಮೆ ಜೀವಾಮೃತವನ್ನು ಸುರಿದು, ಸರಸರನೆ ಓಡಿಹೋಗಿ ಅಡಗಿದಳಲ್ಲ! ಎಲ್ಲಿ ಹುಡುಕಿದರೂ ಮತ್ತೆ ಅವಳನ್ನು ಕಾಣಲಿಲ್ಲ. ಎಲ್ಲಿಗೆ ಹೋದಳೆಂದು, ರಾಮಕೃಷ್ಣಯೋಗಿಗೂ ತಿಳಿಯದು. ಪಾಪ! ರಾಯನ ಆಸೆ ನಿಮಿಷನಿಮಿಷಕ್ಕೂ ವೃದ್ಧಿಯಾಗು

ತ್ತಿದೆ. ನಿಟ್ಟುಸಿರು ಆಗಾಗ ಮೇಲೇರುತ್ತಾ ಹೋಗುತ್ತಿದೆ. ಇನ್ನೊಂದು ಕಡೆ ಜಗನ್ಮೋಹಿನೀ ತಿರುಮಲಾದೇವಿ, ಅವನ ಮನಸ್ಸನ್ನು ಬಾಧಿಸುತ್ತಿದ್ದಾಳೆ. ಇವಳ ಜಗಜಗಿಸುವ ಸೌಂದರ್ಯಕ್ಕೆ, ಅವನು ಮನಸೋತು ಮುಗ್ಧನಾಗಿ ಹೋಗಿದ್ದಾನೆ. 'ಇವಳು ಭೂದೇವಿ, ಅವಳು ಶ್ರೀದೇವಿ' ಎಂದು ಎಣಿಸ ಲಾರಂಭಿಸಿದ್ದಾನೆ. ಪ್ರೇಮಾನುಭವಕ್ಕೆ ಇವಳು ಬೇಕು; ಸುಖಾನುಭವಕ್ಕೆ ಅವಳು ಬೇಕು ಎಂದು ಅವನ ಮನಸ್ಸು ಹಾತೊರೆಯತೊಡಗಿದೆ. ತಿರುಮಲಾದೇವಿಗೂ ರಾಜವರ್ಮನಮೇಲೆ ಮನಸ್ಸು ಸಿಕ್ಕಿಬಿದ್ದಿದೆ. ಅವನು ಈಗ ಅವಳನ್ನು ವಿವಾಹಮಾಡಿಕೊಂಡುದಾದರೆ, ಅವಳು ಹಿಂದೆ ತೋರಿದ ಗರ್ವಕ್ಕಾಗಿ, ಪಶ್ಚಾತ್ತಾಪಪಡುವಳು. ಎಲ್ಲವೂ ಶುಭದಾಯಕವಾಗಿ ಪರಿಣಮಿಸುತ್ತಿತ್ತು. ಆದರೆ, ಹಾಳಾದ ಆ ಪ್ರತಿಜ್ಞೆ! ದುಡುಕಿ, ಆ ಪ್ರತಿಜ್ಞೆಯನ್ನು ಮಾಡಿಕೊಂಡುದಕ್ಕಾಗಿ, ಈಗ ತಳಮಳಿಸುತ್ತಿದ್ದಾನೆ. ಮತ್ತೆ ಪಶ್ಚಾತ್ತಾಪಪಡಬೇಕಾಗುವುದೆಂದು ಸೂಚಿಸಿದ, ಅಪ್ಪಾಜಿಯ ವಾಕ್ಯವು ಈಗ ಜ್ಞಾಪಕಕ್ಕೆ ಬಂದಿದೆ. ಏನಾದರೂ ತಾನು ವೀರ ತೌಳವರಾಜವಂಶಕ್ಕೆ ಸೇರಿದವನು. ಅಂತಹ ಕ್ಷತ್ರಿಯನು ಪ್ರತಿಜ್ಞೆಯನ್ನಂತೂ ಪಾಲಿಸದೆ ಬಿಡಲಾಗುವುದೇ ಇಲ್ಲ. ತಿರುಮಲಾದೇವಿಯೆಂದರೆ, ರೂ ಪ ಸಿಂ ಗ ನಿ ಗಾ ಗಿ,—ಅವನು ನಿಶ್ಚಯಿಸಿದ್ದ ವಧು. ರೂಪಸಿಂಗನೂ ತಿರುಮಲಾದೇವಿಗೆ ಯೋಗ್ಯನಾದ ವರನೂ ಹೌದು. ಸರಿ, ವೃಥಾ ಚಾಚಲ್ಯದಿಂದ ಫಲವೇನು? ಪ್ರತಿಜ್ಞಾಪಾಲನೆಯೇ ಕ್ಷತ್ರಿಯನ ಆದ್ಯಂತ ಧರ್ಮ! ಅದು ಕ್ರೋಧಾವೇಶದಲ್ಲಿ ಮಾಡಿದರೇನು? ಆ ಪ್ರತಿಜ್ಞೆಯ ಜನ್ಮದಾತೃವಾದ, ತಿರುಮಲಾದೇವಿಯ ಪತ್ರವು ಈಗಲೂ ರಾಯನ ಬಳಿಯಲ್ಲೇ ಇದೆ. ಅದರ ಕ್ರೂರವಾಕ್ಯಗಳನ್ನು ನೆನೆದರೆ, ಈಗಲೂ ಕೋಪವು ಉಕ್ಕೇರುತ್ತಿದೆ. ಆ ಕೋಪಾವೇಶದಲ್ಲಿ ಬುದ್ಧಿಪ್ರೇರೇಪಣೆಯಿಂದಲೇ ಮಾಡಿದ ಪ್ರತಿಜ್ಞೆಯಿದು. ಈಗಣ ಈ ಅಲ್ಪಮೋಹದಿಂದಲ್ಲ. ಆ ಪ್ರತಿಜ್ಞೆಯನ್ನು ಪಾಲನೆಮಾಡದೆ ಬಿಡುವುದೇ? ಎಂದಿಗೂ ಕೂಡದು! ಹಾಗಾದರೆ ಚಿನ್ನಾದೇವಿಯ ಆಶೆಯೂ ಇಲ್ಲ. ಬೇಡ! ತಿರುಮಲಾದೇವಿಯ ಆಶೆಯೂ ಇಲ್ಲ ಬೇಡ! ಒಟ್ಟು, ರಾಯನ ಹೃದಯವು ಸ್ಮಶಾನಸಮಾನವಾಗಿಹೋಗಿಬಿಟ್ಟಿತು. ಹೋದರೆ ಹೋಗಲಿ! ಎಂದುಕೊಂಡು ನಿರ್ವಿಣ್ಣನಂತಿದ್ದಾನೆ.

ಈ ಪ್ರಕಾರವಾಗಿ ದೋಳಾಂದೋಳಿತ ಮಾನಸನಾಗಿದ್ದ ರಾಯನ ಮನಸ್ಸು, ಈಗ ಒಂದು ನಿಶ್ಚಯಕ್ಕೆ ಬಂದು ಮುಟ್ಟಿತು. ಪ್ರತಿಜ್ಞಾಪಾಲನೆಯೇ ಅವಶ್ಯಕರ್ತವ್ಯವೆಂದು ನಿಶ್ಚಯಿಸಿತು.

ಇಪ್ಪತ್ತನಾಲ್ಕು ದಿನಗಳು ಕಳೆದುಹೋದುವು. ತಿರುಮಲಾದೇವಿಯನ್ನು ವಿವಾಹಮಾಡಿಕೊಳ್ಳುವುದಕ್ಕಾಗಿ ರೂಪಸಿಂಗನೂ ನಾಗಾಲೋಟದಿಂದ ಬಂದಿದ್ದಾನೆಂಬ ಸಮಾಚಾರವು ಹಬ್ಬಿತು. ಆದರೆ ಅವನು ತಂದೆತಾಯಿಗಳನ್ನು ಕರೆದುಕೊಂಡು ಬಂದಿಲ್ಲವಂತೆ. ವೃದ್ಧರಾದ ಅವರನ್ನು ಇಷ್ಟುವೇಗದಿಂದ ಕರೆತರಲಾಗದೆ ಹೋದುದರಿಂದ, ಮುದಗಲ್ಲಿನಲ್ಲೇ ಬಿಟ್ಟುಬಂದೆನೆಂದು ಸರಿಯಾದ ಕಾರಣವನ್ನು ಹೇಳಿದನು. ಇನ್ನೇನು? ಮುಹೂರ್ತ ನಿಶ್ಚಯವೊಂದೇ ಉಳಿದುದು. ಅದೂ ಆಯಿತು. ಈ ಶುಭದಿನವೇ ತಿರುಮಲಾದೇವಿ ರೂಪಸಿಂಗರ ವಿವಾಹ.

## ೫೧

## ಸರ್ವ ಸೌಭಾಗ್ಯಾಭಿವೃದ್ಧಿರಸ್ತು !

ರೂಪಸಿಂಗನ ವಿಚಿತ್ರವರ್ತನ ರೂಪಪರಿವರ್ತನಾದಿಗಳಿಂದ, ಅವನ ಮೇಲೆ ತಿಮ್ಮರಸನಿಗೆ ಏನೋ ಸಂದೇಹತೋರುತ್ತಿದ್ದಿತೆಂದು ವಾಚಕರು ಬಲ್ಲರು. ಈಗ ರೂಪಸಿಂಗನು ವಿವಾಹಕ್ಕೆ ಅತ್ಯುತ್ಸುಕತೆಯಿಂದ ಅಂದರೆ ಕರೆಯುವುದಕ್ಕೂ ಮುಂಚಿತವಾಗಿ ಧಾವಿಸಿ ಬಂದುದನ್ನು ಕಂಡಮೇಲಂತೂ, ತಿಮ್ಮರಸನಿಗೆ ಆಶ್ಚರ್ಯವಾಯಿತು.

ಏಕಾಂಗಿಯಾಗಿದ್ದ ರೂಪಸಿಂಗನ ಕೊಗಡಿಯೊಳಗೆ ತಿಮ್ಮರಸನು ರಹಸ್ಯದಲ್ಲಿ ಪ್ರವೇಶಿಸಿ, ರೂಪಸಿಂಗನನ್ನು ಆಪಾದಮಸ್ತಕವಾಗಿ ತೀಕ್ಷ್ಣದೃಷ್ಟಿಯಿಂದ ನೋಡಿದನು. ರೂಪಸಿಂಗನೂ ಬೆರಗಾಗಿ ಚಕಿತನೇತ್ರದಿಂದ ತಿಮ್ಮರಸನ ಮುಖವನ್ನು ನೋಡುತ್ತಾ, ಸಂಕೋಚದಿಂದಲೂ, ಎಚ್ಚರಿಕೆಯಿಂದಲೂ ಇರಲು ತಿಮ್ಮರಸನು, "ಅಯ್ಯಾ, ರೂಪಸಿಂಗ್! ನಾನು ಕಳುಹಿಸಿದ ಪತ್ರವು ನಿನಗೆ ಸಿಕ್ಕಿರುವುದೋ ಇಲ್ಲವೋ?" ಎಂದು ಕೇಳಿದನು.

"ಸಿಕ್ಕಿರುವುದು" ಎಂದನು ರೂಪಸಿಂಗ್.

"ಹಾಗಾದರೆ, ರಾಯನು ಪ್ರೇಮಿಸಿರುವ—ರಾಯನಿಗಾಗಿ ಹೊಂದಿಸಲು ನಾವೆಲ್ಲರೂ ಪಾಡುಪಡುತ್ತಿರುವ, ಆ ವಧುನನ್ನು ಮದುವೆಮಾಡಿಕೊಳ್ಳುವುದಕ್ಕೆ ನೀನು ಇಷ್ಟು ಆತುರದಿಂದ ಬಂದುದನ್ನು ಕಂಡು ನನಗೆ ಅತ್ಯಾಶ್ಚರ್ಯವಾಗುತ್ತದೆ."

"ಮತ್ತೇನುಮಾಡಲಿ, ಮಂತ್ರಿಶೇಖರಾ! ಪ್ರತಿಜ್ಞಾಪಾಶದಲ್ಲಿ ಸಿಕ್ಕಿಬಿದ್ದಿರುವ ರಾಯನನ್ನು ಬಿಡಿಸಬೇಕಾದದು ನನ್ನ ಕರ್ತವ್ಯವಾಗಿದೆ."

"ಆದರೆ, ರೂಪಸಿಂಗ್! ಮನೋಬಂಧನದಿಂದ ಬಿಡಿಸಲು ನಿನ್ನಿಂದ ಸಾಧ್ಯವಿದೆಯೇ?"

"ಇಲ್ಲ ಅಮಾತ್ಯವರ್ಯ! ಮನೋಬಂಧನದಿಂದ ಬಿಡಿಸಲು ಯಾರಿಗೂ ಸಾಧ್ಯವಿಲ್ಲ. ಅದನ್ನು ಹಾಗೆಯೇ ಹೊಂದಿಸಿಬಿಡಬೇಕಾದುದೇ ಉಪಾಯ."

"ಹಾಗಾದರೆ ನೀನೀಗ ಮಾಡುತ್ತಿರುವುದೇನು?"

"ನಾನೇ........ನಾನು........ನನ್ನ ಕೈಯ್ಯಲ್ಲಾದಷ್ಟು ರಾಯನ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಕೆಲಸಮಾಡುವೆನು. ಆಮೇಲೆ ಭಗವಂತನಿದ್ದಾನೆ."

"ಆದರೆ ನಿನ್ನ ಮಾತಿನಲ್ಲಿ ದ್ವಂದ್ವಾರ್ಥವು ಹೊಳೆಯುತ್ತಿದೆಯಲ್ಲ?" ತಿಮ್ಮರಸನು ತೀಕ್ಷ್ಣದೃಷ್ಟಿಯಿಂದ ರೂಪಸಿಂಗನನ್ನು ನೋಡುತ್ತಿದ್ದನು. ತನ್ನ ಗುಟ್ಟು ಈ ಹದ್ದಿನದೃಷ್ಟಿಯವನ ಮುಂದೆ ನಡೆಯಲಾರದೆಂದು ರೂಪಸಿಂಗನು ಬೆಪ್ಪುನೋಟದಿಂದ ನಿರುತ್ತರನಾಗಿಹೋದನು.

ಆಗ ಪುನಃ ತಿಮ್ಮರಸನು ವಿಜಯಸೂಚಕವಾಗಿ ತಲೆದೂಗುತ್ತಾ, "ಶಹಭಾಸ್ ರೂಪಸಿಂಗ! ನಿನ್ನನ್ನು ರೂಪಸಿಂಗ್ ಎಂದು ಕರೆಯಲೋ, ಅಥವಾ ನಿಜವಾ........"

ಇನ್ನು ರೂಪಸಿಂಗನಿಗೆ ಸಂದೇಹ ಉಳಿಯಲಿಲ್ಲ. ಇನ್ನು ಮುಚ್ಚಿಟ್ಟು ಏನೂಪ್ರಯೋಜನವಿಲ್ಲವೆಂದು ಬಗೆದು, ತಿಮ್ಮರಸನಮಾತಿನಲ್ಲಿ ಮಧ್ಯೆಬಾಯಿ ಹಾಕಿ, "ಬೇಡಮಂತ್ರಿ—ಮಂತ್ರೀಶ್ವರ! ರೂಪಸಿಂಗನೆಂದೇ ಕರೆಯಿರಿ. ನಿಜನಾಮವನ್ನೀಗ ಎತ್ತುವುದೇ ಬೇಡ. ಆಹಾ! ಮಂತ್ರಿಪುಂಗವಾ! ತಮ್ಮ

ಅದ್ಭುತವಾದ ವಿಮರ್ಶಕದೃಷ್ಟಿಯ ಮುಂದೆ ನನ್ನ ಅಲ್ಪವಾದ ಛದ್ಮವೇಷ ಸಾಮರ್ಥ್ಯವು ಯಾವ ಮೂಲೆಯಲ್ಲಿ?'' ಎಂದನು.

ತಿಮ್ಮರಸನು ಆಶ್ಚರ್ಯದಿಂದ, ಮೂಗಿನಮೇಲೆ ಬೆರಳಿಟ್ಟು, ''ಭಪ್ಪರೆ ರೂಪಸಿಂಗ್! ಎಲ್ಲಕ್ಕಿಂತಲೂ ನಿನ್ನ ಈ ಸ್ವರಪರಿವರ್ತನ ಸಾಮರ್ಥ್ಯವು ಅತ್ಯದ್ಭುತವಾದುದೇ ಸರಿ! ಇಂತಹ ಚತುರ ವಿದ್ಯೆಯನ್ನು ಎಲ್ಲಿ ಅಭ್ಯಾಸ ಮಾಡಿದೆ?" ಎಂದು ಕೇಳಿದನು.

''ತಮಗೆ ಗೊತ್ತಿಲ್ಲವೇ? ಮಂತ್ರಿವರ್ಯಾ! ನನಗೆ ಇದು ಬಾಲ್ಯದಿಂದಲೇ ಬಂದ ಹುಚ್ಚು''

''ಓಹೋ! ರಾಯರ ತೋಟಗಳಲ್ಲಿ ಮೃಗ ಪಕ್ಷಿಗಳ ಕೂಗನ್ನು ಅನುಕರಣ ಮಾಡುತ್ತಿದ್ದ ಹುಚ್ಚು. ಭಲೆ! ಭಲೆ! ಅದರ ಫಲವಿದು! ಈ ಅದ್ಭುತ ಕಂಠಭೇದ ಸಾಮರ್ಥ್ಯ! ಹೆತ್ತ ತಾಯಿಗೂ ಗುರುತು ಸಿಕ್ಕುವಂತಿಲ್ಲ''

''ಏನೋ, ಭಗವಂತನ ಚಿತ್ತ!"

''ರೂಪಸಿಂಗ್! ನನ್ನ ಅಪರಾಧವನ್ನು........"

"ಹಾ! ಅಮಾತ್ಯಶೇಖರಾ! ತಾವು ಮಾಡಿದುದು ಅಪರಾಧವೇ? ಅಲ್ಲಲ್ಲ; ಒಳ್ಳೇ ನ್ಯಾಯಸಮ್ಮತವಾದುದೇ!''

"ಶಹಭಾಸ್! ನೀನೇ ಕರ್ಣಾಟಕ ಸೌಭಾಗ್ಯನಿಧಿ! ರಾಜಶ್ರೀ! ರಾಜ್ಯಶ್ರೀ! ನಿನ್ನ ತಂತ್ರದ ಧ್ಯೇಯವೆಲ್ಲವೂ ಈಗ ನನಗೆ ತಿಳಿದುಹೋಯಿತು!"

"ಅತುಲಧೀಶಕ್ತಿಸಂಪನ್ನರಾದ, ತಮಗೆ ತಿಳಿದುಹೋದುದರಲ್ಲಿ, ಏನೂ ಆಶ್ಚರ್ಯವಿಲ್ಲ. ಆದರೆ, ಇದನ್ನು ರಹಸ್ಯದಲ್ಲಿಟ್ಟಿರಬೇಕಾಗಿ........"

''ಓ! ಅದನ್ನು ನನಗೆ ಬೇರೆ ಹೇಳಬೇಕಾಗಿಯೇ ಇಲ್ಲ. ಆದರೆ, ಇದು ರಾಮಕೃಷ್ಣನಿಗೆ ಗೊತ್ತಿದೆಯೇ?''

"ಇಲ್ಲ, ಈ ಛದ್ಮವೇಷದ ಸಂಗತಿ, ನನ್ನ ತಾಯಿತಂದೆಯರ ಹೊರತು, ಮತ್ತಾರಿಗೂ ಗೊತ್ತಿರಲಿಲ್ಲ. ಈಗ ತಾವೊಬ್ಬರು ಸ್ವಯಂ ಕಂಡುಹಿಡಿದು ಬಿಟ್ಟಿರಿ."

''ಇರಲಿ, ಈಗ ನಿನ್ನ ತಂದೆತಾಯಿಗಳು ಎಲ್ಲಿರುವರು?''

"ಈ ಊರಿನಲ್ಲಿಯೇ ಒಂದು ಸುರಕ್ಷಿತವಾದ ಎಡೆಯಲ್ಲಿರುವರು. ಅವರಿಗೆ ಯಾವ ಕೊರತೆಯೂ ಇಲ್ಲ."

"ಆಗಲಿ, ನಿನಗೆ ಜಯವಾಗಲಿ, ನಾನಿನ್ನು ಹೊರಡುತ್ತೇನೆ!"

ರೂಪಸಿಂಗನು ತಿಮ್ಮರಸನ ಪಾದಕ್ಕೆ ನಮಸ್ಕರಿಸಿದನು. ತಿಮ್ಮರಸನು ಕಣ್ಣೀರನ್ನು ಸುರಿಸಿ, 'ಸರ್ವಸೌಭಾಗ್ಯಾಭಿವೃದ್ಧಿರಸ್ತು!' ಎಂದು ಹರಸಿ, ಹೋದನು. ಅವನ ಬೆರಳು ತಾನಾಗಿಯೇ ಮೂಗಿನ ಕೊನೆಯನ್ನು ಮುಟ್ಟಿತು. ಆಮೇಲೆ ಕಣ್ಣೀರನ್ನೂ ಒರೆಸಿತು.

## ೫೨

## ತಿರುಮಲಾದೇವಿ

ಇಂದು ವಿವಾಹದ ಸುಮುಹೂರ್ತ. ಪ್ರಭಾತಕಾಲ. ಹಿಂದೊಮ್ಮೆ ಯಾವ ಮಂಟಪದಲ್ಲಿ ವಿವಾಹವೈಭವವು ಜರುಗಿತೋ, ಅಲ್ಲಿಯೇ ಮಾಸಾನಂತರದಲ್ಲಿ ಈ ದಿನ ವಿವಾಹವೈಭವವು ನೆರವೇರುತ್ತಿದೆ. ಇಂದಿನ ಸಂಭ್ರಮವು ಮೊನ್ನೆಯ ವೈಭವಕ್ಕಿಂತಲೂ ಇಮ್ಮಡಿಯಾಗಿದೆ. ಆದರೇನು? ಅದರ ಮೊದಲೊಂದು ದುಃಖಚ್ಛಾಯೆ ಸಾಂದ್ರೀಕೃತವಾಗಿ ಹೋಗಿದೆ. "ಕೃಷ್ಣದೇವರಾಯನು ಏನೋ ಪ್ರತಿಜ್ಞೆ ಮಾಡಿದ್ದಾನಂತೆ! ತಿರುಮಲಾದೇವಿಯ ವಿವಾಹದ ಮೂಲಕವಾಗಿ, ಆ ಪ್ರತಿಜ್ಞೆ ಪೂರ್ಣವಾಗಿ ಹೋಗುವುದಂತೆ" ಎಂದು ಎಲ್ಲೆಲ್ಲಿಯೂ ಸುದ್ದಿ ಹರಡಿ ಹೋಗಿದ್ದುದರಿಂದ, ಇಂದು ದೇಶ ದೇಶವೇ ಧಾವಿಸಿಬಂದಿದೆ, ಈ ವಿವಾಹ ಕೌತುಕವನ್ನು ನೋಡಲಿಕ್ಕೆ! ಬರಲಿ.

ಕೃಷ್ಣದೇವರಾಯನಿಗಾಗಿ ಏರ್ಪಡಿಸಲ್ಪಟ್ಟ ಭವನಾಂತರ್ಭಾಗದಲ್ಲಿ, ಒಂದು ಕೊಠಡಿಯೊಳಗೆ, ತಿರುಮಲಾದೇವಿ ಬಾಡಿಹೋದ ಬಳ್ಳಿಯಂತೆ ಗೋಡೆಗೆ ಒರಗಿಕೊಂಡು ಕುಳಿತಿದ್ದಾಳೆ. ಸಂತಾಪದಿಂದ ಅವಳದೇಹವು ಕೃಶವಾಗಿ ಹೋಗಿದೆ. ಸೆರೆಸಿಕ್ಕಿದಂದಿನಿಂದಲೂ ಅವಳು ಅನ್ನಾಹಾರಗಳನ್ನೇ ತೆಗೆದುಕೊಂಡಿರಲಿಲ್ಲ. ಬರೇ ಹಾಲು ನೀರಿನಿಂದಲೇ,–ಅದೂ ಸಖಿಯರ ಒತ್ತಾಯದ ಸೇವನೆಯಿಂದಲೇ – ಅವಳ ಜೀವವು ನಿಂತು ಕಾಯುತ್ತಿದೆ. ಆದುದರಿಂದ

ನಿಶ್ಯಕ್ತಳಾಗಿ ಹೋಗಿದ್ದಾಳೆ. ನಿನ್ನೆದಿನ ತಿಮ್ಮರಸನು ಅವಳ ಬಳಿಗೆಬಂದು, ಎಲ್ಲಾ ಸಂಗತಿಯನ್ನೂ ತಿಳಿಸಿ, ನಾಳೆಯದಿನ ಸಿದ್ಧವಾಗಿರಬೇಕೆಂದು ಹೇಳಿ ಹೋಗಿದ್ದನು. ದೊಡ್ಡ ಮೋಸದಲ್ಲಿ ಸಿಕ್ಕಿಬಿದ್ದುದನ್ನು ತಿಳಿದಕೂಡಲೇ, ಅವಳ ಹೃದಯವು ಭಗ್ನವಾಗುವುವರಲ್ಲಿತ್ತು. ತನ್ನ ಮನಸ್ಸನ್ನು ಕದ್ದುಕೊಂಡ ಕಳ್ಳ ರಾಜವರ್ಮನು ತನ್ನನ್ನು ಸಿಕ್ಕಿದವರ ಪಾಲುಮಾಡುವುದನ್ನು ಕೇಳಿ, ಅವಳು ಸಹಿಸಲಾರದೆ ಹೋಗಿದ್ದಾಳೆ. ಬಿಸಿಬಿಸಿಯಾದ ನಿಟ್ಟುಸಿರುಬಿಡುತ್ತಿದ್ದಾಳೆ. ನಾಲ್ಕಾರುಮಂದಿ ಸಖಿಯರು ಅವಳನ್ನು ಬಗೆಬಗೆಯಿಂದ ಸಮಜಾಯಿಸುತ್ತಿದ್ದರೂ, ಅವಳ ಮನಸ್ಸು ಯೋಚನಾಗೋಲಕದಲ್ಲಿ ತಿರುಗಾಡುತ್ತಿತ್ತು.

ಅವಳ ಮನಸ್ಸನ್ನು ಕೃಷ್ಣದೇವರಾಯನು ಕದ್ದಿದ್ದಾನೆ. ಆದರೆ ಅವನನ್ನು ವರಿಸಲು ಕುಲಾಭಿಮಾನದಿಂದ ಅಂಧವಾದ ಅವಳ ಮನವು ಸಮ್ಮತಿಸಿರಲಿಲ್ಲ. ಆದರೂ ಅವನ ಸುಗುಣಕಳೆಯ ಸುಂದರವದನ ಮಂಡಲದಿಂದ ಚಿತ್ತಾಕರ್ಷಿತಳಾಗಿ ಅವನು ಇಂತಹವನೆಂದು ತಿಳಿಯದೆ, ಹೃದಯದಲ್ಲಿ ಅವನಿಗೆ ಸ್ಥಾನವನ್ನು ಕೊಟ್ಟುಬಿಟ್ಟುದೂ ಆಯಿತು. ಹೇಗಾದರೂ ಈಗ ಸಂಪೂರ್ಣವಾಗಿ ಅವನ ಕೈಯೊಳಗೆ ಸಿಕ್ಕಿಬಿಟ್ಟಿರುವುದರಿಂದ ಸರ್ವನಾಶನದ ಸಮಯದಲ್ಲಿ, ಸ್ವಲ್ಪವನ್ನಾದರೂ ಉಳಿಸಿಕೊಳ್ಳುವುದೇ ಜಾಣತನವೆಂಬ ಆರ್ಯೋಕ್ತಿಯಂತೆ ಕಡೆಗೆ ರಾಯನೇ ಅವಳ ಪಾಣಿಗ್ರಹಣಮಾಡುವುದಾದರೆ, ಅವಳು ಸಹಿಸಿಕೊಳ್ಳುತ್ತಿದ್ದಳು. ಅಲ್ಲದೆ ತನ್ನನ್ನು ಮತ್ತಾವನಿಗೋ ಬಲಿಕೊಡುವುದನ್ನು ಅವಳು – ಆ ಕ್ಷತ್ರಿಯರಮಣಿ ಹೇಗೆ ತಾಳಿಕೊಳ್ಳುವಳು? ಆದರೆ ಮಾಡುವುದೇನು? ತಪ್ಪಿಸುವುದು ಹೇಗೆ? ಅವಳೀಗ ಸಂಪೂರ್ಣ ಪರಾಧೀನೆಯಾದ ನಿರಾಯುಧಳಾದ ಅಬಲೆ. ಪ್ರಾಣತ್ಯಾಗಕ್ಕೂ ಮಾರ್ಗವಿಲ್ಲ. ಉಪವಾಸಮಾಡಿಯೋ, ತಲೆಯನ್ನು ಗೋಡೆಗೆ ಜಜ್ಜಿಯೋ, ವಜ್ರವನ್ನರೆದು ಕುಡಿದೋ ಪ್ರಾಣತ್ಯಾಗಮಾಡಿದರೂ ಅದರಿಂದ ಫಲವೇನು ಬಂದಂತಾಯಿತು? ಅವಳನ್ನು ಪ್ರಾಣಕ್ಕೂ ಮಿಗಿಲಾದ ಪ್ರೀತಿಯಿಂದ, ಕಾಪಾಡುವ ತಂದೆ, ಸರ್ವಸ್ವವನ್ನೂ ಕಳೆದುಕೊಂಡು ರಾಯನ ಸೆರೆಗೆ ಸಿಕ್ಕಿಬಿದ್ದು ಪೇಚಾಡುತ್ತಿರುವಾಗ ಅವಳೂ ಹೀಗೆ ಪ್ರಾಣತ್ಯಾಗಮಾಡಿಕೊಂಡರೆ ತಂದೆಗೆ ಇನ್ನಷ್ಟು ದುಃಖವುಂಟಾಗುವುದಲ್ಲವೇ? ಹೆಚ್ಚೇನು! ತಂದೆಯನ್ನು ನಿರಂತರ ಶೋಕಸಾಗರದಲ್ಲಿ ಮುಳುಗಿಸುವುದೊಂದು ಫಲವಾಗಿ ಪರಿಣಮಿಸುವುದೇ.

ಹೊರತು, ಪ್ರಾಣತ್ಯಾಗಮಾಡಿದರೆ ಮತ್ತಾವ ಲಾಭವೂ ಇಲ್ಲ. ಸದ್ಗತಿಯೂ ಇಲ್ಲ. ವೀರಕ್ಷತ್ರಿಯರಮಣಿಯಾಗಿ ಹುಟ್ಟಿ ಸಾಮಾನ್ಯ ಹೆಂಗುಸಿನಂತೆ ಪ್ರಾಣ ತ್ಯಾಗಮಾಡುವುದು ಸರಿಯಲ್ಲವೆಂದು ಅವಳು ಯೋಚಿಸಿಕೊಂಡಳು. ಹಾಗಾದರೆ ಈ ಆಪತ್ತಿನಿಂದ ಪಾರಾಗುವ ಮಾರ್ಗವೇನು?

........ಮಾರ್ಗವು ಯಾವುದೂ ಇಲ್ಲ. ವಿಧಿಯನ್ನು ತಪ್ಪಿಸಲು ಯಾವ ಮಾರ್ಗವಿರಬಹುದು? ಯಾವುದೂ ಇಲ್ಲ. ಆದರೆ........ಇದರಿಂದ ತಂದೆಗೆ ಯಾವುದಾದರೂ ಒಂದು ಪ್ರಯೋಜನವನ್ನುಂಟುಮಾಡಿಕೊಡಲಿಕ್ಕೆ ನೋಡಬೇಕು. ಆ ಪ್ರಯೋಜನವೆಂದರೆ ರೂಪಸಿಂಗನನ್ನೇ ಕೈಹಿಡಿಯುವುದು; ಅನಂತರ ರೂಪಸಿಂಗನನ್ನು ತ್ಯಜಿಸಿ ಗುಪ್ತವಾಗಿ ಎಲ್ಲಾದರೂ ಅಡಗಿದ್ದು, ರಾಯನಿಗೆ ಪ್ರತಿಕ್ರಿಯೆಮಾಡಲು ಉದ್ಯೋಗಿಸಬೇಕು. ಅವನು ಷಂಡನಂತೆ ಸತೀತ್ವವನ್ನು ಪರಾಧೀನಮಾಡಿದುದಕ್ಕೆ ಅವನಿಗೆ ತಕ್ಕ ಪ್ರತೀಕಾರಮಾಡಲೇಬೇಕು. ಆಗಲೇ ಪ್ರತಾಪರುದ್ರ ಗಜಪತಿಯ ವೀರಕುಮಾರಿಯಾಗಿ ಜನಿಸಿದುದಕ್ಕೆ ಸಾರ್ಥಕ. ಹಾಗೆಯೇ ಸರಿ, ಅವಳ ನಿಶ್ಚಯವು ಹೀಗಾಯಿತು. ಭಗ್ನವಾಗುತ್ತಿದ್ದ ಹೃದಯವು ಈಗ ಸ್ವಲ್ಪ ಗಟ್ಟಿಯಾಯಿತು. ಹಾಗೆಯೇ ಒಂದು ಯೋಚನೆಯನ್ನು ಗಟ್ಟಿಮಾಡಿಕೊಂಡಳು.

ಈ ದಿನವೇ ವಿವಾಹದ ದಿನವೆಂಬುದು ಜ್ಞಾಪಕವಿವೆಯಷ್ಟೆ? ನಿನ್ನೆ ತಿರುಮಲಾದೇವಿಗೆ ಎಚ್ಚರಕೊಟ್ಟುಹೋಗಿದ್ದ ತಿಮ್ಮರಸನು ಈಗ ಪುನಃ ಅವಳ ಮಂದಿರದೊಳಗೆ ಪ್ರವೇಶಿಸಿದನು.

ಹಾಗೂ ತಿರುಮಲಾದೇವಿಯನ್ನು ಕುರಿತು, ಗಂಭೀರಧ್ವನಿಯಿಂದ, "ತಾಯಿ! ಈ ದಿನ ಹನ್ನೆರಡು ಘಳಿಗೆ ಸಮಯಕ್ಕೆ ನಿನ್ನ ವಿವಾಹ ಮುಹೂರ್ತವೆಂಬುದು ಜ್ಞಾಪಕವಿದೆಯಷ್ಟೆ? ಸಿದ್ಧಳಾಗಿರು. ಮೊಂಡತನಮಾಡಿ ಕೆಡಬೇಡ. ನೀನು ನಮ್ಮ ಕರ್ನಾಟಕಸಾರ್ವಭೌಮನನ್ನು ಅನ್ಯಾಯವಾಗಿ ನಿಂದಿಸಿದುದರ ಫಲವನ್ನು ಅನುಭವಿಸದೆ ಬೇರೆ ಗತಿಯೇ ಇಲ್ಲ. ಆದರೆ ನಿನಗಾಗಿ ನಿಯೋಜಿತನಾದ ವರನು ನಿನಗೆ ಅನುರೂಪನಾದ ವರನೆಂದೇ ತಿಳಿ. ನಿನ್ನ ತಂದೆ ಬಂಧುಗಳೆಲ್ಲರೂ ನಮ್ಮ ಸೆರೆಯಾಳುಗಳಾದುದರಿಂದ ಇನ್ನು ವಿವಾಹಕ್ಕೆ ವಿಘ್ನ ಮಾಡುವವರು ಯಾರೂ ಇಲ್ಲ. ಆದುದರಿಂದ ನೀನು ಒಳ್ಳೆ

ಯದರಲ್ಲೇ ನಮಗೆ ಅನುಕೂಲತೆಯಿಂದ ವರ್ತಿಸುವುದೇ ಮೇಲು. ಇಲ್ಲದಿದ್ದರೆ ಬಲತ್ಕಾರದಿಂದಲೂ ವರ್ತಿಸುವಂತೆ ಮಾಡಿ ಈ ವಿವಾಹವನ್ನು ನಡೆಸಿ ನಿನ್ನ ಮೇಲೆ ರಾಯನುಮಾಡಿದ ಈ ಘೋರಪ್ರತಿಜ್ಞೆಯನ್ನು ನೆರವೇರಿಸುವುದೇನೋ ನಿಶ್ಚಯ. ಆದರೆ ಬಲಾತ್ಕಾರಕ್ಕೊಳಗಾಗುವುದು ನಿನ್ನಂತಹ ಕೋಮಲಾಂಗಿಗೆ ಸರಿಯಲ್ಲ. ವಿವೇಚಿಸಿ ಸಿದ್ಧಳಾಗು" ಎಂದು ಬೋಧಿಸಿ, ಬೆದರಿಸಿ, ಸಖೀಜನರನ್ನು ಕುರಿತು, "ನೀವು ಇವಳನ್ನು ಸ್ನಾನಭೂಷಣಾದ್ಯಲಂಕಾರಗಳಿಂದ ವಿವಾಹಕ್ಕೆ ಸಿದ್ಧಗೊಳಿಸಿರಿ. ಏನಾದರೂ ಮೊಂಡತನವಾಡಿದಳಾದರೆ ನಮಗೆ ತಿಳಿಸಿರಿ" ಎಂದು ಆಜ್ಞಾಪಿಸಿ, ಹೊರಟುಹೋಗಲನುವಾದನು.

ಈ ಮಾತನ್ನು ಕೇಳುತಿದ್ದಾಗ, ಗೋಡೆಗೆ ಒರಗಿ ಕುಳಿತುಕೊಂಡಿರುತ್ತಿದ್ದ, ತಿರುಮಲಾದೇವಿಯ ಹೃದಯದಲ್ಲಿ ಅನೇಕಾನೇಕ ಕ್ರೂರ ಮಾರ್ನುಡಿಗಳು ಎದ್ದೆದ್ದು ನಾಲಗೆಯ ಕೊನೆಯವರೆಗೂ ಬಂದುವು. ಅಷ್ಟರಲ್ಲಿ ವಿವೇಕಜ್ಞಾನವು ಓಡಿಬಂದು, ಆ ನುಡಿಗಳನ್ನು ಹೊರಗೆಡವಿ ಪ್ರಯೋಜನವೇ ಇಲ್ಲವೆಂದು, ಅವುಗಳನ್ನು ಹಿಂದಕ್ಕೆ ಎಳೆದುಕೊಂಡುವು. ಅವಳು ಹುಬ್ಬನ್ನು ಸುರುಗಿಸಿಕೊಂಡು, ಒಂದು ಬಗೆಯ ಭೀಷಣ ಮೌನಮುದ್ರೆಯಿಂದಲೇ ತಿಮ್ಮರಸನ ಮಾತೆಲ್ಲವನ್ನೂ ಕೇಳಿದಳು. ಆಮೇಲೆ ತಿಮ್ಮರಸನು, ಹೇಳುವುದನ್ನು ಹೇಳಿಮುಗಿಸಿ, ಹೋಗಲನುವಾದುದನ್ನು ಕಂಡು, "ಅಯ್ಯಾ! ಸ್ವಲ್ಪ ನಿಲ್ಲಿ" ಎಂದಳು.

ತಿಮ್ಮರಸು ನಿಂತು, ತಿರುಗಿ ಅವಳ ಮುಖವನ್ನು ನೋಡಿದನು. ಅಲ್ಲಿ ಈಗ ದುಃಖ ನಿರಾಶೆಯ ಛಾಯೆಯೊಂದೇ ಕಾಣುತ್ತಿತ್ತು. ಇದುವರೆಗೆ ಆವರಿಸಿಕೊಂಡಿದ್ದ ಆ ಕೋಪವು ಈಗ ಫಕ್ಕನೆ ಎಲ್ಲಿಗೆ ಹೋಯಿತೆಂದು ತಿಮ್ಮರಸನು ಸ್ವಲ್ಪ ಆಶ್ಚರ್ಯಪಟ್ಟನು. ಹಾಗೂ, "ಏನು ಹೇಳುವೆ ತಾಯಿ!" ಎಂದು ಕೇಳಿದನು.

"ಮತ್ತೇನು ಹೇಳಲಿ? ಕಾಲವೆಲ್ಲವೂ ವಿಪರೀತವಾಗಿ ಹೋಯಿತು. ಮೋಸದಿಂದ ಜಯವನ್ನು ಸೆಳೆದುಕೊಂಡಿರಿ. ನಾನು, 'ಇತೋ ಭ್ರಷ್ಟ, ತತೋ ಭ್ರಷ್ಟಃ' ಎಂಬಂತೆ, ಆಗಿಹೋದೆನು. ಆಗಲಿ, ಆದರೆ ನನ್ನದೊಂದು ಕೋರಿಕೆಯನ್ನು ನೀವು ನೆರವೇರಿಸಿಕೊಡುವುದಾದರೆ ಮಾತ್ರ ನಿಮ್ಮ ರಾಯನ

ಪ್ರತಿಜ್ಞೆ ಈಡೇರಿತು. ಇಲ್ಲವಾದರೆ, ನನ್ನ ವಶದಿಂದಲೇ ಪ್ರತಿಜ್ಞೆಯನ್ನು ನೆರವೇರಿಸಿಕೊಳ್ಳಬೇಕಾದೀತೆಂದು ತಿಳಿಯೋಣಾಗಲಿ!" ಎಂದು ತಿರುಮಲಾ ದೇವಿ ಕಡೇ ವಾಕ್ಯವನ್ನು ಒಳ್ಳೇ ಧೃಢಸ್ವರದಿಂದ ಹೇಳಿದಳು.

"ಆ ನಿನ್ನ ಕೋರಿಕೆ ಯಾವುದೆಂದು ನಿಸ್ಸಂಕೋಚವಾಗಿ ನನಗೆ ತಿಳಿಸಬಹುದು."

"ಕೇಳೋಣಾಗಲಿ ಈಗ ನಿಮ್ಮ ಸೆರೆಗೆಬಿದ್ದಿರುವ ನನ್ನ ಪಿತಾಜಿಯನ್ನೂ ಹಿಂದೆ ನಿಮ್ಮ ಸೆರೆಗೆ ಸಿಕ್ಕಿದ ರಾಮುಯಾಮಾತ್ಯಶೇಖರನನ್ನೂ ನೀವು ಸಂಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟು ಬಿಡುಗಡೆ ಮಾಡಿಸಬೇಕು. ಇದೇ ನನ್ನ ಕೋರಿಕೆ. ನನ್ನ ಈ ದೇಹದಿಂದ ಹಿರಿಯರಿಗೆ ಇಷ್ಟೊಂದು ಉಪಕಾರವಾದರೂ ಆಗಲಿ."

ತಿಮ್ಮರಸನು ಒಂದುನಿಮಿಷ ಯೋಚಿಸಿದನು. ಅವಳ ಮನೋಭಾವವು ಅವನಿಗೆ ಸ್ವಲ್ಪ ಹೆಚ್ಚುಕಡಿಮೆ ತಿಳಿದೇಹೋಯಿತು. ಆದರೆ ಅದರಿಂದಾಗುವ ಅಪಾಯಕ್ಕೆ ಮುಂದೆ ಯೋಚಿಸಿ ತಡೆಹಾಕಬಹುದೆಂದು ಬಗೆದು, 'ಆಗಲಿ, ತಾಯಿ! ಅದಕ್ಕೇನು? ರಾಮುಯಾಮಾತ್ಯನನ್ನು ಬಿಡುಗಡೆ ಮಾಡುವಂತೆ ರಾಯನಿಂದ ಈಗಲೇ ಅಜ್ಞಾಪತ್ರವನ್ನು ಸಿದ್ಧಪಡಿಸಿ, ಆನೆಗೊಂದಿಯ ಸೆರೆಮನೆಯ ಅಧಿಕಾರಿಗೆ ಕಳುಹಿಸುವೆನು. ನಿನ್ನ ಮದುವೆಯಾದ ಉತ್ತರಕ್ಷಣದಲ್ಲಿಯೇ ನಿನ್ನ ಪಿತಾಜಿಗೂ ಬಿಡುಗಡೆಯಾಗುವುದೆಂದು ನಂಬು" ಎಂದನು.

"ಈ ಮಾತು ಸತ್ಯವೇ?"

"ಸತ್ಯ. ಈಶ್ವರನಾಣೆಗೂ ಸತ್ಯ. ಇನ್ನೇನಾಗಬೇಕು?"

"ಇನ್ನೇನೂ ಬೇಡ. ಈ ದೇಹವನ್ನು ಇಷ್ಟಾನುಸಾರವಾಗಿ......."

ಮುಂದಾಗುವ ಆಟವು ಗೊತ್ತೇ ಇದ್ದುದರಿಂದ, ತಿಮ್ಮರಸನು ಮತ್ತೇನೂ ಹೇಳದೆ ತಲೆಯಾಡಿಸಿಕೊಂಡು ಹೊರಟು ಹೋದನು.

## ೫೩

## ಪ್ರತಿಜ್ಞಾ ಪೂರಣ

ಎಳ್ಳು ಬಿದ್ದರೆ ನೆಲಕ್ಕೆ ಬೀಳದಷ್ಟು ಜನರು ಕಿಕ್ಕಿರಿದು ಹೋಗಿದ್ದಾರೆ. ಜನಸಂದಣಿ ಆ ಮಹಾ ಭವನದೊಳಗೆಲ್ಲಾ ತುಂಬಿ ಉಕ್ಕಿ, ಹೊರಗಣ

ಭೂಭಾಗದಲ್ಲೆಲ್ಲಾ ಆವರಿಸಿಬಿಟ್ಟವೆ. ಆ ಸಂದಣಿಯ ಮೆಲ್ದನಿಯ ಮಾತೆಲ್ಲವೂ ಒಂದಾಗಿ 'ಗೊಂ' ಎಂದು ಏಕಶಬ್ದಸಾಂದ್ರತೆಯಿಂದ ತುಂಬಿಹೋಗಿತ್ತು! ಎಲ್ಲರೂ ಆ ಭವನಾಂತರ್ಭಾಗದಲ್ಲಿರುವ ಎತ್ತರವಾದ ವಿವಾಹವೇದಿಕೆಯನ್ನೇ ನೋಡುತ್ತಿದ್ದರು.

ವಿವಾಹವೇದಿಕೆಯಲ್ಲಿ ಉನ್ನತ ಸಿಂಹಾಸನದ ಮೇಲೆ, ಶ್ರೀಕೃಷ್ಣದೇವರಾಯನು ರಾಜಭೂಷಣಾಲಂಕೃತನಾಗಿ ಗಂಭೀರ ವಿಗ್ರಹನಾಗಿ ಆಸೀನನಾಗಿದ್ದನು. ಅವನ ಕೆಳಭಾಗದಲ್ಲಿ ವಧೂವರರ ಪೀಠಗಳ ಮೇಲೆ ತಿರುಮಲಾದೇವಿ ರೂಪಸಿಂಗರು ಕುಳಿತಿದ್ದರು. ಪುರೋಹಿತಸ್ಥಾನದಲ್ಲಿ ಸ್ವಯಂ ತೆನ್ನಾಲ ರಾಮಕೃಷ್ಣನೇ ಕುಳಿತಿದ್ದನು. ಅವನೀಗ ಯೋಗೀಶ್ವರನ ವೇಷದಲ್ಲಿಲ್ಲ. ಅಚ್ಚ ವೈದೀಕ ಬ್ರಾಹ್ಮಣ ಆಚಾರ್ಯನಾಗಿ ಬೆಳಗುತ್ತಿದ್ದಾನೆ. ಸುತ್ತಲೂ ಬೇರೆ ನಾಲ್ಕಾರು ಮಂದಿ ಉತ್ಕಲದ ಬ್ರಾಹ್ಮಣರೂ ಕುಳಿತಿದ್ದರು. ತಿಮ್ಮರಸನು ವಧೂವರರ ಮುಂಭಾಗದಲ್ಲಿ ಒಂದು ಆಸನದಮೇಲೆ ಮಂಡಿಸಿದ್ದನು. ಆ ವಿವಾಹವೇದಿಕೆಯ ಬಲಭಾಗದಲ್ಲಿ ಸಾವಿರಾರು ಸ್ತ್ರೀ ಪರಿವಾರವು ಕುಳಿತುಕೊಂಡು ಬಾಡಿದನೋಟದಿಂದ ವಧೂವರರನ್ನೇ ನೋಡುತ್ತಿದ್ದಿತು. ಉಳಿದೆಲ್ಲಾ ಭಾಗವನ್ನೂ ತುಂಬಿಕೊಂಡು ಹಾಗೆಯೇ ನೋಡುತ್ತಲಿತ್ತು ಸೈನ್ಯ ಸರದಾರರೇ ಮೊದಲಾದ ರಾಜಪರಿವಾರ.

ತಿರುಮಲಾದೇವಿ ಶ್ರೀಕೃಷ್ಣದೇವರಾಯನ ಶಾಂತಗಂಭೀರ ಸುಂದರ ಮೂರ್ತಿಯನ್ನು ಈಗಲೂ ನೋಡಿದಳು. ಹಾಗೂ ಅವನ ಸದ್ಗುಣವರ್ಚಸ್ಸನ್ನು ನೆನೆನೆನೆಯುತ್ತ, "ಇಂತಹ ಪುರುಷೋತ್ತಮನೂ ನನ್ನ ಮೇಲೆ ಇಷ್ಟು ಘೋರವಾದ ಪ್ರತಿಜ್ಞೆಯನ್ನು ಮಾಡಿದನೇ?" ಎಂದು ಯೋಚಿಸುತ್ತಿದ್ದಳು.

ತಿಮ್ಮರಸನು ಕೈಯ್ಯಲ್ಲೊಂದು ಪತ್ರವನ್ನು ಹಿಡಿದುಕೊಂಡು ಎದ್ದು ನಿಂತನು. ಸಭಾಪರಿವಾರವೆಲ್ಲವೂ ಅವನೇನು ಹೇಳುವನೋ ಎಂದು ಕೇಳುವಕುತೂಹಲದಿಂದ ತುಂಬಿಹೋಯಿತು. ತಿಮ್ಮರಸನು ಸಭೆಯನ್ನು ನೋಡುತ್ತಾ, ತನ್ನ ಸಹಜ ಗಂಭೀರವಾದ ಮೇಘನಾದದಿಂದ ಹೀಗೆಂದನು; "ಮಾನ್ಯಸಭಾಸದರೇ! ಮಹಾಜನರೇ! ವೀರಧೀರರಾದ ಸರದಾರರೇ! ಸಾಮಂತರೇ! ಎಲ್ಲರೂ ಸಾವಧಾನದಿಂದ ಲಾಲಿಸೋಣಾಗಲಿ!

ನಮ್ಮ ರಾಜಾ ಶ್ರೀಕೃಷ್ಣದೇವರಾಜ ಮಹಾರಾಜರು, ಉತ್ಕಲರಾಜ ಕುಮಾರಿಯ ಪಾಣಿಗ್ರಹಣಾಕಾಂಕ್ಷೆಯಿಂದ ಉತ್ಕಲ ವಿಜಯಕ್ಕೆಹೊರಟಿರುವ ಸಂಗತಿ, ತಮಗೆಲ್ಲರಿಗೂ ಈ ಮೊದಲೇ ಗೊತ್ತಿದೆ. ಈಗ ಶ್ರೀಭುವನೇಶ್ವರಿಯ ಕೃಪೆಯಿಂದ ಉತ್ಕಲವಿಜಯವು ಸಂಪ್ರಾಪ್ತವಾದರೂ, ಈವರೆಗಣ ಎಲ್ಲಾ ವಿಜಯದಲ್ಲಿ ಸಂತೋಷಪಡುವಭಾಗ್ಯವು ಈಗ ಇಲ್ಲದೆಹೋಯಿತೆಂದು ವಿಷಾದದಿಂದ ತಿಳಿಸಬೇಕಾಗಿದೆ. ಕಾರಣ—ಮಹಾರಾಜರು ಒಂದು ಘೋರವಾದ ಪ್ರತಿಜ್ಞೆಯನ್ನು ಮಾಡಿಬಿಟ್ಟರು! ಕೇವಲ ದುರಭಿಮಾನಪರವಶರಾದ ಗಜಪತೀ ರಾಜಕುಮಾರಿಯರು, ಸತ್ಕುಲಪ್ರಸೂತರಾದ ನಮ್ಮ ರಾಯರ ಮೇಲೆ ಇಲ್ಲದ ದುರಾರೋಪಣೆಯನ್ನು ಹೊರಿಸಿ ನಿಂದಿಸುತ್ತಲೇ ಬಂದರು. ತಾಳ್ಮೆಯ ತವರುಮನೆಯಾದ ನಮ್ಮ ರಾಯರು ಅದನ್ನಷ್ಟುಮನಸ್ಸಿಗೆ ಹಚ್ಚಿಕೊಳ್ಳದೆ, ಕ್ರೋಧವನ್ನು ನುಂಗಿಕೊಂಡೇ ಎಷ್ಟೋದೂರ ಮುಂದರಿಸಿದರು. ಆದರೆ, ತಾಳ್ಮೆಗೂ ಒಂದು ಎಲ್ಲೆಯುಂಟು. ಕೊಂಡವೀಡಿನಿಂದ ನಾವು ಕಳುಹಿಸಿದ ದೂತನೊಂದಿಗೆ, ಉತ್ಕಲರಾಜಕುಮಾರಿಯವರು ನಮ್ಮ ರಾಯರಿಗೆ ಒಂದು ಪತ್ರವನ್ನು ಬರೆದು ಕಳುಹಿಸಿಕೊಟ್ಟರು. ಆ ಪತ್ರದಲ್ಲಿ ನಮ್ಮ ಅಖಿಳ ಕರ್ನಾಟಕ ಚಕ್ರವರ್ತಿಯವರನ್ನು ಬಹುತುಚ್ಛವಾಗಿ ನಿಂದಿಸಿದ್ದರು. ಆ ಪತ್ರವೇ ಕ್ಷತ್ರಿಯವೀರರಾದ ರಾಯರ ಬಾಯಿಂದ ಘೋರ ಪ್ರತಿಜ್ಞೆಯನ್ನು ಮಾಡಿಸಿಬಿಟ್ಟಿತು. ಮಾನ್ಯಮಹನೀಯರೇ! ಆ ಪತ್ರಾಭಿಪ್ರಾಯವನ್ನೂ ಅದರಲ್ಲಿರುವ ಒಂದೊಂದು ಕ್ರೂರವಾಕ್ಯವನ್ನೂ ಕೇಳದೇಹೋದರೆ ಉತ್ಕಲಪ್ರಜೆಗಳೆಲ್ಲರಿಗೂ ರಾಯರ ಪ್ರತಿಜ್ಞೆ ತೀರಾ ಅನ್ಯಾಯವೆಂದು ತೋರೀತು. ಆದುದರಿಂದ ಈಗ ಆ ಪತ್ರವನ್ನೇ ಇಲ್ಲಿ ಓದಿ ಹೇಳುತ್ತೇನೆ." ಎಂದು ಹೇಳಿ ಕೈಯಲ್ಲಿದ್ದ ಪತ್ರವನ್ನು ಓದಲಾರಂಭಿಸಿದನು. ಆ ಪತ್ರವನ್ನು ನಮ್ಮ ವಾಚಕರು ಹಿಂದೆಯೇ ಓದಿಬಲ್ಲರಾದುದರಿಂದ ಇಲ್ಲಿ ಪುನಃ ಬರೆಯುವುದಿಲ್ಲ. ಓದಿಯಾದ ಮೇಲೆ ತಿಮ್ಮರಸನು, "ಮಹಾಜನರಿರಾ! ಕೇಳಿದಿರಲ್ಲವೇ? ಕರ್ನಾಟಕಚಕ್ರೇಶ್ವರನನ್ನು ಎಷ್ಟೊಂದು ತುಚ್ಛೀಕಾರವಾಗಿ ನಿಂದಿಸಿದ್ದಾರೆ! ಇದು ಕರ್ನಾಟಕ ಪ್ರಜೆಗಳಿಗಂತೂ ಹಾಗಿರಲಿ, ನಮ್ಮ ರಾಯರಿಗೆ " ಆಂಧ್ರಭೋಜ " ರೆಂಬ ಬಿರುದನ್ನು ದಯಪಾಲಿಸಿದ ಆಂಧ್ರೀಯರಾದ ಉತ್ಕಲಪ್ರಜೆಗಳಿಗೂ ಅಸಹನೀಯವಾದುದೆಂದೇ ನಂಬುತ್ತೇನೆ........" ಎಂದನು.

ಸ್ತಬ್ಧವಾಗಿದ್ದ ಮಹಾ ಸಭೆಯಿಂದ 'ಸೂ' ಎಂಬ ದೀರ್ಘನಿಶ್ವಾಸವು ಹೊರಟುಹೋಯಿತು.

"........ಅಂದಮೇಲೆ ಪ್ರಜೆಗಳೇ! ಕ್ಷತ್ರಿಯಾವತಂಸರಾದ, ರಾಯರು ಹೇಗೆ ತಾಳಿಕೊಂಡಾರು? ಹೆಂಗುಸೊಬ್ಬಳು ಚಕ್ರೇಶ್ವರನಾದ ತನ್ನ ಮಾನ ನಷ್ಟ ಮಾಡಿದ ಅಪರಾಧಕ್ಕಾಗಿ ಅವಳನ್ನು ಶಿಕ್ಷಿಸಬೇಕಾದುದು ರಾಯರ ಕರ್ತವ್ಯವಾಯಿತು. ಅವರು ಕ್ರೋಧದಿಂದ ಕೂಡಲೇ ಘೋರಪ್ರತಿಜ್ಞೆಯನ್ನು ಮಾಡಿಬಿಟ್ಟರು. ಏನೆಂದರೆ, 'ದುರಭಿಮಾನೋನ್ಮತ್ತೆಯಾದ ತಿರುಮಲಾದೇವಿಯನ್ನು ಹಿಡಿದು, ಸಾಮಾನ್ಯನಾದೊಬ್ಬ ಸರದಾರನಿಗೆ ವಿವಾಹ ಮಾಡಿಸದಿದ್ದರೆ, ನಾನು ವಿದ್ಯಾನಗರ ರಾಜಧಾನಿಯನ್ನೇ ಪ್ರವೇಶಿಸುವುದಿಲ್ಲ' ಎಂದು........"

'ಹಾ!' ಎಂದು ಇಡೀ ಸಭೆಯೇ ಪ್ರಲಾಪಿಸಿಬಿಟ್ಟಿತು.

ತಿರುಮಲಾದೇವಿಯ ಕಣ್ಣಿನಲ್ಲಿಯೂ ನೀರು ತುಂಬಿತು. ಅಂದು ತಾನು ಬರೆದಿದ್ದ ಪತ್ರವನ್ನು ಇಂದು ತಿಮ್ಮರಸನು ಓದುತ್ತಿರುವಾಗ, ಅದನ್ನು ಕೇಳುತ್ತಿದ್ದಂತೆ, ಅವಳ ಹೃದಯದಲ್ಲಿ ಮಹಾ ಬಾಧೆ ಉತ್ಪನ್ನವಾಯಿತು. ಅಂದು ತಾನೂ, ತನ್ನ ತಂದೆಯೂ ಮಾತಾಡಿಕೊಂಡುದು—ತಾನು ಆ ಪತ್ರವನ್ನು ಬರೆದುದು—ಅದರ ವಿಷಯದಲ್ಲಿ ತಂದೆ ಹೇಳಿದ ವಿವೇಕದ ಮಾತು—ತಾನು ಹೆಮ್ಮೆಯಿಂದ ತಲೆತಿರುಗಿ, ತಂದೆಯ ಮಾತನ್ನು ಮೀರಿ, ಆ ಪತ್ರವನ್ನು ಕಳುಹಿಸಿಕೊಟ್ಟುದು, ಇವೆಲ್ಲವೂ ಅವಳ ಕಣ್ಣಿದಿರಿಗೆ ಚಿತ್ರಿಸಿದಂತಾಯಿತು. ಪಶ್ಚಾತ್ತಾಪದಿಂದ ತುಂಬಿ ಉಕ್ಕುತ್ತಿದ್ದ ಕಣ್ಣೀರು ಕೆಳಗೆ ಇಳಿಯುತ್ತಿತ್ತು. ನಡುಗುವ ಕೊರಳಿನಿಂದ, "ಹಾ! ಅಂದು ಅಸಹನೀಯವಾದ ಈ ಪತ್ರದ ವಾಕ್ಯವನ್ನು ಸ್ವಲ್ಪ ಮಾರ್ಪಡಿಸುವಂತೆ ಹೇಳಿದ ಪಿತಾಜಿಯ ವಚನವನ್ನು ಮೀರಿ, ನಡೆದುದರ ಫಲವಿದು!" ಎಂದು ಉದ್ಗಾರಗರೆದಳು. ಆ ಉದ್ಗಾರವು ಸಮೀಪವಲ್ಲಿರುವವರಿಗೆಲ್ಲಾ ಕೇಳಿಸಿತು.

ತಿಮ್ಮರಸನು ಅದನ್ನು ಕೇಳಿ, ಸಿಂಹಾಸನಾರೂಢನಾದ ರಾಯನ ಮುಖವನ್ನು ನೋಡಿದನು. ಅದು "ನೋಡಿದೆಯಾ! ಹಿಂದೆ ಆ ಪ್ರತಿಜ್ಞಾಕಾಲದಲ್ಲಿ ಪ್ರತಾಪರುದ್ರನ ಅಭಿಪ್ರಾಯವೇ ಈ ಪತ್ರಾಭಿಪ್ರಾಯವಾಗಿರಲಾರ

ದೆಂದು, ನಾನು ಹೇಳಿದುದು, ಈಗ ನಿಜವಾಯಿತಲ್ಲ? ಈ ಮುಗ್ಧ ತಂದೆಯ ಅಭಿಪ್ರಾಯವನ್ನು ಮೀರಿ, ಬರೆದ ಪತ್ರವೆಂದು ಈಗಲಾದರೂ ತಿಳಿಯಿತೇ?" ಎಂದು ರಾಯನ ಮನಸ್ಸಿಗೆ ಜ್ಞಾಪಕವನ್ನು ಕೊಟ್ಟಿತು. ಅವನೂ ತಿಮ್ಮರಸನ ಮುಖವನ್ನು ಅರ್ಥಸೂಚಕ ದೃಷ್ಟಿಯಿಂದ ನೋಡಿದನು. ಅದರಲ್ಲಿ, "ಹೌದು, ನಾನು ಸ್ವಲ್ಪ ದುಡುಕಿಬಿಟ್ಟೆನು" ಎಂಬ ಭಾವವೂ ಅಡಕವಾಗಿತ್ತು.

ಪುನಃ ಸಭೆಯನ್ನು ನೋಡುತ್ತ, ತಿಮ್ಮರಸನು ಹೇಳಲಾರಂಭಿಸಿದನು. "ಮಾನ್ಯಮಹಾಜನರೇ! ಈ ಘೋರ ಪ್ರತಿಜ್ಞೆಯ ವೃತ್ತಾಂತವು ಇಂದು ಬಹಿರಂಗವಾದುದನ್ನು ನೋಡಿ, ನೀವೆಲ್ಲರೂ ಆಶ್ಚರ್ಯಪಡಬಹುದು. ಆದರೆ ಈ ಪ್ರತಿಜ್ಞೆಯನ್ನು ಹಿಂದೆಯೇ ಬಹಿರಂಗಪಡಿಸಿದ್ದರೆ, ಅದನ್ನು ತಿಳಿದ ತಿರುಮಲಾದೇವಿ ರಾಯರಕೈಗೆ ಸಿಕ್ಕುತ್ತಿದ್ದಳೇ? ಇಲ್ಲ. ಅವಳು ಸಿಕ್ಕದಿದ್ದರೆ ರಾಯರ ಪ್ರತಿಜ್ಞಾಪೂರ್ಣವಾಗುವ ಬಗೆ ಹೇಗೆ? ಅಸಾಧ್ಯ. ಪ್ರತಿಜ್ಞಾಪೂರ್ಣವಾಗದಿದ್ದರೆ ರಾಜಧಾನಿಯನ್ನು ಪ್ರವೇಶಿಸಲು ಸಾಧ್ಯವಿಲ್ಲ. ರಾಜಧಾನಿಯನ್ನು ಪ್ರವೇಶಿಸಲು ಸ್ವಾತಂತ್ರ್ಯವಿಲ್ಲದ ಚಕ್ರೇಶ್ವರರು ಮಹಾರಾಜರೆಂದು ಹೇಗೆ ಕರೆಯಿಸಿಕೊಳ್ಳುವರು? ಈ ಕಾರಣಗಳಿಂದ ರಾಯರ ಪ್ರತಿಜ್ಞೆಯನ್ನುಳಿಸಲು ಅದನ್ನು ರಹಸ್ಯದಲ್ಲಿಯೇ ಇಟ್ಟುಕೊಳ್ಳೋಣಾಯಿತು.

ಇನ್ನು ಯುದ್ಧಮುಖದಿಂದಲೇ ತಿರುಮಲಾದೇವಿಯನ್ನು ಸೆರೆಹಿಡಿದುಕೊಂಡು ಹೋಗಬಹುದಿತ್ತಲ್ಲಾ? ಕಪಟೋಪಾಯವನ್ನು ಏಕೆ ಅವಲಂಬಿಸೋಣಾಯಿತೆಂದು ಯಾರಾದರೂ ಕೇಳಬಹುದು. ಆದರೆ, ನಾವು ಯುದ್ಧೋದ್ಯಮವನ್ನು ಎಲ್ಲಿಯೂ ಬಿಟ್ಟಿಲ್ಲ. ಈ ಕಟಕಪುರಿಯ ರಾಜಧಾನಿಯವರೆಗೂ, ನಾವು ಯುದ್ಧಮುಖದಿಂದಲೇ ಮುಂದುವರಿದು ಬಂದಿದ್ದೇವೆ. ಗಜಪತಿರಾಜರ ಮಹಾಬಲವೆಲ್ಲವೂ ನಮ್ಮ ಪ್ರಬಲವಾದ ಪ್ರತ್ಯಾಘಾತದಿಂದ ಪತನವಾಗಿ ಹೋಗುತ್ತಿರುವುದನ್ನು ಎಲ್ಲರೂ ಬಲ್ಲರು. ಅಷ್ಟಾದರೂ ಪ್ರತಾಪ ಮಹಾರಾಜರು ಒಂದಿಷ್ಟೂ ಅನುಕೂಲರಾಗುವಂತೆ ಕಾಣಲಿಲ್ಲ. ನಮಗಾದರೋ ಪ್ರತಿಜ್ಞಾಪೂರ್ಣಮಾಡಬೇಕಾದುದೇ ಮುಖ್ಯೋದ್ದೇಶವಾಗಿ ಹೋಗಿದೆ. ಹೀಗಿರಲು, ಬಲವಿಳಿದು ನಿರ್ವಿಣ್ಣರಾಗಿರುವ ಪ್ರತಾಪರುದ್ರರ ರಾಜಧಾನಿಯನ್ನು ಯುದ್ಧಮುಖದಿಂದಲೇ ಹೊಕ್ಕಿದಾದರೆ, ತನಗೆ ಸೋಲು ನಿಶ್ಚಯ

ವೆಂದೇ ತಿಳಿದ ಮಹಾಪ್ರತಾಪಿ ಪ್ರತಾಪರುದ್ರರು ಉತ್ತರದೇಶದ ರಜಪೂತರ ಭಯಂಕರವಾದ ಕೃತ್ಯವನ್ನೇ ಆಚರಿಸಿಬಿಡಲು ಹಿಂದೆಮುಂದೆ ನೋಡುವಂತಿರಲಿಲ್ಲ. ಅವರ, ಈವರೆಗಣ ದೃಢನಿಶ್ಚಯವನ್ನು ನೆನೆದರೆ, ಹಾಗೆಂದು ನಿಶ್ಚಯಿಸಬೇಕಾಗುವುದು. ಹಾಗಾಗಗೊಟ್ಟರೆ—ಕರ್ಣಾಟಕಾಂಧ್ರೀಯ ಪ್ರಜೆಗಳೇ!—ಇನ್ನು ಅದಕ್ಕಿಂತಲೂ ಹೆಚ್ಚಾದ ಅನರ್ಥವು ಬೇರೆ ಯಾವುದುಂಟು? ಈ ಕಾರಣದಿಂದಲೇ ನಾವು ಹೀಗೆ ಕಪಟೋಪಾಯವನ್ನು ಅವಲಂಬಿಸಬೇಕಾಯಿತು. ಇದು ಧರ್ಮವಿರುದ್ಧವಾದುದೂ ಅಲ್ಲ. ಹೀಗೆ ಮಹಾನರ್ಥವನ್ನು ತಪ್ಪಿಸಲಿಕ್ಕಾಗಿ, ಸ್ವಲ್ಪ ಕಪಟಾಚರಣೆಯನ್ನು ಮಾಡುವುದು ದೋಷವಲ್ಲ. ಹಿಂದೆ, ಶ್ರೀರಾಮಚಂದ್ರನು ವಾಲೀಸಂಹಾರಮಾಡುವ ತನ್ನ ಪ್ರತಿಜ್ಞೆಯನ್ನು ಪೂರ್ತಿಗೊಳಿಸಲಿಕ್ಕಾಗಿ ಸ್ವಲ್ಪ ಕಾಪಟ್ಯವನ್ನು ತೋರಿಸಿದನು. ಹಾಗೆಯೇ ಧರ್ಮಸಂಸ್ಥಾಪಕನಾದ ಶ್ರೀಕೃಷ್ಣನೂ, ಸೈಂಧವವಧೆ ಮುಂತಾದ ಎಷ್ಟೋ ಸಂದರ್ಭಗಳಲ್ಲಿ ಪ್ರತಿಜ್ಞಾಪೂರ್ಣಕ್ಕಾಗಿ ಸ್ವಲ್ಪಸ್ವಲ್ಪ ಕಪಟವನ್ನು ಆಚರಿಸಿದ್ದಾನೆ. ಹಾಗೆಯೇ ನಮ್ಮ ರಾಯರ ಪ್ರತಿಜ್ಞಾಪೂರ್ಣಕ್ಕಾಗಿ, ಕಟ್ಟಕಡೆಗೆ ನಾವೂ ಸ್ವಲ್ಪ ಕಪಟಾಚರಣೆಯನ್ನು ಆಚರಿಸಬೇಕಾಯಿತು. ಅಷ್ಟೇ ಅಲ್ಲದೆ ನಮ್ಮ ಕಪಟೋಪಾಯದಿಂದ ಇನ್ನೊಂದು ಸತ್ಪರಿಣಾಮವು ರಹಸ್ಯದಲ್ಲಿದೆ. ಅದೇನೆಂದು ಈಗಲೇ ಹೇಳಲಾರೆನು. ಎಲ್ಲವೂ ಇನ್ನು ಸ್ವಲ್ಪಹೊತ್ತಿನಲ್ಲಿಯೇ ತಮ್ಮೆಲ್ಲರ ಕಣ್ಣಿಗೂ ಕಟ್ಟುವ ವಿಚಿತ್ರ ಚಿತ್ರವಾಗಿದೆ. ಈಗ ವಿವಾಹಮುಹೂರ್ತವು ಸಮೀಪಿಸುತ್ತಾ ಬರುತ್ತಿದೆ. ರಾಯನ ಪ್ರತಿಜ್ಞಾಪೂರ್ಣವಾಗುವ ಕಾಲವು ಸನ್ನಿಹಿತವಾಗುತ್ತಾ ಇದೆ. ದುರ್ಭೇದ್ಯವಾದ ಮುದಗಲ್ ವಿಜಯವನ್ನು ಸಂಪಾದಿಸಿಕೊಟ್ಟ ಈ ರೂಪಸಿಂಗನಿಗೆ ಬಹುಮಾನರೂಪವಾಗಿ ತಿರುಮಲಾದೇವಿಯನ್ನು ಪಾಣಿಗ್ರಹಣಮಾಡಿಸುವೆನೆಂದು ರಾಯರು ಅವನಿಗೆ ವಾಗ್ದಾನಮಾಡಿದರು. ವಧುವಿನ ಎರಡು ಕೋರಿಕೆಗಳನ್ನು ರಾಯರು ಮಾನ್ಯಮಾಡಿರುವುದರಿಂದ, ವಧುವೂ ಒಪ್ಪಿಕೊಂಡಿದ್ದಾಳೆ. ಆ ಕೋರಿಕೆಗಳಂತೆ ರಾಮಯಾಮಾತ್ಯರನ್ನು ಬಿಡುಗಡೆಮಾಡಲು ಆಗಲೇ ಆಜ್ಞಾಪತ್ರವು ಹೋಗಿದೆ. ಈ ವಿವಾಹವು ಸಾಂಗವಾಗಿ ನೆರವೇರುತ್ತಲೇ ಪ್ರತಾಪರುದ್ರ ಮಹಾರಾಜರ ಬಿಡುಗಡೆಯೂ ಆಗುವುದು. ಹಾಗೂ, ಪ್ರಿಯ ಉತ್ಕಲಪ್ರಜೆಗಳೇ! ಕರ್ಣಾಟಕ ಬಂಧುಗಳೇ! ನಿಮ್ಮ ಮಹಾರಾಜರ ಅನುಜ್ಞಾನುಸಾರವಾಗಿಯೇ

ಮುಂದಿನ ರಾಜ್ಯವ್ಯವಸ್ಥೆಯಾಗುವುದೆಂದು ತಿಳಿಯಿರಿ. ಇದಕ್ಕೇನೂ ಸಂದೇಹ ವಿಲ್ಲ. ಈಗ ವಿವಾಹವು ಜರುಗಲಿ!'' ಎಂದು ಹೇಳಿ ತಿಮ್ಮರಸನು ವಿರಮಿಸಿ ದನು.

ಸಭಾಸ್ಥಾನವು ಮತ್ತೂ ಸ್ತಬ್ಧವಾಗಿಯೇ ಇರುತಿದ್ದಿತು. ಚಪ್ಪಾಳೆ ಯಾಗಲೀ ಜಯಧ್ವಾನವಾಗಲೀ ಯಾವುದೂ ಕೇಳಬರಲಿಲ್ಲ. 'ಸೂ' ಎಂಬ ಘನವಾದ ನಿಟ್ಟುಸಿರಿನ ಶಬ್ದವು ಮಾತ್ರ ಅಂಬರದಲ್ಲಿ ಹರಡಿಕೊಂಡು ಹೋಗಿ, ಮಹಾನದಿಯ ಸುಯ್‌ದನಿಯೊಡನೆ ಬೆರತು ಕೇಳಬರುತ್ತಿತ್ತು.

ದಕ್ಷಿಣದಬ್ರಾಹ್ಮಣನಾದ ರಾಮಕೃಷ್ಣನ ಪೌರೋಹಿತ್ಯದ ನೇತೃತ್ವದಲ್ಲಿ ಉತ್ತರದ ಬ್ರಾಹ್ಮಣರು ಮಂತ್ರವನ್ನು ಆರಂಭಿಸಿದರು. ಮಂಗಳವಾದ್ಯವೂ ಧ್ವನಿಗೈಯ್ಯತೊಡಗಿತು! ಹೆಚ್ಚೇನು? ಮುಹೂರ್ತಕ್ಕೆ ಸರಿಯಾಗಿ ತಿರುಮಲಾ ದೇವೀ ರೂಪಸಿಂಗರ ವಿವಾಹವು ನಿರ್ವಿಘ್ನವಾಗಿ ನೆರವೇರಿತು.

ಕೃಷ್ಣದೇವರಾಯನ ಘೋರಪ್ರತಿಜ್ಞಾಪೂರ್ಣವೂ ಸಾಂಗವಾಗಿ ನೆರ ವೇರಿತು. 'ಜೈ! ಶ್ರೀಕೃಷ್ಣದೇವರಾಯ ಮಹಾರಾಜಾ' ಎಂಬ ಜಯಾರವ ದಿಂದ ಎಲ್ಲೆಲ್ಲಿಯೂ ವಾತಾವರಣವು ಶಬ್ದಮಯವಾಯಿತು. ಫಿರಂಗಿಯೊಂದು 'ಢಾಂ' ಎಂದು ಪ್ರಚಂಡಧ್ವನಿಯಿಂದ ಗಗನವನ್ನು ಭೇದಿಸಿಕೊಂಡು ಸುರ ಲೋಕಕ್ಕೆ ಈ ಸುದ್ದಿಯನ್ನು ಮುಟ್ಟಿಸಿತು.

## ೫೪

## ಮಿಂಚೋ ಚಿನ್ನಾದೇವಿಯೋ?

ವಿವಾಹವಿಧಿಯೆಲ್ಲವೂ ಮುಗಿಯಿತು. ವಧೂವರರಿಬ್ಬರೂ ಪೀಠದಿಂದ ಎದ್ದುನಿಂತರು. ಆಗ ರೂಪಸಿಂಗನು ರಾಯನ ಮುಖವನ್ನು ನೋಡಿ, "ರಾಜೇಂದ್ರ ಚೂಡಾಮಣೀ! ಈಗ ತಮ್ಮ ಪ್ರತಿಜ್ಞಾಪೂರ್ಣವಾಯಿತ ಲ್ಲವೇ?" ಎಂದನು.

"ಆಯಿತು'' ಎಂದು ರಾಯನು ತಲೆಯೊಲಿದನು.

ರೂಪಸಿಂಗ, "ಇನ್ನು ಈ ತಿರುಮಲಾದೇವಿಯನ್ನು ನನ್ನ ಇಷ್ಟಾನು ಸಾರವಾಗಿ ನಡೆಯಿಸಬಹುದಲ್ಲವೇ?''

ರಾಯನು ಮುಗುಳ್ನಗುತ್ತ, "ಓಹೊ! ಅದನ್ನು ಕೇಳುವುದೇನು?" ಎಂದನು.

"ಸರಿ" ಎಂದು ರೂಪಸಿಂಗನು ನಸುನಗುತ್ತ, ತಿರುಮಲಾದೇವಿಯ ಕೈಯನ್ನು ಹಿಡಿದು, "ತಂಗೀ........" ಎಂದು ಸಂಬೋಧಿಸಿದುದನ್ನು ಕೇಳಿ ತಿಮ್ಮರಸನೊಬ್ಬನು ಹೊರತು, ಉಳಿದವರೆಲ್ಲರೂ ಚಕಿತರಾಗಿಹೋದರು. ರೂಪಸಿಂಗನು, "ಪ್ರಿಯಸಹೋದರೀ! ತಿರುಮಲಾದೇವಿ! ನಿನ್ನ ಮನೋವ ಲ್ಲಭನೇ ನಿನಗೆ ಪತಿಯಾಗಲಿ, ನನ್ನ ಪ್ರಿಯಸಹೋದರೀ!" ಎನ್ನುತ್ತಾ ತಿರುಮಲಾದೇವಿಯನ್ನು ಎರಡು ಕೈಗಳಿಂದಲೂ ಹಿಡಿದು ಬಿಗಿಯಾಗಿ ಆಲಿಂ ಗಿಸಿಕೊಂಡನು.

ಆ ಆಲಿಂಗನ ಸ್ಪರ್ಶದಿಂದ ತಿರುಮಲಾದೇವಿ ಮಿಂಚುಹೊಡೆದಂತೆ ಸ್ತಬ್ಧಳಾಗಿ ಬೆರಗಾಗಿ ಭ್ರಾಂತಳಾಗಿಹೋದಳು. ಆ ವಿಲಕ್ಷಣ ದೃಶ್ಯವನ್ನು ಕಂಡು ರಾಯನೂ, ರಾಮಕೃಷ್ಣನೂ ವಿಸ್ಮಯಾವಿಷ್ಟರಾಗಿ ಹೋದರು. ಮತ್ತುಳಿದೆಲ್ಲರೂ ಬಿಟ್ಟಕಣ್ಣುಬಿಟ್ಟು ಪಿಳಿಪಿಳಿನೋಡುತ್ತಿದ್ದಾರೆ! ರೂಪಸಿಂ ಗನು ತಿರುಮಲಾದೇವಿಯನ್ನು ಬಿಟ್ಟು, ರಾಯನನ್ನು ನೋಡುತ್ತ, ಹಸನ್ಮು ಖದಿಂದ "ರಾಜಭೂಷಣಾ! ಇನ್ನೇನು? ಮನೋಬಂಧನವನ್ನು ಹೊಂದಿಸಲು ಇನ್ನು ಯಾವ ತಡೆಯೂ ಇಲ್ಲ!" ಎಂದನು.

ರೂಪಸಿಂಗನ ಮುಖದಿಂದ ಹೊರಟ ವೀಣಾಮಂಜುಳವಾದ ಆ ಕಂಠ ಸ್ವರವನ್ನು ಕೇಳಿ, ರಾಯನು ದಿಗ್ಭ್ರಾಂತನಾಗಿ ಹೋದನು. ಎಲ್ಲರೂ ಚಿತ್ರದ ಬೊಂಬೆಗಳೇ!

ಎಲೆಲ! ಏನಿದು? ಪ್ರಿಯವಾಚಕರೆ! ಅತ್ತನೋಡಿರಿ! ರೂಪಸಿಂಗನ ಶಿರುವಿಗಾಸೆ ಬಿದ್ದುಹೋಯಿತು! ಶಿರೋಭೂಷಣವು ಕಳಚಿಹೋಯಿತು. ಕೃಷ್ಣಕೇಶರಾಶಿ ದಟ್ಟವಾಗಿ ಬೆನ್ನಿನಮೇಲೆ ಇಳಿಬಿದ್ದುಹೋಗಿದೆ. ಮಧ್ಯದಲ್ಲಿ ಹುಣ್ಣಿಮೆಯಂತೆ ಬೆಳಗುತ್ತಿದೆ ಚಿನ್ನದ ಹೊಳಪಿನ ಚಿನ್ನಾದೇವಿಯ ಮುಖ ಚಂದ್ರ! ರಾಯನ ಹೃದಯದಲ್ಲಿ ಕೆತ್ತಲ್ಪಟ್ಟಿರುವ ಪ್ರೇಮಮೂರ್ತಿಯೇ ಇಂ ದು ಪುನಃ ಪ್ರತ್ಯಕ್ಷವಾಗಿದೆ. ಅವನ ಕಣ್ಣಿಗೆ ಹಬ್ಬವಾಗಿದೆ! ಅವನು ಆನಂದ ಪರವಶನಾಗಿ, ದಡದಡನೆ ಸಿಂಹಾಸನದಿಂದ ಕೆಳಗಿಳಿದು, ರೂಪಸಿಂಗನ—

ಅಲ್ಲಲ್ಲ—ಚಿನ್ನಾದೇವಿಯ ಕೈಯನ್ನು ಹಿಡಿದು, "ಆಃ ಚಿನ್ನಾದೇವಿ! ನೀನಾರು?—ಮಿಂಚೋ—ಚಿನ್ನಾದೇವಿಯೋ? ಚಿನ್ನಾ! ಅಂದೊಮ್ಮೆ ಆ ಗೊಂಡಾರಣ್ಯದಲ್ಲಿ ಗೋಚರಿಸಿ ಮಾಯವಾದ ಚಿನ್ನಾ! ತಿಂಗಳಹಿಂದೆ ಇದೇ ಸ್ಥಾನದಲ್ಲಿ ಪ್ರತ್ಯಕ್ಷಳಾಗಿ ನನ್ನ ಕೊರಳಿಗೆ ಮಾಲೆಹಾಕಲಿಕ್ಕೂ ನಿಂತು, ಮಿಂಚಿನಂತೆ ಮಾಯವಾಗಿಹೋದ ಚಿನ್ನಾ! ಈಗ ಮತ್ತೆ ಮಿಂಚಿನಂತೆ ಇಳಿದೆಯಾ? ಇನ್ನೊಮ್ಮೆ ಮಾಯವಾಗಿ ಹೋಗುವೆಯಾ? ಚಿನ್ನಾ! ನನ್ನ ಹೃದಯದ ರನ್ನಾ! ಇನ್ನು ಹೋಗುವೆಯಾ? ಹೋಗುವೆಯಾ?" ಎಂದು ಕೇಳುತ್ತಾ, ಅವಳ ಕೈಯನ್ನು ಕುಲುಕುತ್ತಾ, ತಾನಿರುವ ಸಭಾಸ್ಥಾನವನ್ನೂ ಮರೆತು—ತನ್ನ ಮುಖವನ್ನು ಅವಳ ಮುಖದ ಸಮೀಪಕ್ಕೆ ಒಯ್ದನು! ಪ್ರೇಮದ ಅಧಿಕಾರವನ್ನು ಮೀರತಕ್ಕವರು ಯಾರು?

ಚಿನ್ನಾದೇವಿ ಹಿಂದಕ್ಕೆ ಸರಿಯುತ್ತ, "ಇಲ್ಲ ಇಲ್ಲ ರಾಜೇಂದ್ರಾ! ಇನ್ನೆಲ್ಲಿಗೂ ಹೋಗುವುದಿಲ್ಲ? ಸ್ವಲ್ಪ ನಿಧಾನಿಸೋಣಾಗಲಿ! ಅಗೋ! ನನ್ನ ಜನನೀ ಜನಕರು!" ಎಂದು ಹೇಳುತ್ತಿರುವಾಗಲೇ ಸಭಾಮಧ್ಯದಿಂದ ವೃದ್ಧಸಂನ್ಯಾಸೀಸಂನ್ಯಾಸಿಯನಿಯರಿಬ್ಬರು ಅಲ್ಲಿಗೆ ಬರಲಾರಂಭಿಸಿದರು. ರಾಯ, ರಾಮಕೃಷ್ಣಾದಿಗಳೆಲ್ಲರೂ ಆಶ್ಚರ್ಯದಿಂದ ನೋಡುತ್ತಿರಲು, ಸಂನ್ಯಾಸಿ ರಾಯನ ಇದಿರಿನಲ್ಲಿ ನಿಂತು, ಶಾಂತಸ್ವರದಿಂದ, "ರಾಜಾಧಿರಾಜಾ! ನಾನು ಯಾರೆಂದು ತಿಳಿಯಿತೇ? ನಿನ್ನನ್ನು ಆ ದಿನ ಗೊಂಡಾರಣ್ಯದಲ್ಲಿ ಮೋಸದಿಂದ ಕೊಲ್ಲಲೆಣಿಸಿದ ಅಧಮ, ವೀರರುದ್ರ ಗಜಪತಿಯೇ ನಾನು. ಇವಳು ನನ್ನ ಪಟ್ಟದ ರಾಣಿಯಾದ ಸುಭದ್ರಾದೇವಿ. ಬಹುಚತುರಮತಿಯಾದ ಈ ಚಿನ್ನಾ ನಮ್ಮಿಬ್ಬರ ಹೊಟ್ಟೆಯ ಮಗಳಾಗಿರುವಳು" ಎಂದು ವೃತ್ತಾಂತವನ್ನೆಲ್ಲಾ ಸಂಕ್ಷೇಪರೂಪದಿಂದ ತಿಳಿಸಿ, "ರಾಜೇಂದ್ರಾ! ಏನೋ ಗ್ರಹಚಾರವಶದಿಂದ ನನ್ನ ಪತ್ನೀಪುತ್ರಿಯರಮೇಲೆ ಪ್ರಾಪ್ತವಾದ ಈ ದುಷ್ಕಳಂಕ ಗ್ರಹಣವು ಇಂದಿಗೆ ಕಳೆದು ಹೋಯಿತು. ನನ್ನ ಈ ಪುತ್ರೀರತ್ನವನ್ನು ನಿನಗೇ ಸಮರ್ಪಿಸಿ, ನಾವು ಸಾರ್ಥಕ ಸಂನ್ಯಾಸಿಗಳಾಗಿ ಹೊರಟುಹೋಗುತ್ತೇವೆ" ಎಂದು ಹೇಳಿದನು. ಕೃಷ್ಣದೇವರಾಯನು ಪ್ರಶ್ನಾರ್ಥಸೂಚಕ ದೃಷ್ಟಿಯಿಂದ ತಿಮ್ಮರಸನ ಮುಖವನ್ನು ನೋಡಿದನು. ಆ ನೋಟದ ಇಂಗಿತವನ್ನರಿತ ತಿಮ್ಮರಸನು ಕಣ್ಣೀರನ್ನು ಸುರಿಸುತ್ತಾ, "ಪ್ರಭೂ! ಇನ್ನೂ ನನ್ನ ಅನುಮತಿಯನ್ನು ಇದಿರುನೋಡುವ ಕಾರ

ಣವೇ ಇಲ್ಲ. ಸುಪವಿತ್ರವಾದ ಗಜಪತಿ ವಂಶಸಂಭೂತೆಯಾದ ಚಿನ್ನಾದೇವಿಯನ್ನು ನಿನ್ನಿಂದ ಅಗಲಿಸಿದುದರ ಫಲವು—ಅಯ್ಯೋ!—ನನ್ನ ಸಹೋದರ ಗೋವಿಂದರಾಜನ ವಿಯೋಗದುಃಖರೂಪವಾಗಿ ನನಗೆ ಎಂದೋ ಸಿಕ್ಕಿಹೋಯಿತು. ಇನ್ನು ಈ ಪ್ರೇಮವಧುವನ್ನು ವರಿಸಲು ಹಿಂದೆಮುಂದೆ ನೋಡುವ ಕಾರಣವಿಲ್ಲ. ಹಾಗೆಯೇ ರಾಜೇಂದ್ರಾ! ನಿನ್ನನ್ನೇ ಪ್ರೇಮಿಸಿರುವ ವಿಜಯ ವಧುವಾದ ಈ ತಿರುಮಲಾದೇವಿಯೂ ನಿನ್ನ ಪಾಲಿನವಳೆಂದೇ ತಿಳಿಯೋಣಾಗಲಿ!'' ಎಂದು ಸಭಾಸ್ಥಾನವನ್ನು ನೋಡುತ್ತ ಕಣ್ಣೀರನ್ನು ಒರೆಸಿ, "ಮಹಾಜನರಿರಾ! ನಾನು ಈಗ ತಾನೇ ಸೂಚಿಸಿದ ರಹಸ್ಯದ ನಿಜಾಂಶವು ಇದೇ ಈಗ ನಿಮ್ಮೆಲ್ಲರ ಕಣ್ಣಮುಂದೆಯೂ ಕಟ್ಟಿರುತ್ತದೆ. ಇಂತಹ ಮಹಾ ಸಂದಿಗ್ಧವಾದ ಸಮಸ್ಯೆಯನ್ನು ಬಿಡಿಸಿ ಸರಿಗೊಳಿಸಿದ ಚಿನ್ನಾದೇವಿಯ ವೇಷ, ನಟನೆ, ಸ್ವರ ಪರಿವರ್ತನೆ........ಮೊದಲಾದ ಯುಕ್ತಿಸಾಧನ ಸಾಮರ್ಥ್ಯಗಳು ಎಷ್ಟೆಂದು ಅಳತೆಮಾಡುವುದೇ ಅಸಾಧ್ಯವಾಗಿದೆ. ಅಂದು ಮುದಗಲ್ ವಿಜಯಸಾಧನೆಯಲ್ಲಿ ತೋರಿಸಿದ ಇವಳ ಸಾಹಸ ಚಾತುರ್ಯವಂತೂ ಎಂತಹ ಪುರುಷರನ್ನಾದರೂ ಬೆರಗುಗೊಳಿಸದೆ ಹೋಗದು! ಇಂತಹ ಅಪ್ರತಿಮ ಚತುರನಾರೀ ಶಿರೋಮಣಿಯೇ ಇನ್ನು ನಮ್ಮ ರಾಯನ ಪಟ್ಟದ ರಾಣಿಯಾಗಿ, ನಮ್ಮೆಲ್ಲರಿಗೂ ಜನನಿಯಾಗಿ ಕಾಪಾಡುವ ಸುಕಾಲವು ಬಂದಿತು. (ಎಲ್ಲರ ಕಣ್ಣಿನಲ್ಲಿಯೂ ಆನಂದಬಾಷ್ಪ.) ವಿಜಯವಧುವಾದ ಜಗನ್ಮೋಹಿನೀ ತಿರುಮಲಾದೇವಿ ರಾಯನ ಪಟ್ಟಾಸನದಮೇಲೆ ಶೋಭಿಸುವ ಸುಕಾಲವು ಪ್ರಾಪ್ತವಾಯಿತು! ಶ್ರೀದೇವಿ, ಭೂದೇವಿ ಸಮೇತನಾದ ರಾಯನು ವಿಷ್ಣುಸ್ವರೂಪನಾಗಿ, "ರಾಜಾ ಪ್ರತ್ಯಕ್ಷದೇವತಾ" ಎಂಬ ವಾಕ್ಯವು ಸಾರ್ಥಕವಾಗುವಂತೆ, ಮೆರೆಯುವ ಸುಕಾಲವು ಸನ್ನಿಹಿತವಾಯಿತು! ಆಹಾಹಾ! ಇಂತಹ ಸುಯೋಗವನ್ನು ಪಡೆದ ಕರ್ಣಾಟಕಾಂಧ್ರೀಯ ಪ್ರಜೆಗಳಿರಾ! ನಿಮ್ಮ ಸೌಭಾಗ್ಯವನ್ನು ಎಷ್ಟೆಂದು ಹೇಳಲಿ? 'ಕರ್ಣಾಟಕಾಂಧ್ರಮಾತೆಯರೇ! ನೀವೆಷ್ಟು ಪುಣ್ಯಾ ಭೂಮಾತೆಯರು!' ಎಂದು ಹಿಗ್ಗಿದನು. ವಿಶಾಲವಾದ ಆ ಸಭಾಪ್ರದೇಶವೆಲ್ಲವೂ ಸಹಸ್ರಸಹಸ್ರ ಕರತಾಳ ಧ್ವನಿಗಳಿಂದಲೂ, ಜಯಜಯಧ್ವಾನಗಳಿಂದಲೂ ಶಬ್ದನಿರ್ಘೋಷಿತ ಪರಮಾನಂದವಾಗಿ ಹೋಯಿತು! ಕರ್ಣಾಟಕಾಂಧ್ರ ಸಹೋದರರೆಲ್ಲರಿಗೂ ಇಂದು ಪರಮಾನಂದ! ಬಳಿಕ ತಿಮ್ಮರಸನು ವೀರ

ರುದ್ರ ಗಜಪತಿಯನ್ನು ಕುರಿತು, “ಗಜಪತಿ ರಾಜಚೂಡಾಮಣೀ! ನಿಮ್ಮ ರಾಜ್ಯಾಧಿಕಾರಕ್ಕೆ ನಿಮ್ಮ ಪುತ್ರನನ್ನೇ ಅಧಿಷ್ಠೀಕರಿಸಬೇಕೆಂದು ನಮ್ಮ ಕೋರಿಕೆ. ತಾವು ನಮ್ಮೊಂದಿಗೆ ವಿದ್ಯಾನಗರಕ್ಕೆ ದಯಮಾಡಿಸಿ, ತಮ್ಮ ಪುತ್ರನನ್ನು ಸಮಾಧಾನಪಡಿಸಿ, ಅವನು ಉದಯಗಿರಿ ರಾಜ್ಯಾಧಿಕಾರವನ್ನು ಕೈಕೊಳ್ಳುವಂತೆ ತಾವೇ ಬೋಧಿಸಬೇಕಾಗಿದೆ. ಮತ್ತೂ, ಪ್ರತಾಪರುದ್ರರಾಜರು ಸಮ್ಮತಿಯನ್ನಿತ್ತರೆ, ಉತ್ಕಲ ರಾಜ್ಯಾಭಿಷೇಕವನ್ನೂ ನಿಮ್ಮ ಪುತ್ರನಿಗೆ ಮಾಡಿಸುವುದೇ ಉಚಿತವಾಗಿದೆ!'' ಎಂದುಹೇಳಿ, ಸೇನಾನಾಯಕನೊಬ್ಬನನ್ನು ಕರೆದು, ಪ್ರತಾಪರುದ್ರನನ್ನು ಮಹಾರಾಜಮರ್ಯಾದೆಯಿಂದ ಕರೆದುಕೊಂಡು ಬರುವಂತೆ ಅಪ್ಪಣೆಕೊಟ್ಟನು.

## ೨೫

## ಕಾಲಾಯತಸ್ಮೈನಮಃ

ತನ್ನನ್ನು ಅಕಸ್ಮಾತ್ತಾಗಿ ಬಂಧವಿಮೋಚನೆಮಾಡಿ ಕರೆದೊಯ್ಯುವುದನ್ನು ಕಂಡು, ಪ್ರತಾಪರುದ್ರನು ಕಟ್ಟೆಚ್ಚರಗೊಂಡನು. ಅವನು ಸಭಾಮಂದಿರಕ್ಕೆ ಕಾಲಿಡುತ್ತಿರಲು, ತಿಮ್ಮರಸನ ಸಂಜ್ಞೆಯಂತೆ, “ಜೈ ಶ್ರೀ ಪ್ರತಾಪರುದ್ರ ಗಜಪತಿ ಮಹಾರಾಜಾ!'' ಎಂದು ದೊಡ್ಡ ಜಯಘೋಷವೆದ್ದಿತು. ಇದನ್ನು ಕೇಳಿದಾಗಲಂತೂ ಅವನ ಆಶ್ಚರ್ಯವು ಇಮ್ಮಡಿಯಾಯಿತು. ಅಷ್ಟರಲ್ಲಿ ಸ್ವಯಂ ತಿಮ್ಮರಸನೇ ಕೆಳಗಿಳಿದು ಬಂದು ಪ್ರತಾಪರುದ್ರನ ಕೈಯನ್ನು ಹಿಡಿದು, ‘‘ದಯಮಾಡಬೇಕು'' ಎಂದು ಉಪಚಾರಪೂರ್ವಕವಾಗಿ ಕರೆದುಕೊಂಡು ವಿವಾಹವೇದಿಕೆಯನ್ನೇರಿ ಒಂದು ಉತ್ತುಂಗಾಸನದ ಬಳಿಗೊಯ್ದು ‘‘ಕೂಡೋಣಾಗಲಿ!” ಎಂದನು.

ಪ್ರತಾಪರುದ್ರನು ಪರಮಾಶ್ಚರ್ಯದಿಂದ ಭ್ರಾಂತನಾದಂತೆ, ತಿಮ್ಮರಸನನ್ನೊಮ್ಮೆ ಆಮೂಲಾಗ್ರವಾಗಿ ದಿಟ್ಟಿಸಿ, ಬಳಿಕೊಮ್ಮೆ ಮಗಳ ಮುಖವನ್ನೂ, ಮತ್ತೊಮ್ಮೆ ಕೃಷ್ಣದೇವರಾಯನನ್ನೂ, ಇನ್ನೊಮ್ಮೆ ಚಿನ್ನಾ, ಸುಭದ್ರಾದೇವಿಯರನ್ನೂ, ಮಗದೊಮ್ಮೆ ವೀರರುದ್ರ ಗಜಪತಿಯನ್ನೂ ನೋಡಿದನು. ವೀರರುದ್ರನನ್ನು ನೋಡುತ್ತಲೇ ಅವನು ಮತ್ತಷ್ಟು ವಿಸ್ಮಯದಿಂದ, “ಅರೆ!

ಅಣ್ಣನೇ! ವೀರರುದ್ರಾ! ನೀನು—ಇಲ್ಲಿ—?'' ಎಂದು ಏನೋ ಪರವಶತೆ ಯಿಂದ ನುಡಿದನು.

ವೀರರುದ್ರನು, ''ತಮ್ಮಾ! ಕುಳಿತುಕೋ! ಸಾವಧಾನದಿಂದ ನಾವು ಹೇಳುವುದನ್ನು ಲಾಲಿಸು'' ಎಂದು ಪ್ರತಾಪರುದ್ರನನ್ನು ಆಲಂಗಿಸಿ, ಆಸನಾ ಸೀನಗೊಳಿಸಿ, ತರುವಾಯ, ತನ್ನ ಹಾಗೂ ಚಿನ್ನಾ ಸುಭದ್ರಾದೇವಿಯರ ವೃತ್ತಾಂತವೆಲ್ಲವನ್ನೂ ತಿಳಿಸಿದನು; ಅದನ್ನು ಕೇಳಿ, ರೋಷದಿಂದ ಪುತ್ರಿ ಯನ್ನು ನೋಡುವ ಪ್ರತಾಪರುದ್ರನನ್ನು ಶಾಂತಗೊಳಿಸುತ್ತಾ ವೀರರುದ್ರನು ಮತ್ತೂ ಹೇಳಿದನು. ''ತಮ್ಮಾ! ಶಾಂತನಾಗು! ನೀನು ಮಹಾ ಪ್ರತಾಪಿ! ಪ್ರತಾಪರುದ್ರನೇ! ಆದರೇನಾಯಿತು! ಕಾಲಮಹಿಮೆಗೆ ಎಂತಹನಾದರೂ ತಲೆಬಾಗಿಸಲೇಬೇಕಾಗುವುದು. ಇದೀಗ ಕೃಷ್ಣದೇವ ರಾಯನೆಂಬ ರಾಜಸೂರ್ಯನಕಾಲ. ನಾವೀಗ ದಿವಾಜ್ಯೋತಿಗಳಂತೆ ತೇಜೋವಿಹೀನರಾಗಲೇಬೇಕಾಗಿದೆ. ಅಲ್ಲದೆ, ನಾವು ಜಾಜ್ವಲ್ಯಮಾನರಾಗಿ ವಿಜೃಂಭಿಸತೊಡಗಿದೆವೆಂದರೆ, ಮೃಗರಾಜನೊಂದಿಗೆ ಹೆಣೆಗಾಡುವ ಗಜರಾಜ ನಿರುವ ಅರಣ್ಯದಂತೆ, ದೇಶವೆಲ್ಲಾ ಮಹಾಕ್ಷೋಭೆಗೀಡಾಗಿ ಹೋಗುವುದು. ಇದಕ್ಕೆ ಸಂದೇಹವಿಲ್ಲ. ಆದುದರಿಂದ ಈಗಣ ಈ ಕಾಲಶಕ್ತಿಗೆ ನಾವು ತಲೆ ಬಾಗಿಸಲೇಬೇಕು. ಶ್ರೀಕೃಷ್ಣದೇವರಾಯನಾದರೋ ಸಾತ್ವಿಕರಾಜನೆಂದು ಪ್ರಜೆಗಳೆಲ್ಲರಿಂದಲೂ ಹೊಗಳಿಸಿಕೊಳ್ಳುತ್ತಿದ್ದಾನೆ. ಈ ಪ್ರಜಾನುರಾಗವೇ ಅವನ ಧಾರ್ಮಿಕತನಕ್ಕೆ ನಿದರ್ಶನವಾಗಿದೆ. ಹಾಗೂ, ಸಹೋದರಾ! ಕಮಲ ಮೂಲದಲ್ಲಿ ಕೆಸರಿರುವಂತೆಯೂ, ಗುಲಾಬಿಯ ಗಿಡದಲ್ಲಿ ಮುಳ್ಳಿರುವಂತೆ ಯೂ, ಸೂರ್ಯನ ಅಂತರಾಳದಲ್ಲಿ ಅಂಧಕಾರವು ಅಡಗಿರುವಂತೆಯೂ, ಈ ರಾಯನ ಕುಲಮೂಲದಲ್ಲಿಯೂ, ಏನೋ ಒಂದಿಷ್ಟು ದೋಷಮಿಶ್ರವಾಗಿ ದ್ದಂತೆ ಕಂಡರೂ ಅದು ಎಷ್ಟುಮಾತ್ರಕ್ಕೂ ಗಣನೀಯವಲ್ಲ. ಪ್ರಕಾಶಮಾನ ವಾದ ಜ್ಯೋತಿಯ ಮೂಲದಲ್ಲಿ ಕತ್ತಲೆ ಇದ್ದರೇನು? ಅದರ ಪ್ರಕಾಶಕ್ಕೇನಾ ದರೂ ಕೊರತೆಯುಂಟೇ? ತಮ್ಮಾ! ಅದಕ್ಕಾಗಿಯೇ ಮಹಾಪುರುಷರ ಮೂಲ ವನ್ನು ನೋಡಬಾರದೆಂದು ಹಿರಿಯರೆನ್ನುವುದು. ಇನ್ನು ನೀನು ಅಲ್ಪವಾದಗೂ ಈ ವಂಶದೋಷವನ್ನು ಮಹತ್ವವಾಗಿ ಎಣಿಸಿ, ಹಠತೊಡುವೆಯಾದರೂ, ಈ ಕಾಲಮಾಹಾತ್ಮೆಗಂತೂ ಕಟ್ಟುಬೀಳಲೇಬೇಕು. ಸಹೋದರಾ! ನಿನ್ನ

ಮಗಳು ಈತನ ಮೋಹಿಸಿ ಬಿಡಲಿಕ್ಕಾದರೂ, ಈ ಕಾಲಮಾಹಾತ್ಮ್ಯವೇ ಕಾರಣವೆಂದು ತಿಳಿ. ಹಿಂದೆ ನಿನ್ನಂತೆಯೇ ಈ ರಾಯನಮೇಲೆ ವೈರಭಾವವನ್ನು ಇಟ್ಟುಕೊಂಡಿದ್ದ ನಾನೂ, ಈಗ ಆ ವೈರತ್ವವೆಲ್ಲವನ್ನೂ "ಕಾಲಾಯ ತಸ್ಮೈ ನಮಃ'' ಎಂದು ಸಂಪೂರ್ಣವಾಗಿ ತೊರೆದುಬಿಟ್ಟಿದ್ದೇನೆ. ಹಾಗೂ, ನನ್ನ ಈ ಪುತ್ರಿಕಾರತ್ನವನ್ನು ಈ ವೀರತೌಳವ ರಾಜಶಿರೋಮಣಿಗೇ ಸಮರ್ಪಿಸಿಬಿಡುವ ನಿಶ್ಚಯಮಾಡಿದ್ದೇನೆ. ಪ್ರಿಯ ಪ್ರತಾಪರುದ್ರಾ! ದೈವಘಟನೆಯಿಂದ ರಾಯನನ್ನು ಮೋಹಿಸಿರುವ ನಿನ್ನ ಮಗಳಿಗೂ ಇನ್ನು ಅವನೇ ತಕ್ಕ ವರನಾಗಿರುವನು. ದೈವಘಟನೆಯನ್ನೂ, ಕಾಲಗತಿಯನ್ನೂ ಮೀರಲು ಯಾರಿಗೂ ಸಾಧ್ಯವಿಲ್ಲ. ಆದುದರಿಂದ ಇನ್ನು ದುರಭಿಮಾನವನ್ನು ತೊರೆದುಬಿಡು. ನಿನ್ನ ಕುಮಾರಿಯ ಕರಪಲ್ಲವವನ್ನು ಕೃಷ್ಣದೇವರಾಜನ ಕರವಲ್ಲಿಡು. ಅಕ್ಕತಂಗಿಯರಿಬ್ಬರೂ ಒಂದೇ ಆಧಾರವೃಕ್ಷವನ್ನು ಹೊಂದಿ ಸುಖವಾಗಿ ಬಾಳಲಿ! 'ಕಾಲಾಯ ತಸ್ಮೈನಮಃ!' ಎಂದು ನುಡಿದನು. ವೀರರುದ್ರನು ಹೇಳಿದ ಈ ದೀರ್ಘೋಪನ್ಯಾಸವು ಚಿತ್ರದ ಬೊಂಬೆಯಂತೆ ಕುಳಿತಿದ್ದ ಪ್ರತಾಪರುದ್ರನ ಕರ್ಣದ್ವಾರ ಮನಸ್ಸಿನೊಳಗೆ ಹೊಕ್ಕಿತು. ಅವನು ಶತ್ರುವಿಗೆ ಎಂದಿಗೂ ತಲೆಬಾಗಿಸಲಾರೆನೆಂದು ಪಣತೊಟ್ಟುಕೊಂಡಿದ್ದನು. ಈಗ ವಿಷವಿಳಿದ ಫಣಿಯಂತೆ ಏನೂ ಮಾಡಲಾರದವನಾಗಿ ಹೋಗಿದ್ದಾನೆ. ತನ್ನ ನಿಧಿಯೆಲ್ಲವೂ—ಸರ್ವಸ್ವವೂ—ಹೆಚ್ಚೇನು! ಅವನ ಪ್ರಾಣದಂತಹ ಪುತ್ರೀರತ್ನವೇ ಕೃಷ್ಣದೇವರಾಯನ ವಶವಾಗಿ ಹೋಗಿದೆ. ಪುತ್ರಿಯ ಮನಸ್ಸೇ ಕೃಷ್ಣದೇವರಾಯನ ಹೃದಯದೊಳಗೆ ಸಿಕ್ಕಿಹೋಗಿದೆ. ಭವಿಷ್ಯವು ಹೇಗಾಗಬೇಕಾಗಿದ್ದಿತೋ ಹಾಗೆಯೇ ಆಯಿತು. ಇನ್ನು ಏಕಾಂಗಿಯಾದ ಆತನಿಂದ ಏನು ಮಾಡಲಿಕ್ಕೂ ಸಾಧ್ಯವಿಲ್ಲ. ಪಾಪ! ನೋಡ ನೋಡುತ್ತಿದ್ದಹಾಗೆ ಅವನ ಕಣ್ಣಿನಲ್ಲಿ ನೀರು ತುಂಬಿಹೋಯಿತು. ಆದರೆ, ಅದು ಪಶ್ಚಾತ್ತಾಪದಿಂದ ತುಂಬಿದ ಕಣ್ಣೀರಲ್ಲ. ತನ್ನ ಪ್ರೀತಿಯ ಪುತ್ರರತ್ನವೇ ಮೊದಲಾದ ಸರ್ವಸ್ವವನ್ನೂ ಕಳೆದುಕೊಳ್ಳಬೇಕಾಯಿತಲ್ಲಾ! ಇದಕ್ಕೆ ಪ್ರತೀಕಾರಮಾಡಲು ತನಗೆ ಸಾಧ್ಯವಿಲ್ಲದೇ ಹೋಯಿತಲ್ಲಾ! ಎಂಬ ಸಂತಾಪದಿಂದ ಹೊರಟುಬಂದ ಅಶ್ರುವದು. ಅವನು, ನೆನೆದ ಕಣ್ಣಿನಿಂದ ಕೂಡಿದ್ದು ಅಧೋವದನೆಯಾಗಿ ನಿಂತಿದ್ದ ತಿರುಮಲಾದೇವಿಯನ್ನು ನೋಡಿ, ನಡುಗುವ ಧ್ವನಿಯಿಂದ, "ಪ್ರಿಯಕುಮಾರಿ! ಮಗಳೇ! ತಿರು....ಮ....ಲ...." ಎಂದು

ಹೇಳುತ್ತಿರುವ ಹಾಗೆಯೇ ತಿರುಮಲಾದೇವಿ ತಂದೆಯ ಕಾಲಬುಡದಲ್ಲಿ ಬಂದು ಕುಳಿತು, ಕಂಪಿತಸ್ವರದಿಂದ, "ಅಪ್ಪಾ! ನೀವು ಹೇಳಿದ ಆ ಸಣ್ಣ ವಿವೇಕ ಸೂಚನೆಯನ್ನು ವಿಾರಿ ಪತ್ರಕಳುಹಿಸಿದುದರಿಂದಲೇ ಈ ರೀತಿಯ ಮಹಾ ದುಷ್ಫಲವು ಸಂಭವಿಸಿತು. ಅಪ್ಪಾ! ನನ್ನನ್ನು ಕ್ಷಮಿ....ಸು" ಎನ್ನುತ್ತಾ, ತಂದೆಯ ಕಾಲಿಗೆ ತಲೆಯನ್ನು ಹಚ್ಚಿಕೊಂಡು, ಗಳಗಳನೆ ಅಳಲಾರಂಭಿಸಿದಳು. ಪ್ರತಾಪರುದ್ರನು ಕಣ್ಣೀರು ತುಂಬಿಕೊಂಡು, ಮಗಳ ತಲೆಯನ್ನು ನೀವುತ್ತಾ ಹೇಳಿದನು, "ನೀನೇನು ಮಾಡಿದಿ ತಾಯೀ! ಎಲ್ಲವೂ ಭವಿಷ್ಯತ್ತಾಕರ್ಷಣ ಶಕ್ತಿ! ಭವಿತವ್ಯವು ವಿಧಿನಿಯಮದಂತೆ ಹೇಗಾಗಬೇಕಾಗಿದ್ದಿತೋ ಹಾಗೆಯೇ ಆಯಿತು!"

ಇಬ್ಬರೂ ಮಹಾನದೀ ಪ್ರವಾಹದಂತೆ ಕಣ್ಣೀರನ್ನು ಧಾರೆಧಾರೆಯಾಗಿ ಹರಿಯುವಂತೆ ಬಿಡುತ್ತಿದ್ದರು.

ತಿರುಮಲಾದೇವಿ, ತಂದೆಯ ಮುಖವನ್ನು ನೋಡುತ್ತಾ, ಮೆಲ್ಲನೆಂದಳು, "ಅಪ್ಪಾ! ನೀವು........ನಿಮ್ಮ........ಅಪ್ಪಾ.... ..."

ಪ್ರತಾಪರುದ್ರನು, "ಏನು ಮಗೂ?" ಎಂದನು.

"ಅಪ್ಪಾ! ನಾನು ಈಗಲೂ ನಿಮ್ಮ ಮಗಳಾಗಿಯೇ ಇದ್ದೇನೆ. ನಿಮ್ಮ ಇಚ್ಛೆಗೆ ವಿರುದ್ಧವಾಗಿ ನಾನು ಎಂದಿಗೂ ನಡೆಯಲಾರೆ. ಅಪ್ಪಾ! ನಿಮ್ಮ ಸೊತ್ತಾದ ನನ್ನನ್ನು ನೀವು ಯಾರಿಗೆ ಸಮರ್ಪಿಸುವಿರೊ, ಅವನೇ ನನಗೆ ಗತಿ" ಎನ್ನುತ್ತಾ ತಿರುಮಲಾದೇವಿ ಇನ್ನಷ್ಟು ಗಟ್ಟಿಯಾಗಿ ಅಳುತ್ತಾ ಧಾರೆ ಧಾರೆಯಾಗಿ ಕಣ್ಣೀರು ಸುರಿಸುತ್ತಿದ್ದಳು. ಪ್ರತಾಪರುದ್ರನು ದುಃಖವನ್ನು ನುಂಗಿ, ಶಾಂತಸ್ವರದಿಂದ, "ಮಗಳೆ! ನಿನ್ನ ಹಣೆಯಲ್ಲಿ ಬರೆದ ಲಿಖಿತವೀಗ ಪ್ರತ್ಯಕ್ಷವಾಗಿ ಕಣ್ಣಿಗೆ ಕಟ್ಟಿರಲು, ಅದನ್ನು ಒರೆಸಲು ಸಾಧ್ಯವುಂಟೆ? ಮಗೂ! ಕನ್ಯೆಯಾದ ನೀನು ನಿನ್ನ ಹೃದಯದಲ್ಲಿ ಯಾವನ ಮೂರ್ತಿ ಕೆತ್ತಲ್ಪಟ್ಟಿರುವುದೆಂದು ಬಾಯಿಬಿಟ್ಟು ನನ್ನ ಮುಂದೆ ಹೇಳಿದೆಯೋ, ಯಾವನಿಗೆ ನೀನು ನಿನ್ನ ನಿಷ್ಕಲ್ಮಷವಾದ ಪ್ರೇಮವನ್ನು ಒಮ್ಮೆ ಸಮರ್ಪಣೆಮಾಡಿಬಿಟ್ಟೆಯೋ, ಅಕಳಂಕವಾದ ನಿನ್ನ ನೇತ್ರದಿಂದ ಯಾವನನ್ನು ಒಮ್ಮೆ ಮೋಹರಸ ಮಿಶ್ರ ದೃಷ್ಟಿಯಿಂದ ನೋಡಿದೆಯೋ, ಆಮೇಲೆ ನೀನು ಅವನವಳಾಗಿಯೇ ಹೋದ

ಹಾಗೆ; ಒಮ್ಮೆ ಒಬ್ಬನಮೇಲೆ ನೆಟ್ಟ ಮನಸ್ಸನ್ನು ಅಲ್ಲಿಂದ ಕಿತ್ತು ಮತ್ತೊಬ್ಬನಮೇಲೆ ನೆಡುವುದೂ, ನೆಡಿಸುವುದೂ ದೋಷವೇ ಸರಿ. ಅಥವಾ ನೆಟ್ಟ ಮನಸ್ಸನ್ನು ಹಿಂದಕ್ಕೆ ತೆಗೆದು ಸ್ವಾಧೀನವಲ್ಲಿಯೇ ಇರಿಸಿಕೊಂಡು ವಿರಕ್ತಳಾಗಿ ಅಡವಿ ಸೇರುವುದಾದರೂ, ಒಮ್ಮೆ ಮೋಹಿಸಿದವನ ರೂಪವು ಆಗಾಗ ಜ್ಞಾಪ್ತಿಗೆ ಬಂದೇಬರುವುದಾದ ಕಾರಣದಿಂದ, ಅಂತಹ ವಿರಕ್ತಿಯೇ ನಿಷ್ಫಲ. ಪರಿಸ್ಥಿತಿ ಇಂತಹದಾದುದರಿಂದ, ಮಗೂ! ಕೇಳು! ನೀನು ಒಮ್ಮೆ ಕಾಮಿಸಿದ ವಸ್ತುವನ್ನು ಭೋಗಿಸಿಯೇ ತೀರಬೇಕು. ಇದನ್ನು ತಪ್ಪಿಸಲು ಎಷ್ಟು ಮಾತ್ರಕ್ಕೂ ಸ್ವಾತಂತ್ರ್ಯವಿಲ್ಲ, ಮಗೂ! ಇದೇ ಈಗ, ಸ್ವಲ್ಪಮೊದಲು, ನೀನು ಕೃಷ್ಣದೇವನನ್ನು ಮೋಹಿಸಿಬಿಟ್ಟೆಯೆಂದು ತಿಳಿದಕೂಡಲೇ, ನನಗೆ ನಿನ್ನಮೇಲೆ ಅತ್ಯಂತ ಕ್ರೋಧೋತ್ಪನ್ನವಾಯಿತು. ಮೋಹಾಭಿಮಾನದಿಂದ —ಹಾಯ್— ನಿನ್ನನ್ನು ಕೊಂದು ಬಿಡಲೆಣಿಸಿದೆನು. ಆದರೆ, ಅಣ್ಣನು ಮಾಡಿದ ಕಾಲೋಚಿತವಾದ **ಬೋಧನೆಯಿಂದ** ಆ ಮೋಹಾಂಧಕಾರವು ಹರಿದು ಹೋಯಿತು. ನಿನ್ನ—ನನ್ನ ವಂಶವೃಕ್ಷದ ಒಂದೇ ಒಂದು ಕೊಂಬೆಯಂತಿರುವ ನಿನ್ನನ್ನು, ಕಡಿದುಹಾಕುವುದು ಮಹಾಪರಾಧವಾಗುವುದೆಂದು ತಿಳಿದೆನು. ಅದು ಭಗವಂತನ ಇಚ್ಛೆಗೆ ವಿರೋಧಮಾಡಿದ ಮಹಾ ಪಾಪ! ಅವನು ಸೃಷ್ಟಿಸಿದ ವಸ್ತುವನ್ನು ಉಳಿಸಲಿಕ್ಕೂ, ಅಳಿಸಲಿಕ್ಕೂ ಅವನೇ ಅಧಿಕಾರಿ. ಅವನೇ ಸೂತ್ರಧಾರಿ. ನಾವು ಅವನ ಕೈಗೊಂಬೆಗಳು, ಮಗಳೆ! ತಿರುಮಲಾ! ವಿಧಾತನು ನಿನ್ನನ್ನು ಕೃಷ್ಣದೇವರಾಯನಿಗೆ ಕೊಟ್ಟುಬಿಟ್ಟನು. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ನಾಣ್ಣುಡಿಯಂತೆ ನೀನೀಗ ಪವಿತ್ರ ತುಳು ವಂಶಕ್ಕೆ ಸೇರಿರುತ್ತೀ! ನೀನಿನ್ನು ಅಲ್ಲಿಯೇ ಸುಸ್ಥಿರಳಾಗಿ ಸೌಭಾಗ್ಯ ಸಂಪತ್ತುಗಳಿಂದ ಕೂಡಿ ಬಾಳಬೇಕು. ಇದೇ ನನ್ನ—ಹಾಗೂ—ಪರಮೇಶ್ವರನ ಆಜ್ಞೆ. ನಾನಿಗೋ—ನಿನ್ನನ್ನು ಕೃಷ್ಣದೇವರಾಯನ ಹಸ್ತದಲ್ಲಿಟ್ಟು, ನನ್ನ ಸಂಪೂರ್ಣ ಉತ್ಕಲದೇಶವನ್ನು ಈತನಿಗೇ ವರದಕ್ಷಿಣೆಯಾಗಿ ಕೊಟ್ಟು, ವನಾಂತರಕ್ಕೆ ತೆರಳಿ ವಿಶ್ರಮಿಸುವೆನು. ಮತ್ತೇನು ಮಾಡಲಿ? ಅಣ್ಣನೆಂದಂತೆ "ಕಾಲಾಯ ತಸ್ಮೈನಮಃ" ಎನ್ನುತ್ತಾ ಎದ್ದು, ಪುತ್ರಿಯ ಹಸ್ತವನ್ನು ಕೃಷ್ಣದೇವರಾಯನ ಹಸ್ತದಲ್ಲಿಟ್ಟು, ಕಣ್ಣೀರನ್ನು ಸುರಿಸುತ್ತಲೇ ಇದ್ದನು.

ಹೇಳುತ್ತಿರುವ ಹಾಗೆಯೇ ತಿರುಮಲಾದೇವಿ ತಂದೆಯ ಕಾಲಬುಡದಲ್ಲಿ ಬಂದು ಕುಳಿತು, ಕಂಪಿತಸ್ವರದಿಂದ, "ಅಪ್ಪಾ! ನೀವು ಹೇಳಿದ ಆ ಸಣ್ಣ ವಿವೇಕ ಸೂಚನೆಯನ್ನು ವಿಾರಿ ಪತ್ರಕಳುಹಿಸಿದುದರಿಂದಲೇ ಈ ರೀತಿಯ ಮಹಾ ದುಷ್ಫಲವು ಸಂಭವಿಸಿತು. ಅಪ್ಪಾ! ನನ್ನನ್ನು ಕ್ಷಮಿ....ಸು" ಎನ್ನುತ್ತಾ, ತಂದೆಯ ಕಾಲಿಗೆ ತಲೆಯನ್ನು ಹಚ್ಚಿಕೊಂಡು, ಗಳಗಳನೆ ಅಳಲಾರಂಭಿಸಿದಳು. ಪ್ರತಾಪರುದ್ರನು ಕಣ್ಣೀರು ತುಂಬಿಕೊಂಡು, ಮಗಳ ತಲೆಯನ್ನು ನೀವುತ್ತಾ ಹೇಳಿದನು, "ನೀನೇನು ಮಾಡಿದಿ ತಾಯೀ! ಎಲ್ಲವೂ ಭವಿಷ್ಯತ್ತಾಕರ್ಷಣ ಶಕ್ತಿ! ಭವಿತವ್ಯವು ವಿಧಿನಿಯಮದಂತೆ ಹೇಗಾಗಬೇಕಾಗಿದ್ದಿತೋ ಹಾಗೆಯೇ ಆಯಿತು!"

ಇಬ್ಬರೂ ಮಹಾನದೀ ಪ್ರವಾಹದಂತೆ ಕಣ್ಣೀರನ್ನು ಧಾರೆಧಾರೆಯಾಗಿ ಹರಿಯುವಂತೆ ಬಿಡುತ್ತಿದ್ದರು.

ತಿರುಮಲಾದೇವಿ, ತಂದೆಯ ಮುಖವನ್ನು ನೋಡುತ್ತಾ, ಮೆಲ್ಲನೆಂದಳು, "ಅಪ್ಪಾ! ನೀವು........ನಿಮ್ಮ........ಅಪ್ಪಾ.... ..."

ಪ್ರತಾಪರುದ್ರನು, "ಏನು ಮಗೂ?" ಎಂದನು.

"ಅಪ್ಪಾ! ನಾನು ಈಗಲೂ ನಿಮ್ಮ ಮಗಳಾಗಿಯೇ ಇದ್ದೇನೆ. ನಿಮ್ಮ ಇಚ್ಛೆಗೆ ವಿರುದ್ಧವಾಗಿ ನಾನು ಎಂದಿಗೂ ನಡೆಯಲಾರೆ. ಅಪ್ಪಾ! ನಿಮ್ಮ ಸೊತ್ತಾದ ನನ್ನನ್ನು ನೀವು ಯಾರಿಗೆ ಸಮರ್ಪಿಸುವಿರೊ, ಅವನೇ ನನಗೆ ಗತಿ" ಎನ್ನುತ್ತಾ ತಿರುಮಲಾದೇವಿ ಇನ್ನಷ್ಟೂ ಗಟ್ಟಿಯಾಗಿ ಅಳುತ್ತಾ ಧಾರೆಧಾರೆಯಾಗಿ ಕಣ್ಣೀರು ಸುರಿಸುತ್ತಿದ್ದಳು. ಪ್ರತಾಪರುದ್ರನು ದುಃಖವನ್ನು ನುಂಗಿ, ಶಾಂತಸ್ವರದಿಂದ, "ಮಗಳೆ! ನಿನ್ನ ಹಣೆಯಲ್ಲಿ ಬರೆದ ಲಿಖಿತವೀಗ ಪ್ರತ್ಯಕ್ಷವಾಗಿ ಕಣ್ಣಿಗೆ ಕಟ್ಟಿರಲು, ಅದನ್ನು ಒರೆಸಲು ಸಾಧ್ಯವುಂಟೆ? ಮಗೂ! ಕನ್ಯೆಯಾದ ನೀನು ನಿನ್ನ ಹೃದಯದಲ್ಲಿ ಯಾವನ ಮೂರ್ತಿ ಕೆತ್ತಲ್ಪಟ್ಟಿರುವುದೆಂದು ಬಾಯಿಬಿಟ್ಟು ನನ್ನ ಮುಂದೆ ಹೇಳಿದೆಯೋ, ಯಾವನಿಗೆ ನೀನು ನಿನ್ನ ನಿಷ್ಕಲ್ಮಷವಾದ ಪ್ರೇಮವನ್ನು ಒಮ್ಮೆ ಸಮರ್ಪಣೆಮಾಡಿಬಿಟ್ಟೆಯೋ, ಅಕಳಂಕವಾದ ನಿನ್ನ ನೇತ್ರದಿಂದ ಯಾವನನ್ನು ಒಮ್ಮೆ ಮೋಹರಸ ಮಿಶ್ರ ದೃಷ್ಟಿಯಿಂದ ನೋಡಿದೆಯೋ, ಆಮೇಲೆ ನೀನು ಅವನವಳಾಗಿಯೇ ಹೋದ

ಹಾಗೆ; ಒಮ್ಮೆ ಒಬ್ಬನಮೇಲೆ ನೆಟ್ಟ ಮನಸ್ಸನ್ನು ಅಲ್ಲಿಂದ ಕಿತ್ತು ಮತ್ತೊಬ್ಬನಮೇಲೆ ನೆಡುವುದೂ, ನೆಡಿಸುವುದೂ ಪೋಷನೇ ಸರಿ. ಅಥವಾ ನೆಟ್ಟ ಮನಸ್ಸನ್ನು ಹಿಂದಕ್ಕೆ ತೆಗೆದು ಸ್ವಾಧೀನವಲ್ಲಿಯೇ ಇರಿಸಿಕೊಂಡು ವಿರಕ್ತಳಾಗಿ ಅಡವಿ ಸೇರುವುದಾದರೂ, ಒಮ್ಮೆ ಮೋಹಿಸಿದವನ ರೂಪವು ಆಗಾಗ ಜ್ಞಾಪ್ತಿಗೆ ಬಂದೇಬರುವುದಾದ ಕಾರಣದಿಂದ, ಅಂತಹ ವಿರಕ್ತಿಯೇ ನಿಷ್ಫಲ. ಪರಿಸ್ಥಿತಿ ಇಂತಹದಾದುದರಿಂದ, ಮಗೂ! ಕೇಳು! ನೀನು ಒಮ್ಮೆ ಕಾಮಿಸಿದ ವಸ್ತುವನ್ನು ಭೋಗಿಸಿಯೇ ತೀರಬೇಕು. ಇದನ್ನು ತಪ್ಪಿಸಲು ಎಷ್ಟು ಮಾತ್ರಕ್ಕೂ ಸ್ವಾತಂತ್ರ್ಯವಿಲ್ಲ, ಮಗೂ! ಇದೇ ಈಗ, ಸ್ವಲ್ಪವೊದಲು, ನೀನು ಕೃಷ್ಣದೇವನನ್ನು ಮೋಹಿಸಿಬಿಟ್ಟೆಯೆಂದು ತಿಳಿದಕೂಡಲೇ, ನನಗೆ ನಿನ್ನಮೇಲೆ ಅತ್ಯಂತ ಕ್ರೋಧೋತ್ಪನ್ನವಾಯಿತು. ಮೋಹಾಭಿಮಾನದಿಂದ —ಹಾಯ್—ನಿನ್ನನ್ನು ಕೊಂದು ಬಿಡಲೆಣಿಸಿದೆನು. ಆದರೆ, ಅಣ್ಣನು ಮಾಡಿದ ಕಾಲೋಚಿತವಾದ ಬೋಧನೆಯಿಂದ ಆ ಮೋಹಾಂಧಕಾರವು ಹರಿದು ಹೋಯಿತು. ನಿನ್ನ—ನನ್ನ ವಂಶವೃಕ್ಷದ ಒಂದೇ ಒಂದು ಕೊಂಬೆಯಂತಿರುವ ನಿನ್ನನ್ನು, ಕಡಿದುಹಾಕುವುದು ಮಹಾಪರಾಧವಾಗುವುದೆಂದು ತಿಳಿದೆನು. ಅದು ಭಗವಂತನ ಇಚ್ಛೆಗೆ ವಿರೋಧವಾಡಿದ ಮಹಾ ಪಾಪ! ಅವನು ಸೃಷ್ಟಿಸಿದ ವಸ್ತುವನ್ನು ಉಳಿಸಲಿಕ್ಕೂ, ಅಳಿಸಲಿಕ್ಕೂ ಅವನೇ ಅಧಿಕಾರಿ. ಅವನೇ ಸೂತ್ರಧಾರಿ. ನಾವು ಅವನ ಕೈಗೊಂಬೆಗಳು, ಮಗಳೆ! ತಿರುಮಲಾ! ವಿಧಾತನು ನಿನ್ನನ್ನು ಕೃಷ್ಣದೇವರಾಯನಿಗೆ ಕೊಟ್ಟುಬಿಟ್ಟನು. "ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ" ಎಂಬ ನಾಣ್ಣುಡಿಯಂತೆ ನೀನೀಗ ಪವಿತ್ರ ತುಳು ವಂಶಕ್ಕೆ ಸೇರಿರುತ್ತೀ! ನೀನಿನ್ನು ಅಲ್ಲಿಯೇ ಸುಸ್ಥಿರಳಾಗಿ ಸೌಭಾಗ್ಯ ಸಂಪತ್ತುಗಳಿಂದ ಕೂಡಿ ಬಾಳಬೇಕು. ಇದೇ ನನ್ನ—ಹಾಗೂ—ಪರಮೇಶ್ವರನ ಆಜ್ಞೆ. ನಾನಿಗೋ—ನಿನ್ನನ್ನು ಕೃಷ್ಣದೇವರಾಯನ ಹಸ್ತದಲ್ಲಿಟ್ಟು, ನನ್ನ ಸಂಪೂರ್ಣ ಉತ್ಕಲದೇಶವನ್ನು ಈತನಿಗೇ ವರದಕ್ಷಿಣೆಯಾಗಿ ಕೊಟ್ಟು, ವನಾಂತರಕ್ಕೆ ತೆರಳಿ ವಿಶ್ರಮಿಸುವೆನು. ಮತ್ತೇನು ಮಾಡಲಿ? ಅಣ್ಣನೆಂದಂತೆ "ಕಾಲಾಯ ತಸ್ಮೈನಮಃ" ಎನ್ನುತ್ತಾ ಎದ್ದು, ಪುತ್ರಿಯ ಹಸ್ತವನ್ನು ಕೃಷ್ಣದೇವರಾಯನ ಹಸ್ತದಲ್ಲಿಟ್ಟು, ಕಣ್ಣೀರನ್ನು ಸುರಿಸುತ್ತಲೇ ಇದ್ದನು.

## ೫೬

# ವಿಜಯ

ಇಲ್ಲಿಗೆ ನಮ್ಮ ಕಥಾನಕವು ಮುಗಿಯಿತು. ಇನ್ನು ರಾಯನು ಕೆಲಕಾಲ ಕಟಕಪುರಿಯಲ್ಲಿಯೇ ಇದ್ದು, ಪ್ರಜೆಗಳ ವಾತ್ಸಲ್ಯವನ್ನು ಸಂಪಾದಿಸಿ, ಹಿಂದಿರುಗಿ ರಾಜಧಾನಿಯನ್ನು ಪ್ರವೇಶಿಸಿ, ಒಂದು ಮಹಾಸಭೆಯನ್ನು ನೆರೆಸಿ, ವಿಜಯಸಮಾರಂಭ ಮಹೋತ್ಸವವನ್ನು ನಡೆಸುತ್ತಾನೆ. ಆ ಸಮಯದಲ್ಲಿ ವೀರರುದ್ರ ಗಜಪತಿಯ ಪುತ್ರನಾದ ವೀರಭದ್ರಕುಮಾರನಿಗೆ ಉದಯಗಿರಿ ರಾಜ್ಯಾಭಿಷೇಕವೂ ಜರುಗುವುದಂತೆ. ಪ್ರಿಯವಾಚಕರೇ! ನಾವು ಆ ವಿಜಯ ಸಮಾರಂಭವನ್ನು ನೋಡುವ ಕುತೂಹಲದಿಂದ ವಿದ್ಯಾನಗರಕ್ಕೆ ಹೋಗುತ್ತೇವೆ. ತಾವೂ ನಮ್ಮೊಂದಿಗೆ ಬರಬಹುದು.

ಚೈತ್ರ ಶುದ್ಧ ಚತುರ್ಥಿಯ ಸುಮುಹೂರ್ತದಲ್ಲಿ ಶ್ರೀಮತ್ಕರ್ಣಾಟ ಕಾಂಧ್ರೀಯ ಸಾಮ್ರಾಟನಾದ ನಮ್ಮ ಕೃಷ್ಣದೇವರಾಯನು ಪ್ರೇಮವಿಜಯ ವಧೂದ್ವಯ ಸಮೇತನಾಗಿ, ವರ್ಣಿಸಲಸದಳವಾದ ವೈಭವದಿಂದ, ವಿದ್ಯಾನಗರ ಮಹಾರಾಜಧಾನಿಯ ಮಹಾದ್ವಾರವನ್ನು ಪ್ರವೇಶಮಾಡಿದನು. ಆಹಾ! ಅಂದಿನ ವಿದ್ಯಾನಗರದ ಮಹಾ ಸಂಭ್ರಮವನ್ನು ವರ್ಣಿಸುವುದೆಂತು? ನಗರಕ್ಕೆ ನಗರವೇ ಆನಂದಸಾಗರದಲ್ಲಿ ಮುಳುಗಿಹೋಗಿದೆ. ನವನವೋಲ್ಲಾಸದಿಂದ ಉಕ್ಕಿ ಉಕ್ಕಿ ಸೂಸುತ್ತಿದೆ. ದೊಡ್ಡ—ಬಹು ದೊಡ್ಡ ಹಬ್ಬ. ಬಾಲ - ವೃದ್ಧ - ತರುಣರೂ - ಪ್ರಜಾಜನರೂ, ಸರ್ವರೂ ನೂತನ ವಸ್ತ್ರಾಲಂಕಾರ ಭೂಷಿತರಾಗಿ ಮೆರೆಯುತ್ತಿದ್ದಾರೆ. ಸುವಿಶಾಲವಾದ ಶುದ್ಧ ಸ್ವಚ್ಛವಾದ ರಾಜವೀಧಿಗಳೆಲ್ಲವೂ ಸೌರಭಪೂರ್ಣವಾಗಿ ಹೋಗಿವೆ. ಆಃ! ಹೆಜ್ಜೆ ಹೆಜ್ಜೆಗೂ ಕಾಣುವ ಆ ತಳಿರು ತೋರಣಗಳೇನು? ಅಲ್ಲಲ್ಲಿಯ ವಿಚಿತ್ರ ವಿಚಿತ್ರವಾದ ಸಿಂಹದ್ವಾರಗಳ ಆ ಗಾಂಭೀರ್ಯಸೌಂದರ್ಯವೇನು? ಗಗನ ಚುಂಬಿತವಾದ ಶ್ವೇತ ಸೌಧಾಗ್ರಗಳಲ್ಲಿ ನಳನಳಿಸಿ ನರ್ತಿಸುವ ಆ ವಿಜಯಪತಾಕೆಗಳ ಬಿಂಕದ ಬೆಡಗೇನು! ಸಂಪೂರ್ಣ ಸುಗಂಧವನ್ನು ಹೊತ್ತುಕೊಂಡು ಸುಯ್ಯನೆ ಸುತ್ತುಮುತ್ತಲೂ ಸುತ್ತಾಡುತ್ತಿರುವ ಆ ವಸಂತಮಾರುತನ ಸುಖೋಪಚಾರವೇನು? ಎಲ್ಲೆಲ್ಲಿಯೂ ಕಣ್ಣನ್ನು ಕೋರೈಸುತ್ತಿರುವ ಆ ಸೌಭಾಗ್ಯವೇನು?

ಏನೆಂದು ಹೇಳೋಣ! ಎಲ್ಲಿ ನೋಡಿದರೂ ವಿಚಿತ್ರಚಿತ್ರ! ಅದ್ಭುತ! ಕಣ್ಮನ ರಂಜನವಾದ ದೃಶ್ಯ! ಹೆಚ್ಚೇನು? ಸ್ಫಟಿಕಸಮಾನವಾಗಿ ಬೆಳಗುವ ಸಾಕ್ಷಾತ್ ಶ್ರೀಕೃಷ್ಣನ ದ್ವಾರಕಾನಗರವೇ ಅದು!

ಆಹ! ಅಗೋ, ನಗರದ ಕೇಂದ್ರಸ್ಥಾನವಲ್ಲಿ ಸುರೇಂದ್ರನ ಸುಧರ್ಮ ಸಭಾಸದನ ಸಮಾನವಾಗಿ ಕಣ್ಸೆಯುವ ಆ ಮಹಾ ಮಂಟಪವಾವುದು? ಓ! ಎಷ್ಟೊಂದು ಝಗಝಗಾಯಮಾನವಾಗಿ ಬೆಳಗುತ್ತಿದೆ! ಓಹೋ! ತಿಳಿಯಿತು. ಹಿಂದೆ ರಾಯನು ದಕ್ಷಿಣದಿಗ್ವಿಜಯದ ಸ್ಮಾರಕಕ್ಕಾಗಿ ಕಟ್ಟಿಸತೊಡಗಿದ ಆ ಅದ್ಭುತವಾದ ವಿಜಯಮಂದಿರವೇ ಅದು. ಅದೀಗ ಈ ಉತ್ತರ ದಿಗ್ವಿಜಯದ ಮಹೋತ್ಸವಕ್ಕೆ ಸರಿಯಾಗಿ ಸಂಪೂರ್ಣವಾಗಿ ಸಿದ್ಧವಾಗಿದೆ. ಓಹೋಹೋ! ಇದೇನು? ಸುರಲೋಕದ ನಿರ್ಮಾಣವೇ? ಅಬ್ಬಾ! ಅಚ್ಚ ಚಿನ್ನದ ಕಂಬಗಳು! ವಜ್ರವೈಢೂರ್ಯದ ಮಾಲೆಗಳು! ಮುತ್ತುರತ್ನದ ಗೊಂಚಲುಗಳು! ಥಳಥಳಿಸುವ ಹಂಡೆಗಳು! ಗೊಂಡೆಗಳು! ಆಹ! ಅತ್ಯಗಾಧವಾದ ಚಿತ್ರಕೆಲಸ! ಅಮೋಘವಾದ ಶೃಂಗಾರ! ಕಣ್ಣೇ ಕೋಳಯಿಸಿಹೋಗುತ್ತಿದೆ. ಪ್ರಿಯವಾಚಕ ಮಹಾಶಯ! ನಿಮಗೆ ಇದೆಲ್ಲವೂ ಅತಿಶಯೋಕ್ತಿಯಾಗಿ ಕಾಣುವುದೇನು? ಆ ವಜ್ರವೈಢೂರ್ಯಾದ್ಯಮೂಲ್ಯ ವಸ್ತುಗಳ ವರ್ಣನೆಯನ್ನು ಕೇಳಿ, ಅವುಗಳನ್ನು ಕಣ್ಣಿನಿಂದ ಕಾಣಲಿಕ್ಕೂ ಅಪೂರ್ವವಾಗಿರುವ ಈ ಕಾಲದ ನಮಗೆ ಅಂತಹುದೆಲ್ಲವೂ ಅತಿಶಯೋಕ್ತಿಯಾಗಿ ತೋರುವುದು ಸಹಜವೇ ಸರಿ. ಆದರೆ ಅಯ್ಯೋ! ಈಗ ಹೊಸಪೇಟೆಯ ಸಂತೆಬೀದಿಯಲ್ಲಿ ರಾಶಿರಾಶಿಯಾಗಿ ಮಾರಲಿಕ್ಕಿಡುವ ಬೇಳೆಕಾಳುಗಳ ರಾಶಿಯಂತೆ, ಮುತ್ತುರತ್ನಾದಿಗಳನ್ನು ರಾಶಿರಾಶಿಯಾಗಿ ಹಾಕಿಕೊಂಡು, ಬಳ್ಳಕೊಳಗಗಳಿಂದ ಅಳೆದು ವ್ಯಾಪಾರಮಾಡುತ್ತಿದ್ದ ವಿದ್ಯಾನಗರದ—ವಿಜಯನಗರದ—ಆ ಕಾಲದಲ್ಲಿ ಅದೇನೂ ಅತಿಶಯೋಕ್ತಿಯಲ್ಲ, ಆಶ್ಚರ್ಯವೂ ಅಲ್ಲ; ಕೇವಲ ಸರ್ವಸಾಮಾನ್ಯವಾದ ವಿಷಯ. ಅದು ಕರ್ಣಾಟಕ ಸಾಮ್ರಾಜ್ಯ ಮಹಾಲಕ್ಷ್ಮಿ, ವೈಭವದ ರಾಶಿಯಲ್ಲಿಯೇ ನೃತ್ಯವಾಡುತ್ತಿದ್ದ ಒಂದು ಅಮೃತಮಯವಾದ ಕಾಲ. ಕನ್ನಡಿಗರೇ! ಕರ್ಣಾಟಕಮಾತೆಯ ಆ ತಾರುಣ್ಯಕಾಲಕ್ಕೂ, ತಿರುಗೋಳಿನ ಜೀವನದ ಈ ವೃದ್ಧಾಪ್ಯದ ಕಾಲಕ್ಕೂ ಇರುವ ಅಂತರವನ್ನು ಅಳತೆಮಾಡುವುದೆಂತರೇನು? ಇಂತಹ ಕಾಲ

ಗತಿಯ ಕರಾಳಮಡುವಿನಲ್ಲಿ ಸಿಕ್ಕಿಬಿದ್ದ ನಮಗೆ ಆ ಕಾಲದ ಆ ವರ್ಣನೆಯನ್ನು ಕೇಳುವಾಗ ಅದ್ಭುತವಾಗಿಯೂ, ಆಶ್ಚರ್ಯಕರವಾಗಿಯೂ, ರೋಮಾಂಚ ಜನಕವಾಗಿಯೂ ತೋರಿದರೆ, ಎಳ್ಳಿನ ಏಳುಭಾಗದಷ್ಟೂ ಆಶ್ಚರ್ಯವಿಲ್ಲ! ಅಂದಿನ ಅಂತಹ ವಿದ್ಯಾನಗರವು ಇಂದು ಹಾಳುಹಂಪೆಯಾಗಿರುವುದನ್ನು ನೋಡಿ, ಹಿಂದಿನ ವೈಭವವನ್ನು ನೆನೆಯಿರಿ. ಇಂದು ಚೈತ್ರಶುದ್ಧ ದಶಮಿ, ದೇವಲೋಕದ ಸುರವೀರರ ಸಭೆಯಂತೆ, ಮಹಾನ್ ಮಹಾನ್ ಕರ್ಣಾಟಕಾಂಧ್ರಾದಿ ವೀರಾಧಿವೀರ ಪರಿವಾರಗಳಿಂದ ಆ ವಿಜಯಮಂದಿರವು ಸುಶೋಭಿತವಾಗಿದೆ. ಸಿಂಹಾಸನದ ಸುತ್ತಲೂ ಅಷ್ಟದಿಗ್ಗಜ ಅಷ್ಟಪ್ರಧಾನಿಗಳು ಮಂಡಿತರಾಗಿದ್ದಾರೆ. ವಿಶಾಲ ಬಹಿರ್ಪ್ರದೇಶವನ್ನಾಕ್ರಮಿಸಿಕೊಂಡು, ಮಹಾಪ್ರಜಾಸಮುದಾಯವು ಕಿಕ್ಕಿರಿದುಹೋಗಿದೆ. ಕರ್ಣಾಪ್ಯಾಯಮಾನವಾದ ವಾದ್ಯಮೃದಂಗಾದಿ ಮಂಗಳಾರವವು ಮೊಳಗುತ್ತಿದೆ.

ಯಥಾಕಾಲದಲ್ಲಿ ರಾಜಾಗಮನ ಸೂಚಕವಾದ ಫಿರಂಗಿಯೊಂದು ಗಗನಮಂಡಲವನ್ನು ಭೇದಿಸಿಕೊಂಡು ಕಟಕಪುರೀ, ಮಂಗಲಾಪುರ, ಕನ್ಯಾಕುಮಾರಿ ಪರ್ಯಂತದವರೆಗೆ ಹೋಗುತ್ತಿದ್ದಂತೆ ಕೇಳಿಸಿತು. ಎಲ್ಲರೂ ಕುತೂಹಲಾಧಿಕ್ಯದಿಂದ ನೋಡನೋಡುತ್ತಿರಲು ವೈತಾಳಿಕರ ಇಂಪಾದ ಬಿರುದಾವಳಿಯ ಪದವು ಕೇಳಿಬರಲಾರಂಭಿಸಿತು.

"ಶ್ರೀಮತ್ಸಮಸ್ತಭುವನಾಶ್ರಯ ದಕ್ಷಿಣಭಾರತಪೃಥ್ವೀವಲ್ಲಭ ಶ್ರೀಮನ್ಮಹಾರಾಜಾಧಿರಾಜ, ರಾಜಪರಮೇಶ್ವರ, ಭಕ್ತಪರಮಭಟ್ಟಾರಕ, ಸತ್ಯಾಪ್ರಿಯ, ವೇದವಾಕ್ಯಪ್ರಮಾಣ ಪಾರಾವಾರ ಪಾರೀಣ, ಶ್ರೀಮನ್ಮಹಾಮಂಡಲೇಶ್ವರ, ಪ್ರತ್ಯರ್ಥಿರಾಜವಿಭಾಡ, ಶ್ರೀ ವಿರೂಪಾಕ್ಷ ಪಾದಪದ್ಮಾರಾಧಕ, ಶ್ರೀ ವೀರಪ್ರತಾಪ, ಆಸೇತುವಿಂಧ್ಯಾದಿಭೂಮಂಡಲೈಕಛತ್ರಾಧಿಪ, ಸಕಲ ವರ್ಣಾಶ್ರಮಾಚಾರ, ಸನಾತನಧರ್ಮಪ್ರತೀಪಾಲಕ, ಸಕಲಕಲಾ ನಿಪುಣ, ಆಂಧ್ರಭೋಜ, ಶ್ರೀಮದ್ವಿದ್ಯಾನಗರ ರಾಜಧಾನೀ ರತ್ನಸಿಂಹಾಸನಾಧೀಶ್ವರ, ಕರ್ನಾಟಕ ರಾಜ್ಯರಮಾರಮಣ, ಶ್ರೀಮನ್ನರಸರಾಜೇಂದ್ರಕುಮಾರ ಶ್ರೀಕೃಷ್ಣದೇವರಾಯ ಮಹಾರಾಜ ಪರಾಕ್—ಪರಾಕ್!" ಎಂದು ವಸ್ತ್ರಾಲಂಕಾರ ವಿಶೇಷದಿಂದಭೂಷಿತರಾದ ವೈತಾಳಿಕರು ಸ್ವರ್ಣದಂಡವನ್ನು ನೆಗಹುತ್ತಾ ಮುಂಭಾಗದಲ್ಲಿ ಬರುತ್ತಿರಲು ಅವರ ಹಿಂದೆ ತಿಮ್ಮರಸು ಮಹಾಮಂತ್ರೀ

ಸ್ವರನೂ ಅವನ ಎಡಬಲಪಕ್ಕಗಳಲ್ಲಿ ಪ್ರತಾಪರುದ್ರ, ಹಾಗೂ ಸಂನ್ಯಾಸೀ ವೇಷದ ವೀರರುದ್ರ ಗಜಪತಿಗಳೂ ಅವರ ಹಿಂದೆ ರಾಜಭೂಷಿತನಾಗಿ ವೀರ ಭದ್ರಕುಮಾರನೂ ನಡೆಯುತ್ತಿರಲು ಅವರ ಹಿಂದೆ ಅಕ್ಕಪಕ್ಕಗಳಲ್ಲಿ ಚಾಮರ ಸೇವೆಯನ್ನು ಕೈಕೊಳ್ಳುತ್ತಾ ಉಭಯಪಾರ್ಶ್ವಗಳಲ್ಲಿ ಚಿನ್ನಾ--ತಿರುಮಲಾ ದೇವಿಯರನ್ನು ಕೂಡಿಕೊಂಡು ಅತ್ಯನರ್ಘ್ಯವಾದ ರಾಜಭೂಷಣ ಸುಶೋಭಿ ತನಾಗಿ ಶ್ವೇತಚ್ಛತ್ರದಿಂದ ಮೆರೆಯುತ್ತಾ, ಕಿರೀಟಧಾರೀ ಶ್ರೀಕೃಷ್ಣದೇವ ರಾಯ ಭೂವಲ್ಲಭನು ಮೃಗರಾಜನಂತೆ ಮಂದಗಾಂಭೀರ್ಯಗಮನದಿಂದ ಆ ಮಹಾಸಭಾಸ್ಥಾನವನ್ನು ಪ್ರವೇಶಮಾಡಿದನು. ಮಹಾಸ್ಥಾನವು ಝುಗ್ಗ ನೆದ್ದು, ಜಯಘೋಷಮಾಡಿತು. ವಾದ್ಯಧ್ವನಿ ಕಿವಿಗಳನ್ನು ಗಡಚಿಕ್ಕಿಸಿತು. ಫಿರಂಗಿಯು ಸಿಡಿಯಿತು. ಆಗ ನಾಮಮಾತ್ರರಿಗೆ ಮುಟ್ಟಲಿಕ್ಕೂ ಕೈಯೋಳದಂ ತಹ ಮಯನಿರ್ಮಿತದಂತೆಸೆವ, ಮಹೋತ್ತುಂಗವಾದ ರತ್ನಖಚಿತಸಿಂಹಾ ಸನವಮೇಲೆ ಮಹಾರಾಯನು ಅಧಿಷ್ಠಿತನಾದನು. ಅವನ ಎಡದಲ್ಲಿ ಪ್ರೇಮವಧುವಾದ ಚಿನ್ನಾದೇವಿಯೂ, ಬಲದಲ್ಲಿ ವಿಜಯವಧುವಾದ ತಿರು ಮಲಾದೇವಿಯೂ ಸಮಲಂಕೃತರಾದರು. ಚಿನ್ನಾದೇವಿಯ ಕಟಿಭಾಗದಲ್ಲಿ ಮಹಾರಾಯನ ಆ ಭುವನೇಶ್ವರೀ ಕರವಾಲವು ಈಗಲೂ ನೇತಾಡುತ್ತಿದ್ದಿತು.

ತರುವಾಯ ಮಂತ್ರಿಗಜಪತ್ಯಾದಿಗಳೆಲ್ಲರೂ, ತಮತಮಗೆ ಯುಕ್ತ ವಾದ ಸ್ವರ್ಣಾಸನಗಳಮೇಲೆ ಮಂಡಿಸಿದರು. ಮಹಾಸಭೆಯೂ ವಿರಮಿಸಿತು.

ಆಹ! ಶ್ರೀದೇವಿ, ಭೂದೇವಿಸಮೇತನಾದ ವಿಷ್ಣುವಿನಂತೆ ಕಂಗೊಳಿ ಸುವ ಆ ಮಹಾರಾಯನನ್ನು ಕಂಡಾಗ, ಪ್ರತಿಯೊಬ್ಬರಿಗೂ "ನಾವಿಷ್ಣುಃ ಪೃಥಿವೀಪತಿಃ" ಎಂಬ ಚಿತ್ರವೇ ಕಣ್ಣಿಗೆ ಕಟ್ಟಿಹೋಯಿತು.

## ಸಂಪೂರ್ಣಂ

## "ಕನ್ನಡ ಚೆನ್ನುಡಿ ಉನ್ನತಿಗೇರಲಿ"